# ಕಸ್ತೂರಿ

ಕನ್ನಡ ಡೈಜೆಸ್ಟ




ವ್ಯವಸ್ಥಾಪಕ ಸಂಪಾದಕ :
ಎಸ್. ಎ. ಪಾಟೀಲ

ಸಹಸಂಪಾದಕ :
ಮಾಧವ ನಾ. ಮಹಿಷಿ

❖❖

ಕಲೆ :
ಕೆ. ಬಿ. ಕುಲಕರ್ಣಿ

❖❖

ಮುಖಪುಟ :
ಬದುಕು ಹೂವಾಗೆ...

❖❖

ಚಿತ್ರ :
ಎಂ. ಎಸ್. ಗೌರೀಶಂಕರ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI Suptember 1984


# ಬೆಳಕಿಂಡಿ

ಚಿತ್ರಗಾರ ಮಾರಲ್ಪಡುವ ಚಿತ್ರಗಳನ್ನಷ್ಟೇ ತೆಗೆಯುತ್ತಾನೆ. ಆದರೆ ಚಿತ್ರಕಲಾವಿದ ತೆಗೆದದ್ದೆಲ್ಲವೂ ಮಾರಲ್ಪಡುತ್ತದೆ. —ಪಾಬ್ಲೊ ಪಿಕಾಸೊ

•

ನಿದ್ರೆಯ ಸುಖವನ್ನಾಗಲಿ ಸಂಪತ್ತಿನಿಂದ ದೊರೆಯುವ ಆನಂದವನ್ನಾಗಲಿ ಆರೋಗ್ಯದಿಂದ ಸಿಗುವ ಉಲ್ಲಾಸವನ್ನಾಗಲಿ ಅವುಗಳಲ್ಲಿ ಕೊಂಚ ಕೊರತೆಯನ್ನು ಕಾಣುವವರೆಗೆ ಯಾರೂ ಅನುಭವಿಸುವುದಿಲ್ಲ. —ಜೀನ್ ಪಾಲ್ ರಿಕ್ಟರ್

•

ಯುವತಿಯೊಬ್ಬಳು ಕಣ್ಣು ಮಿಟುಕಿಸಿದಾಗ ಒಂದೋ ಅವಳ ಕಣ್ಣಲ್ಲಿ ಏನಾದರೂ ಬಿದ್ದಿರುತ್ತದೆ ಇಲ್ಲವೆ ಯಾರಾದರೂ 'ಬಿದ್ದಿರುತ್ತಾರೆ.'

—ಆ್ಯನನ್

•

ಇತರರು ನಿಮ್ಮನ್ನು ಮೆಚ್ಚಬೇಕೆಂದು ಬಯಸುವುದಾದಲ್ಲಿ ಮೊದಲು ನೀವು ಇತರರನ್ನು ಮೆಚ್ಚುವುದನ್ನು ಕಲಿತುಕೊಳ್ಳಿ. —ಗಾಬ್‌ಸನ್

---

## ಚಂದಾದಾರರಿಗೆ ಸೂಚನೆ

"ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

## ಸಹೃದಯ ಚಿಂತನ

**ವಿಚಾರ ಪ್ರಚೋದಕ**

'ಕ್ರೀತೋ ವಯಂ' 'ವಿಜ್ಞಾನ vs ಪರಂಪರೆ' ಯಂತಹ ಒಳ್ಳೆಯ ಲೇಖನಗಳನ್ನೊಳಗೊಂಡ ಆಗಸ್ಟ್ ತಿಂಗಳ 'ಕಸ್ತೂರಿ' ವಿಚಾರ ಪ್ರಚೋದಕ ವಾಗಿದೆ.

'ಕ್ರೀತೋವಯಂ' ದಲ್ಲಿ ನಮ್ಮ ಜೀವನವನ್ನು ಆಕ್ರಮಿಸುತ್ತಿರುವ ವ್ಯಾಪಾರೀ ಮೌಲ್ಯಗಳ ವಿಶ್ಲೇಷಣೆಯಿದೆಯಾದರೆ, 'ವಿಜ್ಞಾನ vs ಪರಂಪರೆ'ಯಲ್ಲಿ ಇಂದಿಗೂ ವೈಜ್ಞಾನಿಕ ಮನೋಭೂಮಿಕೆಯನ್ನು ಬೆಳೆಸಿಕೊಳ್ಳಲಾಗದ ನಮ್ಮ ಯುವ ಪೀಳಿಗೆಯ ಬಗೆಗಿನ ಲೇಖಕರ ಕಳಕಳಿ ತೀರ ಸಮಯೋಚಿತವಾಗಿದೆ.

ಇತ್ತೀಚಿನ ಕೆಲವು ತಿಂಗಳಿನಲ್ಲಿ 'ಕಸ್ತೂರಿ'ಯಲ್ಲಿ ಬರುತ್ತಿದ್ದ ಅರ್ಥವಿಲ್ಲದ, ಸುದೀರ್ಘ ಪುಟ ತುಂಬಿಸುವ ಕತೆಗಳನ್ನೋದಿ ಬೇಜಾರಾದ ಮನಸ್ಸಿಗೆ ಮೇಲಿನ ಲೇಖನಗಳು ಮುದ ತರುತ್ತವೆ.

'ಕಸ್ತೂರಿ'ಯ ಘನತೆಗೆ ತಕ್ಕಂತಹ ನಗೆ ಹನಿಗಳೂ ವ್ಯಂಗ್ಯಚಿತ್ರಗಳೂ ಬರುತ್ತಿಲ್ಲವೆಂಬ ಕೊರತೆಯನ್ನು ಜುಲೈ ತಿಂಗಳಿನಲ್ಲಿ ಕಣ್ತಪ್ಪಿನಿಂದ, ಆಗಸ್ಟ್ ತಿಂಗಳಿನಲ್ಲಿ ಕಂಡುಬಂದ "ಹಲ್ಕಾ ಪತ್ರಕಾರ" ಕೊಂಚಮಟ್ಟಿಗೆ ನೀಗಿಸುತ್ತಾನೆ.

ಮುಂಬಯಿ —ಶ್ರೀನಿವಾಸ ಬಿ. ವೈದ್ಯ

'ಕಸ್ತೂರಿ' ಮಾಸಪತ್ರಿಕೆಯನ್ನು ಕೆಲವು ಪುಸ್ತಕಗಳನ್ನು ಜೀರ್ಣಿಸಿಕೊಂಡು ಓದಬೇಕೆಂಬ ಫ್ರಾನ್ಸಿಸ್ ಬೇಕನ್ನನ ಹೇಳಿಕೆಯಂತೆ ನಿಧಾನವಾಗಿ ದಿನಕ್ಕೆ ೨–೩ ಲೇಖನಗಳಂತೆ ಓದುವ ಅಭ್ಯಾಸ ನನ್ನದು. ಹೀಗಾಗಿ ನಿನ್ನೆ ತಾನೇ "ಇದೆಂಥ ವಿಪರ್ಯಾಸ?" ಎಂಬ ಲೇಖನ ಓದಿದೆ. ನಿಜಕ್ಕೂ ಮನಮುಟ್ಟುವ ಉದಾಹರಣೆಗಳೊಂದಿಗೆ ಬಂದ ಲೇಖನ.

ತುಮಕೂರು —ಸುಮತಿ ಕೃಷ್ಣರಾವ್

ಡಾ. ಸಿ. ಎಸ್. ರಾಮಚಂದ್ರನ್‌ರವರ 'ಕ್ರೀತೋ ವಯಂ...' ಲೇಖನ ಉಪಯುಕ್ತವಾಗಿತ್ತು. ಅಮೇರಿಕದ ಈಗಿನ ಬಹುಪಾಲು ಜನರ ಮಾನಸಿಕ ರೀತಿ ನೀತಿ, ನಡೆ ನುಡಿಯ ಕೃತಕತೆಗೆ ಕನ್ನಡಿ ಹಿಡಿದಂತಿದೆ. ಲೇಖಕರಿಗೆ ಒಂದು ಸಮರ್ಥನೀಯವಾದ ಹಿತವಾದ ಸಮಾಧಾನಯುಕ್ತವಾದ ಮಾತು. ನಿಜವಾಗಿ ಭಾರತದ ಪ್ರಬುದ್ಧ ಸಮಾಜದ ಬೆಲೆಯುಳ್ಳ, ಉತ್ತಮ ಅತಃಕರಣವುಳ್ಳ ಬಹುಪಾಲು ತ್ಯಾಗಮಯಿ ಸ್ನೇಹಜೀವಿಗಳ ನಡುವೆ ಇರುವುದಕ್ಕೆ ಅವರು ಸಂತೋಷ ಪಡಬೇಕು– ಅಮೇರಿಕದ ಪ್ರಚಲಿತ ವ್ಯವಹಾರಯುಕ್ತ ಮಾತನ್ನು ವೈಚಾರಿಕತೆ ಯುಕ್ತಿಸಿದಾಗ!

ಬೆಂಗಳೂರು —ಶ್ರೀನಿವಾಸ ಕೆ. ಎಲ್.

ಧಾಬೋಳಕರರ ಆಕರ್ಷಕ ಮುಖಚಿತ್ರ 'ಗಜಾನನ'(ಆಗಸ್ಟ್ ೮೪)ರಂತೆ 'ಏಕೆ ಈ ಸ್ವಾಯತ್ತತೆಯ ಗಾಳಿ?' 'ಕನ್ನಡಿಗ ಕಂಡ ಅಸ್ಸಾಂ' ಲೇಖನಗಳು ಹಾಗೂ ಖ್ಯಾತ ಲೇಖಕ ವಿಡಂಬನಕಾರ ವಾಡಪ್ಪಿ ಮತ್ತು ರಾಮ ಗಣೇಶ ಗಡಕರೀ ಅವರ ವ್ಯಕ್ತಿಚಿತ್ರಣಗಳು ಮನವನ್ನು ಗೆದ್ದವು.

ಪುಸ್ತಕ ವಿಭಾಗದಲ್ಲಿ 'ಸೋಲಿಗರ ಕ್ಯಾತ' ತನ್ನ ಸಹಜ ಹಾಗೂ ಸೊಗಸಾದ ನಿರೂಪಣೆಯಿಂದ ಸಂಗ್ರಾಹ್ಯವಾಗಿದೆ.

ಗುಲ್ಬರ್ಗಾ —ಮುಕುಂದ ಹೆರಕಲ್ಲ

ತೆರೆಯ ಮರೆಯಲ್ಲಿ ಕುಳಿತು ಸಾಹಿತ್ಯ ಸೇವೆ ಸಲ್ಲಿಸುತಿರುವ ಪ್ರಬಂಧಕಾರ ವಾಡಪ್ಪಿ ಅವರ ಪರಿಚಯಾತ್ಮಕ ಲೇಖನವು ಸ್ಫೂರ್ತಿದಾಯಕ.

ಲಕ್ಷ್ಮೇಶ್ವರ —ಕೆ. ರಮಾ

**ಸೋಲಿಗರ ಕ್ಯಾತ**

ಪುಸ್ತಕ ವಿಭಾಗದಲ್ಲಿ 'ಸೋಲಿಗರ ಕ್ಯಾತ' ಉತ್ಕೃಷ್ಟವಾಗಿದೆ.

ನಮ್ಮ ತಾತನವರಾದ ದಿವಂಗತ ನರಸಿಂಗರಾಯರು ನಲವತ್ತರ ದಶಕದಲ್ಲಿ ಮದ್ರಾಸ್ ಪ್ರಾಂತದ ಕೋಯಮತ್ತೂರು ಜಿಲ್ಲೆಯಲ್ಲಿ ಫಾರೆಸ್ಟ್ ರೇಂಜರ್ ಆಗಿ ಸೇವೆ ಸಲ್ಲಿಸಿದ್ದರು; ತಮ್ಮ ಸೇವಾವಧಿಯಲ್ಲಿ ದಿಂಬಂ, ಸತ್ಯಮಂಗಲ, ಧರ್ಮಪುರಿ, ಕೊಳ್ಳೆಗಾಲದ ಆಸುಪಾಸಿನ ಅಡವಿಗಳಲ್ಲಿ ವಾಸಿಸುತ್ತಿದ್ದ ಆದಿವಾಸಿ ಸೋಲಿಗರ ಮತ್ತು ಇರುಳರ ಹಲವಾರು ವಿಚಿತ್ರ ಸಂಪ್ರದಾಯಗಳ ಬಗ್ಗೆ ಅವರು ಹುಡುಗರಾದ ನಮಗೆ ಹೇಳುತ್ತಿದ್ದುದುಂಟು. ದಿಂಬಂ ಬಳಿ ಹಾವರ ಮಾಡಿದ ಸೋಲಿಗರ ಹೆಣ್ಣೊಬ್ಬಳ ಮೈಗೆ ಯಾವುದೋ ಮರದ ಅಂಟನ್ನು ಸವರಿ ಕೆಂಜುಗವನ್ನು ಮೈಮೇಲೆ ಬಿಟ್ಟ ಪ್ರಸಂಗವೊಂದನ್ನು

ಕೇಳಿದ್ದಾಗ ನಮಗೆ ನೆನಪು. ಬರಗೂರಿನ (ಧರ್ಮಪುರಿ ಜಿಲ್ಲೆ) ಅಡವಿಯಲ್ಲಿ ವಾಸಿಸುವ ಸೋಲಿಗರ ಪಂಗಡವೊಂದು ಸತ್ತ ತಮ್ಮ ಜನರ ಶವಗಳನ್ನು ಹಾಳು ಬಾವಿಯೊಂದರಲ್ಲಿ ಹಾಕುತ್ತಿದ್ದ ವಿಚಿತ್ರ ಪ್ರಸಂಗವನ್ನೂ ಹೇಳಿದ್ದರು. ಆದರೆ ಈ ಆದಿವಾಸಿಗಳ ವಿವಾಹದ ಕಟ್ಟುಪಾಡುಗಳಲ್ಲಿ ಮನಸ್ಸಿಗೆ ಬಂದ ಗಂಡನ್ನು ವರಿಸಲು ಮುಕ್ತ ಅವಕಾಶವಿರುವುದರಿಂದದಾಗಿ ಲೈಂಗಿಕ ಅಪರಾಧಗಳು ಅಪರೂಪ.

ಬೆಂಗಳೂರು —ನಾರಾಯಣರಾವ್

## ಧೈರ್ಯ ಬೇಕು

ಇದು ರಾಜಕಾರಣಿಗಳ ಕೊಡುಗೆ! ಅಗಸ್ಟ್ ಸಂಚಿಕೆಯಲ್ಲಿ ಪ್ರಕಟಗೊಂಡ ಪ್ರೊ. ಜಿ. ಕೆ. ಶೆಣೈರವರ 'ಕನ್ನಡಿಗ ಕಂಡ ಆಸ್ಸಾಂ' ಲೇಖನ ಬಹು ಉಪಯುಕ್ತವಾಗಿದ್ದು. ನಿಜಕ್ಕೂ ಆಸ್ಸಾಂ ಸಮಸ್ಯೆಯನ್ನು ವಸ್ತುನಿಷ್ಠ ಧೋರಣೆಯಿಂದ ವಿವರಿಸಿದೆ. ಡಿ. ಐ. ಜಿ. ಹಿರಣ್ಯಕುಮಾರ ಭಟ್ಟಾಚಾರ್ಯ ಮುಖ್ಯ ಕಾರ್ಯದರ್ಶಿ ಪರಮೇಶ್ವರನ್ನರಿಗೆ ಶಿಕ್ಷೆಯಾದುದು ಖಂಡನೀಯ. ಆಸ್ಸಾಂ ಸಮಸ್ಯೆಗೆ, ದೇಶಹಿತ, ಸ್ವಜನ ಹಿತ ಮರೆತ, ಓಟಿನ ಆಸೆಯ ಭ್ರಷ್ಟ ರಾಜಕಾರಣಿಗಳ ಕೊಡುಗೆಯೇ ದೊಡ್ಡದಾಗಿದೆ! ಅದರೊಂದಿಗೆ ಅನೇಕ ಅಧಿಕಾರಿಗಳು, ದೇಶವಿಭಜನೆಯನ್ನು ಬೆಂಬಲಿಸಿರವರೂ ಕೊಡುಗೆ ನೀಡಿದ್ದಾರೆ. ಲೇಖಕರನ್ನೂ ಕಹಿಯಾದ ಸತ್ಯ ಹೇಳಲು ಧೈರ್ಯ ಬೇಕು ತಾನೇ?

ಕಾನಸೂರು —ಮಂಜುನಾಥ ಹೆಗಡೆ ಹೊನ್ನೇಸರ

'ಕನ್ನಡಿಗ ಕಂಡ ಆಸ್ಸಾಂ' (ಜೂನ್-ಅಗಸ್ಟ್ ಕಸ್ತೂರಿ) ನಿಜಕ್ಕೂ ದೇಶಪ್ರೇಮಿ ಜನತೆಯ 'ನಿದ್ರೆ ಕೆಡಿಸುವ' ಜ್ವಲಂತ ಸಮಸ್ಯೆ. ಇಂತಹ ಜಟಿಲವಾದ ಸಮಸ್ಯೆಯ ಕುರಿತು ತಿಳಿಯಾಗಿ ಸಾಮಾನ್ಯ ಓದುಗರೂ ತಲೆದೂಗುವಂತೆ ಪ್ರೊ. ಜಿ. ಕೆ. ಶೆಣೈ ಬರೆದಿದ್ದಾರೆ. ಆಸ್ಸಾಂ ಆದೋಲನ ನಡೆಯಲಿ ನಡೆಯದಿರಲಿ ಕೇಂದ್ರ ಸರಕಾರ ಸತ್ಯತೆಯನ್ನು ಒಪ್ಪಿಕೊಂಡು ಸ್ಥಳೀಯ ವಿದೇಶಿಯರ ಸಮಸ್ಯೆಯನ್ನು ತೀವ್ರವಾಗಿ ಪರಿಹರಿಸಲೇಬೇಕು. ಸಂದಿನ ಆಸ್ಸಾಂ ತ್ರಿಪುರಾ ಸಮಸ್ಯೆಗಳನ್ನು ಮುಂದೂಡಿಕೊಂಡು ಹೋಗುವುದೆಂದರೆ ಬೆಂಕಿಯ ಉಂಡೆಯನ್ನು ಕಿಸೆಯೊಳಗೆ ಇಟ್ಟುಕೊಂಡು ಮುಂದುವರಿದಂತೆಯೇ. ಮುವತ್ತು ವರ್ಷಗಳಿಂದ ಮುವತ್ತ ಎಂಟು ಲಕ್ಷ ಮಂದಿ ವಿದೇಶಿಯರು ಅಕ್ರಮವಾಗಿ ಬಂಗ್ಲಾದೇಶದಿಂದ ಆಸ್ಸಾಂ ರಾಜ್ಯ ಪ್ರವೇಶಿಸಿರುವುದನ್ನು ಗುರುತಿಸಲಾಗಿದೆ ಎಂದು ತಿಳಿದು ಎದೆ ಬಿರಿಯುವಂತಾಗಿದೆ. ಸರಕಾರ ತನ್ನ ಎಲ್ಲಾ ಕೆಲಸಗಳನ್ನು ಬದಿಗೊತ್ತಿ ಮೊತ್ತ ಮೊದಲು ಈ ಸಮಸ್ಯೆಯತ್ತ ಗಮನಿಸಬೇಕು.

ಬರೋಡಾ —ವಿಷ್ಣು ಹಳೆಯಂಗಡಿ

'ಜಾದೂ' ನನ್ನ ಅತಿ ನೆಚ್ಚಿನ ಲೇಖಕರಲ್ಲೊಬ್ಬರಾದ ಪ್ರೇಮಚಂದರ ಕಥೆ ಪ್ರಕಟಿಸಿದ್ದಕ್ಕಾಗಿ ಧನ್ಯವಾದಗಳು.

ಬೆಳಗಾವಿ —ಆರ್. ಕೆ. ಕುಲಕರ್ಣಿ

## ಮಾನನೀಯ ಕಥೆ

ಶೇಷ ನಾರಾಯಣರ 'ಒಂದು ಗುಡ್ಡದ ಎರಡು ಕಲ್ಲುಗಳು' ಕತೆ ಮನನೀಯವಾಗಿದೆ. ಕಲ್ಲಿನಂತಹ 'ನಿರ್ಜೀವ' ವಸ್ತುಗಳಿಗೂ ಸಹವಾಸದ ಫಲವಾಗಿ ಉಂಟಾಗುವ ಸ್ಥಿತ್ಯಂತರಗಳನ್ನು ಮನೋಜ್ಞವಾಗಿ ಚಿತ್ರಿಸಿರುವ ಕತೆಯ ಸೂಚ್ಯತೆ ಪ್ರಿಯವಾಯಿತು.

'ಶಬ್ದಭಾಂಡಾರ ಬೆಳೆಯಲಿ' ಅಂಕಣದಲ್ಲಿ ಯೋಗಕ್ಷೇಮ, ಪಸಂದು, ದೋಚು ಮುಂತಾದ ಶಬ್ದಗಳನ್ನು ನೋಡಿ ನಗು ಬಂತು. ಬಹುಶಃ ಇನ್ನು ಮುಂದೆ ಈ ಅಂಕಣದಲ್ಲಿ ಅಮ್ಮ ಅಪ್ಪ ಮುಂತಾದ ಶಬ್ದಗಳೂ ಬರಬಹುದೇನೊ!

ಬೆಂಗಳೂರು-೫೦ —ಗ. ವಿಜಯಕುಮಾರ ಅತ್ರಿ

---

## ತಿದ್ದುಪಡಿ

ಅಗಸ್ಟ್ ಸಂಚಿಕೆಯಲ್ಲಿ ಬಂದ 'ಗಣಿತ ವಿಹಾರ' ಲೇಖನದಲ್ಲಿ ಚಿತ್ರ ೪ ಮತ್ತು ೫ ಅದಲುಬದಲಾಗಿವೆ. ಪುಟ ೭೯ರಲ್ಲಿ ಎಡಕಾಲವಿನ್ಯಾಸ ಕೆಳಗಿನಿಂದ ಮೂರನೆಯ ಸಾಲು ಸಡೆದು ಅಲ್ಲಿ ೯೦ ಡಿಗ್ರಿ ಎಡಕ್ಕೆ ತಿರುಗಿ..." ಎಂದಿರಬೇಕು. —ಸಂ.

ಕಸ್ತೂರಿ

ವರ್ಷ: ೨೯ ಸಪ್ಟೆಂಬರ್, ೧೯೮೪ ಸಂಚಿಕೆ: ೧

# ಯೋಗಕ್ಷೇಮಂ ವಹಾಮ್ಯಹಂ

—ಬಸವರಾಜ ಹೂಗಾರ

ಹಿಂದೆ ಕಾಶಿಯಲ್ಲಿ ಮಧುಸೂದನ ಸರಸ್ವತಿ ಎಂಬ ಹೆಸರಿನ ಒಬ್ಬ ವಿದ್ವಾಂಸರಿದ್ದರು. ತಮ್ಮ ಬಡತನದ ಕಷ್ಟಗಳ ಬಗ್ಗೆ ಚಿಂತಿಸದೆ ಸದಾ ಒಳ್ಳೆಯ ಗ್ರಂಥಗಳ ಅಭ್ಯಾಸ, ಚಿಂತನೆ ಮತ್ತು ಕಾವ್ಯ ರಚನೆಯಲ್ಲಿ ಹೆಚ್ಚಿನ ವೇಳೆಯನ್ನು ಕಳೆಯುತ್ತಿದ್ದರು. ಒಮ್ಮೆ ಅವರು ಭಗವದ್ಗೀತೆಗೆ ವ್ಯಾಖ್ಯೆಯನ್ನು ಬರೆಯಬೇಕೆಂದು ನಿಶ್ಚಯಿಸಿ ದಿನಾಲು ಬೆಳಗಿನ ಜಾವದಲ್ಲಿ ಎದ್ದು ಗೀತೆಯಲ್ಲಿನ ಶ್ಲೋಕಗಳಿಗೆ ವ್ಯಾಖ್ಯಾನವನ್ನು ಬರೆಯತೊಡಗಿದರು. ನಿತ್ಯ ಹೀಗೆ ಗೀತೆಗೆ ತಾತ್ಪರ್ಯ ಬರೆಯುತ್ತಾ ಒಂಭತ್ತನೆಯ ಅಧ್ಯಾಯದ ಇಪ್ಪತ್ತೆರಡನೆಯ ಶ್ಲೋಕದಲ್ಲಿ ಬರುವ 'ಯೋಗಕ್ಷೇಮಂ ವಹಾಮ್ಯಹಂ' ಎಂಬುದು ಅವರಿಗೆ ಸರಿಯೆನಿಸಲಿಲ್ಲ. ಶ್ಲೋಕದ ಕೊನೆಯ ಪದವಾದ

"ವಹಾಮ್ಯಹಂ" ಎಂಬುದರ ಅರ್ಥ "ಹೊತ್ತು ಕೊಂಡು ಬಂದು ಕೊಡುತ್ತೇನೆ" ಎಂದಾಗುತ್ತದೆ. ಇದುವರೆಗೂ ಭಗವಂತನು ಯಾವ ಭಕ್ತನ ಮನೆಗೂ ಪ್ರತ್ಯಕ್ಷವಾಗಿ ಸಾಮಾನುಗಳನ್ನು ಹೊತ್ತುಕೊಂಡು ಬಂದು ಕೊಟ್ಟಿಲ್ಲ. ಕೊಡುವು ದಾದರೆ ಅಪ್ರತ್ಯಕ್ಷವಾಗಿ ಕೊಡುತ್ತಾನೆ ಎಂದು ಭಾವಿಸಿ ಆ ಶ್ಲೋಕದಲ್ಲಿಯ ಕೊನೆಯ ಪದದ 'ವಹಾ' ಎಂಬ ಎರಡಕ್ಷರಗಳನ್ನು ತೆಗೆದು ಹಾಕಿ ಅಲ್ಲಿ 'ದದಾ' (ಗುಪ್ತವಾಗಿ ಕೊಡುವುದು) ಎಂಬ ಅಕ್ಷರಗಳನ್ನು ಬರೆದರು. ಆ ವೇಳೆಗಾಗಲೇ ಬೆಳಗಾಗಿದ್ದರಿಂದ ಅವರು ಸ್ನಾನ ಮಾಡಲಿಕ್ಕೆಂದು ಗಂಗಾ ನದಿಗೆ ಹೋದರು.

ಇತ್ತ ಮನೆಯಲ್ಲಿ ಮಧುಸೂದನರ ಪತ್ನಿಯು ಇಂದು ಅಡಿಗೆ ಮಾಡಲು ಯಾವ ಸಾಮಾನೂ ಇಲ್ಲ, ಏನು ಮಾಡಬೇಕು, ಎಂದು ಮನದಲ್ಲಿ ಚಿಂತಿಸುತ್ತಿದ್ದಳು. ಆಗ ಅವರ ಮನೆಯ ಮುಂದೆ ಎಂಟು ವರ್ಷದ ಬಾಲಕ ತಲೆಯ ಮೇಲೆ ಬುಟ್ಟಿಯಲ್ಲಿ ಅನೇಕ ದಿನಸುಗಳನ್ನು ಹೊತ್ತು ಕೊಂಡು ಬಂದು ಅಳುತ್ತಾ ಬಂದು ನಿಂತನು. ಅವನ್ನು ಮಧುಸೂಧನರ ಪತ್ನಿಯು "ಏಕೆ ಅಳುವೆ ಮಗು ನಿನಗೇನಾಗಿದೆ? ಯಾರಾದರೂ ಹೊಡೆದರೆ?" ಎಂದು ಕೇಳಿದಳು. ಆಗ ಆ ಹುಡು ಗನು, "ಇಂದು ನಿಮ್ಮ ಯಜಮಾನರು ಪೇಟೆ ಯಲ್ಲಿ ಈ ಸಾಮಾನುಗಳನ್ನು ಕೊಂಡು ಬುಟ್ಟಿ ಯಲ್ಲಿಟ್ಟು ನನ್ನ ತಲೆಯ ಮೇಲೆ ಹೊರಿಸಿದರು. ನಾನು ಒಲ್ಲೆ ಎಂದಾಗ ಕಪಾಳಕ್ಕೆ ಎರಡೇಟು ಹೊಡೆದರು" ಎಂದು ಹೇಳಿದ. ಈ ಮಾತುಗಳನ್ನು ಕೇಳಿ ಅವಳು ಮನದಲ್ಲಿ ಮರುಗಿದಳು. ಆ ಹುಡುಗನ ಕಪಾಳದ ಮೇಲೆ ಎರಡು ಬಾಸುಂಡೆ ಎದ್ದಿದ್ದವು. "ಅವರು ಬಂದ ಮೇಲೆ ಚೆನ್ನಾಗಿ ಬೈಯುತ್ತೇನೆ, ವಿದ್ಯೆ ಕಲಿತರೂ ಅವರಿಗೆ ಬುದ್ಧಿ ಬರಲಿಲ್ಲ. ಮಗು, ನೀನು ಮನೆಗೆ ಹೋಗು" ಎಂದು ರಮಿಸಿ ಅವನ ಕೈಗೆ ಆತನೇ ತಂದಿದ್ದ ಬೆಲ್ಲವನ್ನು ಕೊಟ್ಟು ಕಳಿಸಿದಳು.

ಮಧುಸೂದನ ಸರಸ್ವತಿಯವರು ಸ್ನಾನ ಮಾಡಿ ಮನೆಗೆ ಬಂದರು. ಆಗ ಅವರ ಪತ್ನಿಯು ಅವರ ಪಾದಕ್ಕೆ ನೀರು ಕೊಟ್ಟು, "ನಿಮಗೆ ಬುದ್ಧಿಯೇ ಇಲ್ಲ. ಪಾಪ, ಆ ಸಣ್ಣ ಹುಡುಗನ ತಲೆಯ ಮೇಲೆ ಭಾರವಾದ ಬುಟ್ಟಿಯನ್ನು ಹೊರಿಸಿದ್ದೇ ಅಲ್ಲದೆ ಅವನ ಕಪಾಳಕ್ಕೆ ಎರಡೇಟು ಕೊಟ್ಟು ಕಳಿಸಿರುವಿರಲ್ಲಾ ಇದೆಂಥಾ ನ್ಯಾಯ?" ಎಂದು ಕೇಳಿದಳು. ಕೂಡಲೆ ಮದುಸೂದನರ ಒಳಗಣ್ಣು ತೆರೆಯಿತು. ತಾವು ಮಾಡಿದ ತಿದ್ದು ಪಡಿಯನ್ನು ತೆಗೆದುಹಾಕಿ ಸರಿಯಾದ ವಾಖ್ಯಾನ ವನ್ನು ಬರೆದರು.



**ಯಾಕೆ ನಲ್ಲೆ ದೂರ ಸರಿದು ಕುಳಿತೆ?**
**ಬಡಿಯಿತೇ ನಿನಗು ಭಜಗೋವಿಂದದ ಕಾಷ್ಠವ್ಯಥೆ?**
**ಬೇಡ ನಿನ್ನಯ ಪ್ರಿಯರಿಂಗು ಚಿಂತೆ;**
**ಎಕ್ಸಲರೇಟರ ಪಾದ ಸಡಿಲಾಗದಂತೆ;**
**ಈ ಹತ್ತು ವರ್ಷದಲ್ಲಿ ಸಾಧಿಸಿಹೆ ನಾನೊಂದು ಯೋಗ-**
**ಅದುವೆ ಪ್ರೇಮಸಂಯೋಗ**

**-ಪಾ. ವೆಂ. ಆಚಾರ್ಯ (ನಲವತ್ತರ ನೆರೆಯಲ್ಲಿ)**

ಶ್ರೇಯಾ ಗ್ರಲಕ್ಷ

ಸಾಂಪ್ರದಾಯಿಕ ಇಲ್ಲವೇ ಅನಿಯತಿಕ-
ಎಮರಾಲ್ಡ್ ಸೂಟಿಂಗ್ಸ್ ಹಾಗೂ ಸ್ಕಾರ್‌ಲೈಟ್ ಶರ್ಟಿಂಗ್ಸ್
ಸುಲಲಿತವಾಗಿ ಹೊಂದಿಕೊಳ್ಳುತ್ತವೆ.
ಮನ ಮೋಹಕ ವಿವಿಧ ಬಣ್ಣಗಳ ವಿನ್ಯಾಸದಿಂದ ವಿವಿಧ ಅಭಿರುಚಿ
ಗಳಿಗಾಗಿ ಅತಿ ಕುಶಲತೆಯಿಂದ ಸಂಯೋಜಿಸಲ್ಪಟ್ಟಿದೆ.



# ದಾವಣಗೆರೆ

**ಹೊಸ ಒಲವಿನ ಗೆಲುವು ಅನುಪಮ... ಅಂದ-ಆಕರ್ಷಣೆಗಳ ಅಮೋಘ ಸಂಗಮ!**

ದಿ. ದಾವಣಗೆರೆ ಕಾಟನ್ ಮಿಲ್ಸ್ ಲಿಮಿಟೆಡ್
ಹನುಮಂತಪ್ಪ ಬಿಲ್ಡಿಂಗ್,
ಚಿತ್ರದುರ್ಗ ರೋಡ್, ದಾವಣಗೆರೆ 577 002

ಶೋ ರೂಮ್:
ಕಾವೇರಿ ಭವನ ಬೆಂಗಳೂರು-560 009.
ದಾಜಿಬಾನ್ ಪೇಟ್, ಹುಬ್ಬಳ್ಳಿ-580 020.
ಚಿತ್ರದುರ್ಗ ರೋಡ್, ದಾವಣಗೆರೆ-577 002.

# ಶ್ರಾವಣವು ಬಂದದ್ದೇ ಗೊತ್ತಾಗಲಿಲ್ಲ !

ಜಿನುಗುತಿದೆ ಜಿನುಗು ಮಳೆ
ಭೂಮಿ ಬೆವೆತಿಲ್ಲ
ಆಸೆಯಲಿ ಹಸಿದ ನೆಲ
ಬಸಿರಾಗಲಿಲ್ಲ.
ಹಸಿರು ಕಾಣಲೆ ಇಲ್ಲ
ಹೀಗಾಗಿ – ಈ ಕವಿಗೆ
ಶ್ರಾವಣವು ಬಂದದ್ದೇ ಗೊತ್ತಾಗಲಿಲ್ಲ.

ನೆನಪಿಗೂ ಬರಲಿಲ್ಲ
ಶ್ರಾವಣದ ಜಾತ್ರೆ.
ಕಸಾಯಿಖಾನೆಗೆ ಬಂತು
ದನಕರುಗಳ ಯಾತ್ರೆ.
ತಿನ್ನಲು ಮೇವಿಲ್ಲ
ಕೆಚ್ಚಲು ಹಾಲಿಲ್ಲ.
ರಕ್ತ ಬತ್ತಿಹುದೆಲ್ಲ.
ಖಂಡ ಮಾಂಸಗಳಿಲ್ಲ

ಇದ್ದಷ್ಟೇ ಮಾಂಸವನು
ಉಂಡದ್ದೇ ಅರಿವಿಲ್ಲ.
ಅಮಲಿನಲಿ ಕೆಲವರಿಗೆ
ಶ್ರಾವಣವು ಬಂದದ್ದೇ ಗೊತ್ತಾಗಲಿಲ್ಲ.

ನಿಟ್ಟುಸಿರು ಜಪಮಂತ್ರ-
ನಿತ್ಯದಲ್ಲೂ ಉಪವಾಸ.
ಎದ್ದು ಕಾಣಲೇ ಇಲ್ಲ
ಶ್ರಾವಣದ ಈ ಮಾಸ.
ಅನ್ನಕ್ಕೂ ಗತಿಯಿಲ್ಲ.
ದುಡಿಯುವುದು ತಪ್ಪಿಲ್ಲ.
ಈ ವೃದ್ಧ ಕಾಲಕ್ಕೂ-
ಇಂಥವರ ಗುರುತಿಲ್ಲ.
ವರುಷದುದ್ದಕ್ಕೂ ಇಂಥ
ಶ್ರಾವಣಕೆ ಕೊನೆಯಿಲ್ಲ.
ಹಾಗೆಂದೇ – ಬಡವರಿಗೆ
ಶ್ರಾವಣವು ಬಂದದ್ದೇ ಗೊತ್ತಾಗಲಿಲ್ಲ.

ಅಪರಾಧವೆಸಗಪೇ
ಜೈಲಿನಲಿ ಕುಳಿತವಗೆ,
ಕುರುಡರಿಗೆ, ಹುಚ್ಚರಿಗೆ
ಕುಡುಕರಿಗೆ, ಪುಂಡರಿಗೆ,
ಕಾಯಕದಿ ಮೈಮರೆತ
ಕಳ್ಳರಿಗೆ, ಭ್ರಷ್ಟರಿಗೆ,
ದೇಶವನೆ ಭಕ್ಷಿಸುವ
ಈ ಶಿಷ್ಟ ದುಷ್ಟರಿಗೆ.
ಕಾಲವನೆ ಮರೆತಂಥ
ಇಂಥವರು, ಅಂಥವರು
ಇನ್ನೇಸು ಜನರಿಗೋ
ಶ್ರಾವಣವು ಬಂದದ್ದೇ ಗೊತ್ತಾಗಲಿಲ್ಲ!

–ಸಿದ್ಧರಾಜ ಪೂಜಾರಿ

ಕಳೆದ ವರ್ಷ 'ಕಸ್ತೂರಿ'ಯ ಒಂದು ಸಂಚಿಕೆಯಲ್ಲಿ 'ಭಗ-ಭಗವಾನ್' ಶಬ್ದಗಳ ಅರ್ಥದ ಮರ್ಮವನ್ನು ಕುರಿತು ನನ್ನದೇ ಒಂದು ಊಹೆಯನ್ನು ವ್ಯಕ್ತಪಡಿಸಿದ್ದೆ. ಅದರ ಸಾರಾಂಶ ಹೀಗೆ:

"'ಭಗ' ಶಬ್ದ 'ಯೋನಿ' ಎಂಬ ಅರ್ಥದಲ್ಲಿ ಪ್ರಯುಕ್ತವಾಗುತ್ತಿದ್ದುದು ಕಾಲಕ್ರಮೇಣ. ಮೂಲತಃ 'ಭಗ'ವು ಬೆಂಕಿಯ ಜ್ವಾಲೆಯ ಲಕ್ಷಣವನ್ನು ಸೂಚಿಸುವ ಶಬ್ದವಿದ್ದಿರಬೇಕು. ಭಗ-ಭಗ ಉರಿ, ಭಗ್ಗನೆ ಬೆಂಕಿ ಹೊತ್ತಿಕೊಳ್ಳು ಇತ್ಯಾದಿ ಪದಪ್ರಯೋಗಗಳಲ್ಲಿ ಇಂದಿಗೂ ಈ ಭಾವವೇ ಸ್ಫುಟವಾಗುತ್ತದೆ. ಅಲ್ಲದೆ ಬೆಂಕಿಯ ಬಣ್ಣದ 'ಭಗವಾ' ಝಂಡಾ, ಸಂನ್ಯಾಸಿಗಳ ಕಾವೀಶಾಟಿ ಇವೆಲ್ಲ ಉದಾಹರಣೆಗಳಿಂದ 'ಭಗ' ಅಗ್ನಿ ವರ್ಣಕ್ಕೆ ವಾಚಕವಿರಬೇಕೆಂದು ಸೂಚಿಸಿದ್ದೆ. ಯಜ್ಞಕುಂಡ ವೇದಿ, ಯೋನಿ ಇವೆಲ್ಲ ಅದೇ ಉರಿಗೂಂಡಿಸುವು (ಭಗಂದರದಂತೆ). ಅದ್ದರಿಂದ ಮುಂದೆ 'ಭಗ' ಯೋನಿಗೆ ಪರ್ಯಾಯ ನಾಮವಾಗಿ ಬಳಕೆಯಲ್ಲಿ ಬಂದಿರಬೇಕು."

# "ಭಗ ಅರ್ಕಃ"



ಗೌರೀಶ ಕಾಯ್ಕಿಣಿ

ಇದೀಗ ನನ್ನ ಈ ಪ್ರತಿಪಾದನೆಗೆ ಅನಿರೀಕ್ಷಿತವಾಗಿ ಪುರಾತತ್ವ ಸಂಶೋಧನೆಯ ಕ್ಷೇತ್ರದಿಂದ ಸಣ್ಣ ಸಮರ್ಥನೆ ಸಿಕ್ಕಂತೆ ಅನಿಸಿದೆ. ಆ ಕುರಿತೇ ಈ ಸಣ್ಣ ಟಿಪ್ಪಣಿ.

ಕಳೆದ ಜೂನ್ ೨೭ಕ್ಕೆ ನಮ್ಮ ಪ್ರಖ್ಯಾತ ಪುರಾತತ್ತ್ವ ವಿಶಾರದರಾದ ಡಾ. ಎಸ್. ಆರ್ ರಾವ್ ಅವರು ಬೆಂಗಳೂರಿನಲ್ಲಿ ಯುಎನ್ಐ ಸುದ್ದಿ ಸಂಸ್ಥೆಗೆ ಒಂದು ಹೇಳಿಕೆ ಇತ್ತದ್ದು ಪ್ರಕಟವಾಗಿದೆ. ಮೊಹೆಂಜೋದರೋ-ಸಿಂಧ ಸಂಸ್ಕೃತಿಯು ಇಂಡೋ-ಇರಾನಿಯನ್ ಮೂಲದ್ದು ಎಂಬುದನ್ನು ವಿವರಿಸುತ್ತ ಡಾ. ರಾವ್ ಕೆಲವು ವಿವರಗಳನ್ನು ಉದಾಹರಿಸಿದರು. ಅದರಲ್ಲಿ 'ಭಗ'ದ ಬಗೆಗೆ ಅಡ್ಡ ಬೆಳಕು ಚೆಲ್ಲುವ ಒಂದು ದಾಖಲೆ ನನ್ನ ಗಮನವನ್ನು ಸೆಳೆಯಿತು.

ಫಾರಸಿಗಳ ಪ್ರಾಚೀನ ಧರ್ಮಗ್ರಂಥ 'ಅವೆಸ್ತಾ' ನಮಗೆ ವೇದಗಳಿದ್ದಂತೆ. 'ಅವೆಸ್ತಾ'ದಲ್ಲಿಯೂ ಹರಪ್ಪಾದಲ್ಲಿ ದೊರೆತ ಮುದ್ರೆಗಳಲ್ಲಿಯೂ 'ಅತ್' 'ಅಥರ್'* ಎಂಬ ಶಬ್ದಗಳು ಕಾಣಸಿಕೊಳ್ಳುತ್ತವೆ. ಮತ್ತು ಅವು ಅಲ್ಲಿ ಬೆಂಕಿಗೆ ಪರ್ಯಾಯವಾಗಿ ಬಂದಿವೆ. 'ಅಥರ್ವ'ವೆಂಬ ವೈದಿಕ ಶಬ್ದವೂ ಅದೇ ಮೂಲದ್ದು. ಆದರೆ ನಮ್ಮಲ್ಲಿಯ ವೈದಿಕ ವಿದ್ವಾಂಸರು ತಮ್ಮದೇ ನಿರುಕ್ತ ಆಧಾರದಿಂದ 'ಅಥರ್ವ'ವನ್ನು ಅತ್+ಅರ್ವ ಎಂಬ ಶಬ್ದದಿಂದ ನಿಷ್ಪನ್ನವೆಂದು ಸಾಧಿಸುತ್ತಾರೆ. ಅರ್ವ ಅಂದರೆ ಕುದುರೆ, ('ಅರಬ' ಸ್ಥಾನಕುದುರೆಗಳ ಉತ್ತಮ ತಳಿಗಾಗಿ ಪ್ರಸಿದ್ಧ. ಆದರೆ ಕನ್ನಡದಲ್ಲಿ ಮಾತ್ರ ಅರಬು ಅಂದರೆ ನೀರಿಲ್ಲದ ಅವಸ್ಥೆ ಎಂಬ ಅರ್ಥವನ್ನು ಕೊಡುತ್ತ ಬಂದಿದೆ!) ಇರಲಿ.

ಡಾ. ರಾವ್ ಅವರ ಅಂಬೋಣವೆಂದರೆ ಹರಪ್ಪಾದಲ್ಲಿ ದೊರೆತ ಒಂದು ಮುದ್ರೆಯಲ್ಲಿ ಅಗ್ನಿವೇದಿಕೆಯ ಚಿತ್ರ ಕೊರೆದಿದ್ದು ಅದರೊಂದಿಗೆ ಇದ್ದ ಲಿಪಿ: "ಪಗ-ಭಗ-ಅರ್ಕ:" ಇದನ್ನು ಡಾ. ರಾವ್, ಪ್ರಚಂಡ ದೇವರ ಮುದ್ರೆ (The seal of the mighty God) ಎಂದು

---

* ಗ್ರೀಕಿನಲ್ಲಿಯೂ ಲ್ಯಾಟಿನ್ನಿನಲ್ಲಿಯೂ ಅಥೈರೋಸ್ ಎಂದರೆ ಉರಿ, ಬೆಂಕಿ ಹೊತ್ತಿಕೋ ಎಂದರ್ಥ. ಪ್ರಯೋಗಾಲಯದಲ್ಲಿ ಬಳಸಲ್ಪಡುವ ಈಥರ್ ಕೂಡ ಸುಲಭವಾಗಿ ಪ್ರಜ್ವಲಿಸುವಂತಹದೇ. ಈ ಶಬ್ದವೂ ಗ್ರೀಕ್, ಲ್ಯಾಟಿನ್ನುಗಳಿಂದಲೇ ಬಂದಿರಬೇಕು.

ಅನುವಾದಿಸಿದ್ದಾರೆ. ಈ 'ಅರ್ಕ' ಯಾವ ದೇವರು? ಸೂರ್ಯನೇ? ಅಗ್ನಿಯೇ? (ಅರ್ಕ=ಅರ್ವ?)

ಇನ್ನೊಂದು ಅಂಥ ಮುದ್ರೆ ಇದಕ್ಕೆ ಮಹತ್ವದ ಅರ್ಥವನ್ನು ತುಂಬುತ್ತದೆ. ಅದರಲ್ಲಿ 'ಅರ್ಕ'ನ ಆಕೃತಿಯನ್ನು ಚಿತ್ರಿಸಿದೆ–ತಲೆಗೆ ಕೋಡುಳ್ಳ, ಮುಕುಟ ತೊಟ್ಟ ಈ ದೇವತೆ ಬೆಂಕಿಯ ಜ್ವಾಲೆಯ ಕಮಾನಿನ ಕೆಳಗೆ ನಿಂತಿದೆ ಅದರ ಜೊತೆಗೂ 'ಭಗ ಅರ್ಕಃ' ಎಂಬ ಲಿಪಿ ಇದೆ.

ಇತರ ಮುದ್ರೆಗಳಲ್ಲಿ ಅಥರ್ ಮತ್ತು 'ಅತ್' ಶಬ್ದಗಳು ಬೆಂಕಿಯನ್ನೇ ಸೂಚಿಸುತ್ತವೆ ಅನ್ನುತ್ತಾರೆ ಡಾ. ರಾವ್. ಏಕಶೃಂಗದ ಪ್ರಾಣಿಗಳು ಅಗ್ನಿ ವೇದಿಕೆಯ ಜತೆಗೆ ಬಹು ಸಂಖ್ಯೆ ಮುದ್ರೆಗಳಲ್ಲಿ ಕಂಡುಬರುತ್ತವೆ. ಇವು ಸ್ಪಷ್ಟ ಪಡಿಸುವುದೇನೆಂದರೆ ಖಡ್ಗಮೃಗ, ಕಾಡುಕೋಣ, ಆನೆ, ಹೋರಿ ಮುಂತಾದ ಉಗ್ರ ಬಲಿಷ್ಠ ಪಶುಗಳನ್ನು ಪೂಜಿಸುವ ಚಿತ್ರಗಳುಳ್ಳ ಮುದ್ರೆಗಳಿಗಿಂತ ಈ ಅಗ್ನಿಪೂಜೆಯ ಚಿತ್ರ, ಮುದ್ರೆಗಳ ಸಂಖ್ಯೆಯೇ ಮಿಗಿಲಾಗಿದೆ.

ಮೊಹೆಂಜೊದರೋದಲ್ಲಿ ಸಿಕ್ಕ 'ಪಶು–ಪತಿ' ಚಿತ್ರ ಕೊರೆದ ಮುದ್ರೆಯಲ್ಲಿಯೂ ಈ ಅಗ್ನಿ ದೇವತೆಯ ಪಾರಮ್ಯ ಸ್ಪಷ್ಟ. ಅಲ್ಲಿ ಈ ದೇವತೆಯನ್ನು ಅಗ್ನಿ, ಸೂರ್ಯ ಹಾಗೂ ಮಿಂಚು ಈ ಮೂರು ರೂಪಗಳಲ್ಲಿ ಚಿತ್ರಿಸಲಾಗಿದೆ ಎಂದು ಡಾ. ರಾವ್ ತಿಳಿಸುತ್ತಾರೆ.(ಮುಂದೆ ಅಗ್ನಿನಾರಾಯಣ, ಸೂರ್ಯನಾರಾಯಣ ಎಂಬ ನಾಮರೂಪಗಳು ರೂಢಿಯಲ್ಲಿ ಬಂದದ್ದು ಈ ಅಗ್ನಿಮೂಲದ ಪ್ರಾಚೀನ ಪ್ರಜ್ಞೆಯದೇ ಫಲಿತ. ಕಶ್ಮೀರೀ ಭಾಷೆಯಲ್ಲಿ 'ನಾರ' ಅಂದರೆ ಬೆಂಕಿ ಎಂದು ಓದಿದ ನೆನಪು, ಆದರೆ ನಾರ=ಅಪ ನೀರು ಎಂಬುದು ಮಹಾಭಾರತದಿಂದಲೂ ಪ್ರಸಿದ್ಧ.)

'ಭಗ' ಶಬ್ದವನ್ನು ಡಾ. ರಾವ್ Mighty ಎಂದು ಅರ್ಥೈಸಿದ್ದರೂ ಅದು ಅಗ್ನಿ–ಸೂರ್ಯರಿಗೆ ಸಂಬಂಧಪಟ್ಟ ದೀಪ್ತಿಯದೇ ದ್ಯೋತಕ. ಹರಪ್ಪಾ ಪರ್ಶಿಯಗಳ ಪುರಾತನ ಸಂಸ್ಕೃತಿಗಳ ಭಾಷೆ, ಧರ್ಮ ಪುರಾಣ ಪರಿಕಲ್ಪನೆಗಳಲ್ಲಿಯ ಈ ಸಾಮ್ಯ ಕ್ರಿಸ್ತಪೂರ್ವ ೨೫೦೦–೧೫೦೦ವರ್ಷಗಳ ಕಾಲಖಂಡದ್ದು. ಇವನ್ನು ಡಾ. ರಾವ್ ಈ ಸೈಂಧವ ಸಂಸ್ಕೃತಿಯ ೧೮೦೦ ಮುದ್ರೆಗಳನ್ನು ಅಭ್ಯಸಿಸಿ ಅವುಗಳ ಚಿತ್ರಲಿಪಿಯನ್ನೂ ಪ್ರಪ್ರಥಮವಾಗಿ ಗುರುತಿಸಿ ಅರ್ಥೈಸುವವರಲ್ಲಿ ಯಶಸ್ವಿಯಾಗಿದ್ದಾರೆ. ೧೯೩೦–೩೧ರ ಅವಧಿಯಲ್ಲಿ ಈ ಚಿತ್ರಲಿಪಿಯನ್ನು ಪ್ರಾಗೈತಿಹಾಸ ಸಂಶೋಧಕರಾದ ಫಾದರ್ ಹೆರಾಸರು ದ್ರಾವಿಡ ಭಾಷೆಗಳಲ್ಲಿನ 'ಮೀನ' 'ಕಣ್ಣು' 'ಮರ' 'ಕೈ' 'ಕಾಲು' ಇಂಥ ಶಬ್ದಗಳನ್ನು ಹೇಗೋ ಗುರುತಿಸಿ ಸ್ವಕಪೋಲಕಲ್ಪಿತ ಪರಿ ಭಾಷೆಯಿಂದ ಈ ಮುದ್ರೆಗಳ ಲಿಖಿತಗಳ ಅರ್ಥವನ್ನು ಪಚ್ಚಿದ್ದರು.ಅದೀಗ ಪ್ರಮಾಣವಾಗಿಲ್ಲ ವೆಂದು ಶ್ರೀಮತಿ ದುರ್ಗಾ ಭಾಗವತರು ಒಂದು ಪ್ರಬಂಧದಲ್ಲಿ ನಮೂದಿಸಿದ್ದುಂಟು. ಇರಲಿ.

ಹರಪ್ಪಾ–ಮೊಹೆಂಜೋದರೋ ಸಂಸ್ಕೃತಿಯಲ್ಲಿ ಪರ್ಶಿಯಾ(ಇರಾಣ)ದಲ್ಲಿಯಂತೆ ಅಗ್ನಿಪೂಜೆ ಪ್ರಚಲಿತವಿತ್ತೆಂದು ಇನ್ನೂ ಹಲವಾರು ಪದ ಪ್ರಯೋಗಗಳ ಪ್ರಮಾಣಗಳಿಂದ ಡಾ. ರಾವ್ ಪ್ರತಿಪಾದಿಸಿದ್ದಾರೆ. ಆದರೆ ಅದೆಲ್ಲ ನನಗೆ ಇಲ್ಲಿ ಪ್ರಸ್ತುತವಲ್ಲ.

ಈ ವೇದಪೂರ್ವಕಾಲದ ಸಂಸ್ಕೃತಿಯಲ್ಲಿ ಅಗ್ನಿಯನ್ನು 'ಭಗ–ಅರ್ಕಃ' ವೆಂದು ಕರೆದದ್ದು 'ಭಗ'ಕ್ಕೂ 'ಅಗ್ನಿ'ಗೂ ಇರುವ ಸಂಬಂಧವನ್ನು ಸೂಚಿಸುತ್ತದೆ. ಗಾಯಿತ್ರೀಮಂತ್ರದಲ್ಲಿ ಉಕ್ತವಾದ 'ಹಿರಣ್ಯ ಗರ್ಭ ಸವಿತೃ'ವಿನ ವರೇಣ್ಯ 'ಭರ್ಗ'ವೂ ಇದೇ 'ಭಗ' ಸೂಚಕವಾದ ಪರಿಷ್ಕೃತ ಶಬ್ದವಿರಬಹುದೇ? ಆದಿಯಲ್ಲಿ ಒಂದೇ ಮೂಲವಿದ್ದ ಇಂಡೋ–ಇರಾಣಿಯನ್ ಜನಾಂಗ ಮುಂದೆ ಋಗ್ವೇದ ಕಾಲದ ಸುಮಾರಿಗೆ ಬೇರೆಯಾಗಿ ಸೈಂಧವ ಸಂಸ್ಕೃತಿಯ ಭಾಷೆ ಹೆಚ್ಚು ಸಂಸ್ಕೃತೀಕರಣ (ಸಂಸ್ಕರಣ) ಹೊಂದಿದಾಗ ಭಗ–ಭರ್ಗವಾಗಿರಬೇಕು.

ಅದೇನೇ ಇರಲಿ, ಸೈಂಧವ ಸಂಸ್ಕೃತಿಯ ಈ ಮುದ್ರೆಗಳ ಚಿತ್ರಲಿಪಿ ಕಾಣಸಿಗುವ ಅಗ್ನಿದೇವತೆ (ಅರ್ಕ:) 'ಭಗ' ವಿಶಿಷ್ಟ ಆಂದಾಗ ಮೂಲತಃ 'ಭಗ' ಅಗ್ನಿಗೇ ಪರ್ಯಾಯವಾಚಿಯಾಗಿದ್ದಿರಬೇಕು–ಎಂಬ ನನ್ನ ಊಹೆ ಬರೇ ಅನುಮಾನವೋ ಭಾಷಾ ತರ್ಕವೋ ಆಗಲಿಕ್ಕಿಲ್ಲವೆಂದು ಭಾವಿಸಬಹುದೇ ?

ಮೋಹನ ಹೆಗಡೆ, ಬಂದಗದ್ದೆ

# ನಡಹಳ್ಳಿ ವೆಂಕಪ್ಪನವರು

**ಸಂಸ್ಕೃತ-ಕನ್ನಡ ಶಾಸ್ತ್ರ-ಗ್ರಂಥ ರಚನಾಕಾರ. ಕ್ಲಿಷ್ಟ ಶಾಸ್ತ್ರಾಧ್ಯಾಯಿನಿ, ಸಂಗೀತ ಶಾಸ್ತ್ರಜ್ಞ, ವೈದ್ಯಕೀಯ ಶಾಸ್ತ್ರ ರಚನಾಕಾರ, ಕೀರ್ತನಕಾರ, ಪತ್ರಿಕೋದ್ಯಮಿ, ಒಂದೇ ಸಲ ನಾಲ್ಕು ಒರಳುಗಳಲ್ಲಿ ಅವಲಕ್ಕಿಯನ್ನು ಒಬ್ಬನೇ ತಯಾರಿಸುವಂತೆ ಯೋಚಿಸಿದ ವ್ಯಕ್ತಿ, ೨೦ನೇ ಶತಕದ ಎರಡನೆಯ ದಶಕದಲ್ಲಿ ಸ್ವಂತ ಮುದ್ರಣಾಲಯ ಪ್ರಾರಂಭಿಸಿದವರು, ಆಕ್ರಮಣ ಮಾಡಿದ ೧೫-೨೦ ಜನರನ್ನು ಒಂದೇ ಸಲ ಎದುರಿಸಿದವರು, ಗುಂಡಿ ಮಗ್ಗವನ್ನು ಸ್ವತಃ ತಯಾರಿಸಿ ಆರ್ಟ್ ರೇಯಾನ್, ರೇಶಿಮೆ ಹಾಗೂ ನೂಲಿನ ಬಟ್ಟೆ, ಸೀರೆ ನೇಯ್ದವರು, ಎಲ್ಲ ಒಬ್ಬನೇ ವ್ಯಕ್ತಿ ಎಂದರೆ ಯಾರಿಗೆ ತಾನೇ ಅಚ್ಚರಿಯಾಗದು? ಇದನ್ನೆಲ್ಲ ಸಾಧಿಸಿದವರು ಅದಮ್ಯ ದಿ. ನಡಹಳ್ಳಿ ವೆಂಕಪ್ಪನವರು.**

ನಡಹಳ್ಳಿ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಸಮಿಪದ ಒಂದು ಚಿಕ್ಕ ಹಳ್ಳಿ. ಅಲ್ಲಿಯ ಸುಸಂಸ್ಕೃತ ವೈದಿಕ ಮನೆತನದ ನಾರಣಪ್ಪನವರು ಚೆನ್ನಾಗಿ ವೇದಾಧ್ಯಯನ ಮಾಡಿದವರು. ಇವರಿಗೆ ತಿಮ್ಮಪ್ಪ, ಮಂಜಪ್ಪ, ಪುಟ್ಟಪ್ಪ, ವೆಂಕಪ್ಪ ಎಂಬ ನಾಲ್ವರು ಮಕ್ಕಳು.

ವೆಂಕಪ್ಪನವರು ನಡಹಳ್ಳಿಯಲ್ಲಿ ಕ್ರಿ. ಶ. ೧೮೭೭ರಲ್ಲಿ ಜನಿಸಿದರು. ಏಕಪಾಠಿಯಾದ ಇವರ ಶಿಕ್ಷಣವೆಲ್ಲ ತಂದೆಯಿಂದಲೇ ಸಿಕ್ಕಿತು. ೨ ಮೈಲು ದೂರದ ಸೊರಬದಲ್ಲಿ ಪ್ರಾಥಮಿಕ ಶಿಕ್ಷಣವೂ ಮುಗಿಯಿತು. ಇಂಗ್ಲೀಷ್ ಎಂದರೆ ವೈದಿಕ ಬ್ರಾಹ್ಮಣರ ದೃಷ್ಟಿಯಲ್ಲಿ ಬಹಿಷ್ಕೃತ ಭಾಷೆ. ಅದನ್ನು ಕಲಿಯುವ ಆಸೆಯಿಂದ ಧಾರವಾಡಕ್ಕೆ ಓಡಿದರು. ಅಲ್ಲಿ ಕನ್ನಡ, ಸಂಸ್ಕೃತ ಹಾಗೂ ಇಂಗ್ಲೀಷುಗಳಲ್ಲಿ ಆಳವಾದ ಅಧ್ಯಯನ ಮಾಡಿದರು. F.Y. ಪರೀಕ್ಷೆ ಮುಗಿಸಿ ಮನೆಗೆ ಮರಳಿದರು.

ಅನತಿ ಕಾಲದಲ್ಲೆ ನಡಹಳ್ಳಿಯಿಂದ ೧೦ ಮೈಲು ದೂರದ ತಲಕಾಲುಕೊಪ್ಪದ ಭವಾನಮ್ಮನೊಡನೆ ಲಗ್ನವಾಯಿತು. ಎರಡು ಗಂಡು, ಒಂದು ಹೆಣ್ಣು ಮಗಳನ್ನು ನೀಡಿದ ಭವಾನಮ್ಮ ಬಹುಕಾಲ ಇವರಿಗೆ ಜೊತೆ ನೀಡಿದರು. ಮಗ

ಲಕ್ಷ್ಮೀನಾರಾಯಣಪ್ಪ ೧೯೭೯ರಲ್ಲಿ ತೀರಿ ಕೊಂಡರು.

ವೆಂಕಪ್ಪನವರದು ಹಳೇ ಶೈಲಿಯ ೧೫-೨೦ ಅಂಕಣಗಳ ಸೋಗೆ ಮನೆ. ಬೆಳಕು ಗಾಳಿ-ನಡುವಿನ ಬಿಸಿಲಂಗಳದಿಂದಲೇ ಬರಬೇಕು. ಈ ಅಂಗಳದ ಸುತ್ತಲಿನ ಅಂಕಣಗಳ ಜಾಗವೇ ಇವರ ಶ್ರೀ ಲಕ್ಷ್ಮೀವಿಲಾಸ ಮುದ್ರಾಕ್ಷರಶಾಲೆ. ೧೯೧೧ರ ಸುಮಾರಿಗೆ ಪ್ರಾರಂಭವಾದುದು. ಆಗ ಅಚ್ಚಿನ ಮೊಳೆಗಳ ಪ್ರಭಾವ ಹೆಚ್ಚಿರದಿದ್ದರೂ ಪ್ರಗತಿಯ ಪಥದಲ್ಲಿತ್ತು. ಇವರ ಹೆಚ್ಚಿನ ಗ್ರಂಥಗಳೆಲ್ಲ ಇಲ್ಲಿಯೇ ರೂಪುಗೊಂಡವು. ಇವರು ರಚಿಸಿದ ಧಾರ್ಮಿಕ ಗ್ರಂಥಗಳು ಸುತ್ತು ಮುತ್ತಣ ಊರುಗಳು ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿ ಸಾಗರ-ಸೊರಬ ಮುಂತಾದ ನಗರಗಳಲ್ಲಿ ಧರ್ಮಶ್ರದ್ಧೆಯನ್ನು, ಬೆಳೆಸಲು ಸಹಾಯಕವಾದವು. ಇದೇ ಉದ್ದೇಶಕ್ಕೆ ಕೆಲವು ಮಾಸಪತ್ರಿಕೆಗಳನ್ನು ಪ್ರಾರಂಭಿಸಿದರು. ಅನೇಕ ವರ್ಷಗಳ ನಂತರ ಇದರ ಮುದ್ರಣಾಲಯ ಸಾಗರಕ್ಕೂ ಸ್ಥಳಾಂತರಗೊಂಡಿತು. ಸಾಗರ ಕೇಂದ್ರವಾಗಿದ್ದು ಅವರ ಕೀರ್ತಿ ಹೊಸನಗರ, ತೀರ್ಥಹಳ್ಳಿಗಳಿಗೂ ಹರಡಿತು. ಕಾರಣಾಂತರಗಳಿಂದ ವೆಂಕಪ್ಪನವರು ತಲೆಮರೆಸಿಕೊಳ್ಳಬೇಕಾಗಿ ಬಂದ ಕಾರಣ ಅವರ ಪ್ರೆಸ್ ಮುಚ್ಚಿತು.

ಸಾಗರದಿಂದ ಕಣ್ಮರೆಯಾದ ವೆಂಕಪ್ಪನವರು ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಎಲೂಗಾರ್ ಎಂಬ ಹಳ್ಳಿಯಲ್ಲಿ ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಿದರು. ಉತ್ತಮ ಸಂಸ್ಕೃತ ಜ್ಞಾನವಿದ್ದುದರಿಂದ ಅಧ್ಯಾಪನವೃತ್ತಿ ಚೆನ್ನಾಗಿ ನಡೆಯಿತು. ಈ ಕಾರಣ ಇಂದಿಗೂ ಶಿಷ್ಯವರ್ಗದ ಪರಂಪರೆ ಅಲ್ಲಿ ಇದೆ. ಈ ಸಂಸ್ಕೃತ ಪಾಠಶಾಲೆಯೂ ೪-೫ ವರ್ಷ ಮಾತ್ರ ನಡೆಯಿತು.

ಎಲೂಗಾರಿನಿಂದ ಮನೆಗೆ ಮರಳಿದ ವೆಂಕಪ್ಪ ಕೈಗಾರಿಕಾ ಪ್ರಪಂಚಕ್ಕಿಳಿದರು. ಇದೇ ಸುಮಾರಿಗೆ ಅವರು ಚಲನಚಿತ್ರ ಪ್ರದರ್ಶನವನ್ನು ಕೈಕೊಂಡರು.

ಅದಕ್ಕಾಗಿ. ಅಗತ್ಯ ಸಲಕರಣೆಗಳನ್ನು ಕಲೆಹಾಕಿ ತಯಾರಿಸಿ, ಸೇರಿಸಿದರು. ಎಲ್ಲಿಂದಲೋ ಫಿಲ್ಮು ತರಿಸಿದರು. ಸ್ಥಿರಚಿತ್ರ ಪ್ರದರ್ಶನವನ್ನು ಮನೆಯಲ್ಲಿಯೇ ಪ್ರಾರಂಭಿಸಿದರು.

"ಮೂಕೀ ಸಿನಿಮಾಗಳೇ ನೋಡಲು ಅಲಭ್ಯವಾದ ಆ ಕಾಲದಲ್ಲಿ ವೆಂಕಪ್ಪಣ್ಣ ತೋರಿಸುವ ಆ ಚಿತ್ರವನ್ನು ನಾವೆಲ್ಲ ಕಣ್ಣು-ಬಾಯಿ ಬಿಟ್ಟುಕೊಂಡು ಅತ್ಯಾಸಕ್ತಿಯಿಂದ ನೋಡುತ್ತಿದ್ದೆವು. ಅದು ಅದ್ಭುತ ಹಾಗೂ ಕುತೂಹಲಕಾರಿಯಾಗಿತ್ತು. ಅದನ್ನು ತೋರಿಸಿದ ವೆಂಕಪ್ಪಜ್ಜ ನಮಗೆಲ್ಲ ದೇವರೇ ಆಗಿದ್ದ," ಎಂದು ಅದನ್ನು ಕಂಡ ನಾನು ಸಂದರ್ಶಿಸಿದ ಹಿರಿಯರೊಬ್ಬರು ಹೇಳಿದರು.

ವೆಂಕಪ್ಪನವರಿಗೆ ೭೦ನೇ ವಯಸ್ಸಿಗೆ ಕೆಲ ಹಲ್ಲುಗಳು ಉದುರಿದ್ದವು. ಆಗಿನ್ನೂ ಕೃತಕ ಹಲ್ಲುಗಳು ಬಳಕೆಯಲ್ಲಿ ಹೆಚ್ಚು ಬಂದಿರಲಿಲ್ಲ. ಅವರ ಮನೆಯಲ್ಲಿ ಜೀರ್ಣವಾದ ಶಂಖವೊಂದಿತ್ತು. ಮಿಂಚಿನ ತಲೆ ಒಡೆತು. ಅದನ್ನು ತುಂಡು ಮಾಡಿ ತಮಗೆ ಬೇಕಾದ ಅಳತೆಗೆ ಸರಿಪಡಿಸಿಕೊಂಡರು. ಮನಕ್ಕೊಪ್ಪುವಂತೆ, ನಯವಾಗಿ ಬರುವಂತೆ ಮೆಕ್ಕಳಿಂದ ತಿಕ್ಕಿಸಿದರು. ಅವುಗಳನ್ನು ಬೆಳ್ಳಿ ಸರಿಗೆಯಿಂದ ಜೋಡಿಸಿ, ಹಲ್ಲಿನ ಸೆಟ್ಟನ್ನು ಬಳಸತೊಡಗಿದರು. "ಇದು ಕೃತಕ ಹಲ್ಲಿನ ಸೆಟ್" ಎಂದು ಇತರರಿಗೆ ತಿಳಿದು ಬಂದುದು ಹಲವು ವರ್ಷಗಳ ನಂತರವೇ.

ಇಂದಿನ ಅಂಬರ ಚರಖಾ ಹೋಲುವ, ಒಂದೇ ಸಲ ಹಲವು ಕದಿರುಗಳಿಂದ ನೂಲು ತೆಗೆಯಲು ಬರುವಂತೆ ಯೋಚಿಸಿ ಒಂದು ಚರಖಾವನ್ನು ತಯಾರಿಸಿದರು. ಆದರೆ ಇಚ್ಛಿಸಿದ ಮಟ್ಟಕ್ಕೆ ಅದು ಕೆಲಸ ಮಾಡದ ಕಾರಣ ಅದನ್ನು ಅಷ್ಟಕ್ಕೇ ಕೈ ಬಿಟ್ಟರು. (ಇದರ ಪಳೆಯುಳಿಕೆಗಳು ಸಿದ್ಧಾಪುರದ ವಿಠೋಬ ದೇವಾಲಯದಲ್ಲಿ ಇಂದಿಗೂ ಉಂಟೆಂದು ಹೇಳುತ್ತಾರೆ.)

ಈಗ ಅವರ ಯೋಚನೆ ಬಟ್ಟೆ ತಯಾರಿಕೆಯತ್ತ ಓಡಿತ್ತು. ಯೋಚಿಸಿ-ಯೋಚಿಸಿ ಗುಂಡಿ ಮಗ್ಗವನ್ನು ರೂಪಿಸಿದರು. ಕಾರ್ಯಾಚರಣೆ ಸಾಗಿತು. ನೂಲಿನ ಬೆಡ್‌ಶಿಟ್, ಸೀರೆ, ಬಟ್ಟೆ, ಕೃತಕ ರೇಯಾನ್ ಬಟ್ಟೆ, ರೇಶಿಮೆ ಮಡಿಗಳನ್ನು

ತಯಾರಿಸಿದರು. ಅವರ ಕೌಶಲ್ಯ, ಜಾಣ್ಮೆ, ಪ್ರತಿಭೆಯ ಸಾಕ್ಷಿಯಾದ ಈ ಬಟ್ಟೆಗಳಲ್ಲಿ ಕೆಲವನ್ನು ಅವರ ಮನೆಯವರು ಹಾಗೂ ಅಭಿಮಾನಿಗಳು ಹೆಮ್ಮೆ ಆದರಗಳಿಂದ ಇಂದಿಗೂ ತೋರಿಸುತ್ತಾರೆ. ಇವು ಇಂದಿನ ಗಿರಣಿಗಳಲ್ಲಿ ಸಿದ್ಧವಾದ ಯಾವ ಬಟ್ಟೆಗೂ ಕಡಿಮೆಯಿಲ್ಲದಷ್ಟು ನಯವಾಗಿವೆ, ನಾಜೂಕಾಗಿವೆ.

ಉರ್ದುವಿನಲ್ಲಿ ಒಳ್ಳೇ ಸಾಹಿತ್ಯವಿದ್ದುದನ್ನು ಕೇಳಿದ ವೆಂಕಪ್ಪನವರು ಸೊರಬದಲ್ಲಿ ಓರ್ವ ಮುಸ್ಲಿಂ ಬಂಧುವಿನಿಂದ ಅದನ್ನು ಕಲಿಯಲು ಯತ್ನಿಸಿದರು. ಹೀಗೆಯೆ ಒಂದು ದಿನ ಮಾತಿಗೆ ಮಾತು ಬೆಳೆದು ಆತ, "ಹೋಗ್ಡೊಗ್, ಏಃ ಬೊಮ್ಮನ್ ಏನ್ ಉರ್ದು ಭಾಷಾ ಕಲಿಯುತ್ತಿ?" ಎಂದುದನ್ನೇ ಸವಾಲಾಗಿ ಸ್ವೀಕರಿಸಿ ಆ ಭಾಷೆಯನ್ನೂ ಸ್ವಯಂ ಕಲಿತರು.

ಸ್ವಂತಿಕೆಗೆ ಹೆಸರಾದ ವೆಂಕಪ್ಪನವರು ವೈವಿಧ್ಯಮಯ ಕತೆ, ಹಾಡು, ಪುರಾಣ ಸೇರಿಸಿ, ಕೀರ್ತನೆ ತಯಾರಿಸಿ ಹಲವು ಕಡೆ ಕೀರ್ತನೆಯನ್ನು ಮಾಡಿದರು.

ಆರೂವರೆ ಅಡಿ ಎತ್ತರದ ಆಜಾನುಬಾಹು, ಸದೃಢ ವ್ಯಕ್ತಿಯವರು. ಮಾತಿನಲ್ಲಾಗಲಿ,ಚತುರತೆಯಲ್ಲಾಗಲಿ, ಊಟದಲ್ಲಾಗಲಿ ಸೆಣಸಾಟದಲ್ಲಾಗಲಿ ಕೆಲಸಗಾರಿಕೆಯಲ್ಲಾಗಲೀ, ಸ್ವಂತಿಕೆಯಲ್ಲಾಗಲಿ, ಕೌಶಲ್ಯದಲ್ಲಾಗಲಿ, ಹೊಸ ವಿಷಯ ಶೋಧಿಸುವದರಲ್ಲಾಗಲಿ ಅವರನ್ನು ಮೀರಿಸುವವರಿರಲಿಲ್ಲ. ಯಕ್ಷಗಾನದ ಪದಗಳಿಗೆ ಮೃದಂಗ ಬಾರಿಸುತ್ತ ಕುಳಿತು ಬೆಳಗು ಮಾಡಿದ್ದೂ ಇದೆ. ಹಾರ್ಮೋನಿಯಂ, ತಬಲಾ ಬಾರಿಸುವುದನ್ನು ಯಾರಿಗೂ ಬಿಟ್ಟುಕೊಡದ ವ್ಯಕ್ತಿಯವರು. ಲಕ್ಷ್ಮೀ-ಸರಸ್ವತಿಯರಲ್ಲಿ ಒಬ್ಬಳಿದ್ದಲ್ಲಿ ಇನ್ನೊಬ್ಬಳಿರುವುದು ಕಷ್ಟ. ಇದಕ್ಕೆ ನಡಹಳ್ಳಿ ವೆಂಕಪ್ಪನವರೊಂದು ಉದಾಹರಣೆ. ಮೇಲಿನ ಯಾವುದೇ ಒಂದು ಕೆಲಸವನ್ನು ಮುಂದುವರೆಸಿದ್ದರೂ ಸಾಕಷ್ಟು ಹಣ ಗಳಿಸಬಹುದಿತ್ತು. ಆದರೆ ಅದು ಅವರಿಂದ ಸಾಧ್ಯವಾಗಲಿಲ್ಲ.

ಆಗ ಸೊರಬ ಸೀಮೆಯಲ್ಲಿ ಹೆಸರಾದದ್ದು ತಲಕಾಲುಕೊಪ್ಪದ ಹವ್ಯಕ ಸಹಕಾರೀ ಸಂಘ. ಕೆಲ ಕಾಲ ಇದರ ಕಾರ್ಯದರ್ಶಿಗಳಾಗಿ ಚೆನ್ನಾಗಿ ವೆಂಕಪ್ಪನವರ ಕಾರ್ಯ ನಿರ್ವಹಿಸಿದರು.

ಮಧ್ಯಮ ಹವ್ಯಕ ಮನೆತನದಲ್ಲಿ ಹುಟ್ಟಿ, ಬಹುಮುಖ ಪ್ರತಿಭಾವಂತರಾಗಿ, ಯೋಗಿಯಾಗಿ ನಿರ್ವಿಕಾರ ಸ್ಥಿತಿಯಲ್ಲಿ ತಮ್ಮ ಕೊನೆಯದಿನಗಳಲ್ಲಿ ಕೂಡ ವೆಂಕಪ್ಪನವರು ಸಮಾಧಾನ ಚಿತ್ತರಾಗಿದ್ದರು, ತಮ್ಮ ಮನೆಯಲ್ಲಿ ೯೭ ನೇವಯಸ್ಸಿನಲ್ಲಿ (೧೯೭೩) ತುಂಬು ಸಂಸಾರ, ಬಂಧುಗಳ ಮಧ್ಯೆ ಶಾಂತ-ಮರಣಅಪ್ಪಿದರು.

"ಆಡು ಮುಟ್ಟದ ಗಿಡವಿಲ್ಲ" ಎಂಬಂತೆ ವೆಂಕಪ್ಪನವರು ಮಾಡದ ಕೃತಿಯಿಲ್ಲ ಎಂಬುದು ಚೆನ್ನಾಗಿ ಅವರ ಜೀವನಕ್ಕೆ ಹೊಂದುತ್ತದೆ. ಹುತ್ತ ಹಲವಾರು ಕೈಗಾರಿಕೆಗಳ ಜೊತೆಗೆ ಅದ್ಭುತ ವೈಚಾರಿಕ ಸಾಹಿತ್ಯಸೇವೆ ಮಾಡಿದವರಿವರು. ಈ ಕುರಿತಾಗಿ ನೂರು ವರ್ಷಕ್ಕೂ




"ನನಗೆ ತಮ್ಮ ಹುಟ್ಟಿದ್ದಾನೆ ಸಾರ್– ಈಗ್ಲೆ ಸೀಟ್ ರಿಜರ್ವ್ ಮಾಡಿಸು ಅಂತ ಅಮ್ಮ ನನಗೆ ಹೇಳಿದ್ಲು.

ಹಳೆಯ ಅವರ ಮನೆಯನ್ನು ಹುಡುಕಿದಾಗ ಸಿಕ್ಕಿದ್ದು ಕೆಲವೇ ಕೃತಿಗಳು. ಅವುಗಳಲ್ಲೊಂದರ ಹಿಂಭಾಗದಲ್ಲಿ ಅಚ್ಚಾದ ಅವರ ಕೃತಿಪಟ್ಟಿ ಅವರ ಗ್ರಂಥಗಳ ಸಂಖ್ಯೆಯನ್ನು ತೋರಿಸುತ್ತದೆ.

೧) "ಗಣೇಶಲೀಲಾ ತರಂಗಿಣಿ":- ಗಣಪತಿಯ ವಿವಿಧ ಲೀಲೆಗಳನ್ನು ವರ್ಣಿಸಿದ ಪದ್ಯರೂಪೀ ಚಿಕ್ಕ ಪುಸ್ತಿಕೆ (ಕೃತಿ ಅಲಭ್ಯ.)

೨) "ಶನಿ ಮಹಾತ್ಮೆ" ಕನ್ನಡ ಕಥೆ, ಶನೀಶ್ವರನ ಮಹಾತ್ಮೆಯನ್ನು ವಿವರಿಸುವ ತಿಳಿಗನ್ನಡದ ೬೦ ಪುಟಗಳ ಚಿಕ್ಕ ಗ್ರಂಥ.

೩) "ಶ್ರೀಮದ್ಯಕ್ಷ ಪ್ರಶ್ನೆ" ಮಹಾಭಾರತದಲ್ಲಿ ಬರುವ ಧರ್ಮರಾಯ-ಯಕ್ಷರಲ್ಲಿ ನಡೆದ ಪ್ರಶ್ನೋತ್ತರ. ೩೪ ಪುಟಗಳಲ್ಲಿ ಶ್ಲೋಕ-ಅರ್ಥ ಸಹಿತವಾಗಿದೆ. ಮೊದಲ ೧೦ ಪುಟಗಳಲ್ಲಿ ಕಥಾ ಮುನ್ನುಡಿ ಇದೆ. (೧೯೧೨ರಲ್ಲಿ ಮುದ್ರಿತ.)

೪) "ಲಕ್ಷ್ಮಣೇ ಕಲ್ಯಾಣ" ಯಕ್ಷಗಾನ. ಲಕ್ಷ್ಮಣನ ಲಗ್ನದ ಕುರಿತಾದ ಯಕ್ಷಗಾನ ಕೃತಿ. (ಕೃತಿ ಅಲಭ್ಯ) ಹೆಸರು ವಿಚಿತ್ರವಾಗಿದೆ.

೫) "ಪ್ರಭಾವತೀ ಸ್ವಯಂವರ"-ಯಕ್ಷಗಾನ (ಕೃತಿ ಅಲಭ್ಯ.)

"ಮದನ ಮಂದಿರ", "ಕವಚ ಸಂಗ್ರಹ," "ಲಕ್ಷ್ಮೀ ಸಹಸ್ರ ನಾಮಾವಳಿ", ಸಟೀಕ ರಾಮ ಗೀತೆ, ವೇದಾಂತ, ಇನ್ನಿತರ ಗ್ರಂಥಗಳು. ೧೦೪ ಪುಟಗಳ "ನಿತ್ಯ ಕರ್ಮ ಪ್ರದೀಪಿಕಾ" ಎಂಬುದರಲ್ಲಿ ಬ್ರಾಹ್ಮಣರು ಮಾಡತಕ್ಕ ನಿತ್ಯ ವಿಧಿಗಳ ಮಂತ್ರ – ಪ್ರಯೋಗವನ್ನು – ಒಳಗೊಂಡಿದೆ. ವೈದ್ಯನಾಥಿಯ, ವೆಂಕಟೇಶೀಯ ಧರ್ಮ ಪ್ರಭೃತಿ ಸ್ಮೃತಿಸಾರ ಸಮುಚ್ಚಯ, ಧರ್ಮ ಸಿಂಧು, ನಿರ್ಣಯ ಸಿಂಧು, ಮಂತ್ರ-ಮಹೋದಧಿ, ಮುಂತಾದ ಬೃಹತ್ ಗ್ರಂಥಗಳಿಂದ ಸಂಗ್ರಹಿಸಿ ಬರೆಯಲಾಗಿದೆ.

ಇವರಲ್ಲಿ ೧) ನಿರ್ಣಯ ಪರಿಚ್ಛೇದ ೨) ಪ್ರಯೋಗ ಪರಿಚ್ಛೇದಗಳೆಂಬ ಎರಡು ಭಾಗಗಳಿವೆ. ಬೌಧಾಯನ ಸೂತ್ರಾನುಸಾರಿಗಳಿಗೆ ಉಪಯೋಗಕರವಾದ ಕರ್ಮಗಳಿವೆ.

"ವೆಂಕಪ್ಪನವರ ತಂದೆ ನಾರಾಯಣಪ್ಪನವರು ಮಂಜಪ್ಪನವರಿಗೋಸ್ಕರ ಕೃಷ್ಣಾಜಿ ಹಣಮಂತ ಮುದವೇಡಕರರ ಕರ್ನಾಟಕ ಬುಕ್-ಡಿಪೋ ಪ್ರೆಸ್- ಧಾರವಾಡದಲ್ಲಿ ೧೯೧೦ರಲ್ಲಿ ಗ್ರಂಥ ಮುದ್ರಿತ" ಎಂದಿದೆ. "ಗ್ರಂಥದ ಕೊನೆಯಲ್ಲಿ "ಮಂಜುನಾಥ ಶರ್ಮನ್ ಎಂದಿದೆ. (ಬಹುಶಃ ಮಂಜಪ್ಪನವರೇ ತಮ್ಮ ಹೆಸರನ್ನು ಹೀಗೆ ಸೂಚಿಸಿರಬಹುದೇ?) ಇವರ ನಂತರ ಸ್ವಂತ ಮುದ್ರಣಶಾಲೆ ಮಾಡುವ ವಿಚಾರ ವೆಂಕಪ್ಪನವರಲ್ಲಿ ಬಂದಿರಬೇಕು. ಸ್ವಂತ ಲಕ್ಷ್ಮೀವಿಲಾಸ ಮುದ್ರಾಕ್ಷರ ಶಾಲೆಯನ್ನು ಸೊರಬ ತಾಲೂಕಿನ ಸಡಹಳ್ಳಿಯ ತಮ್ಮ ಮನೆಯಲ್ಲೇ ೧೯೧೧ರಲ್ಲಿ ಪ್ರಾರಂಭಿಸಿದರು.

"ಶನಿಸ್ತೋತ್ರ ಕದಂಬ", "ಲಕ್ಷ್ಮೀಸ್ತವಕ", "ನಿತ್ಯ ಕರ್ಮಾಂಗ ಪ್ರಕಾಶಿಕಾ", "ರಾಮ ಭಜನೆ" "ಶಿವ ಭಜನೆ" (೧೨ ಪುಟಗಳ ಚಿಕ್ಕ ಪುಸ್ತಿಕೆ) "ಉಪಯುಕ್ತ ಪೂಜಾ", "ಗಣಪತಿ ಪೂಜಾ", "ಕೇದಾರೇಶ್ವರ ಮಿಶ್ರ ಪೂಜಾ"- ಇದರಲ್ಲಿ ಕೇದಾರೇಶ್ವರ, ಮಹಾಲಕ್ಷ್ಮಿ (ಶ್ರಾವಣಿ), ಧಾನ್ಯ ಶಂಕರ ಪೂಜಾ ವಿವರಗಳ ಮಂತ್ರ ವಿವರವಿದೆ. (ಹಸ್ತಪ್ರತಿ ಮಾತ್ರ ಲಭ್ಯವಾಗಿದೆ.) ಸಟೀಕಾ "ಶ್ರೀ ಸೂಕ್ತ", "ನವರತ್ನ ಪರೀಕ್ಷಾ,- ವಿವಿಧ ರತ್ನಗಳ ಉತ್ಪತ್ತಿ, ಪರೀಕ್ಷಿಸುವ ವಿಧಾನ, ಲಕ್ಷಣ ಪರಿಣಾಮ- ಬೆಲೆ ತಿಳಿಯುವ ಅಗತ್ಯಕ ಮಾಹಿತಿ ೪೫ ಪುಟಗಳಲ್ಲಿ ಹರಡಿಕೊಂಡಿದೆ. "ಸಟೀಕಾ ಅಂಬಾಷ್ಟಕ" "ಗೋಪಿಕಾ ಗೀತೆ", "ಚಂದ್ರ ಪ್ರಭಾ", "ಗಣಪತಿ ಸಹಸ್ರ ನಾಮ" (ಹಸ್ತ ಪ್ರತಿ ಲಭ್ಯ) ಮುಂತಾದವುಗಳು.

"ಲಕ್ಷ್ಮೀ ಸಹಸ್ರ ನಾಮ", "ಸರಸ್ವತೀ ಪೂಜಾ ವಿಧಾನ" ಹಾಗೂ "ಯಾಜ್ಞವಲ್ಕ್ಯ ಸ್ಮೃತಿ" ಗಳು ಸಂಪಾದಿತ ಕೃತಿಗಳು.

"ಉತ್ತರ ಸಹ್ಯಾದ್ರಿ" ಎಂಬ ಗ್ರಂಥದಲ್ಲಿ ಹವ್ಯಕರ ಮೂಲ ಚರಿತ್ರೆ-ಸ್ಥಾನಗಳನ್ನು ಸಾಧಾರವಾಗಿ ವಿವರಿಸಿ, ಸಂಸ್ಕೃತ ಶ್ಲೋಕಗಳೊಡನೆ ಕೊಟ್ಟಿದೆ.

ಸ್ವರಚನೆಯಾದ "ವೃಗವಾಟಿಕಾ ಪತ್ರಕ" ಒಂದು ಅಪೂರ್ವ ವೈಜ್ಞಾನಿಕ ಕೃತಿ. ಹವ್ಯಕರ

ಮೂಲ ಕಸಬು ತೋಟಗಾರಿಕೆ. ಬಾಳೆ–ಅಡಿಕೆ, ಯಾಲಕ್ಕಿ, ಮೆಣಸಿನಕಾಳನ್ನು ಬೆಳೆಸುತ್ತಾರೆ. ಈ ಕೃಷಿಯನ್ನು ನವೀನ ರೀತಿಯಲ್ಲಿ ಪ್ರಾಯೋಗಿಕವಾಗಿ ಮಾಡುವುದನ್ನು ವಿವರಿಸಿದ್ದಾರೆ. ಅದನ್ನು ಜನ ಸಾಮಾನ್ಯನೂ ಅನುಸರಿಸಬಹುದಾಗಿದೆ.

ಈ ವರೆಗಿನ ಅವರ ಕೃತಿಗಳ ಕುರಿತಾಗಿ ನಡೆಸಿದ ಸಂಶೋಧನೆಯಲ್ಲಿ ಕಂಡುಬಂದ ವಿಷಯಗಳು–ಗ್ರಂಥಗಳು ಇಷ್ಟು. ಆದರೆ ಇವರ ಕೃತಿಗಳು ಇಷ್ಟೇ ಸರಿ ಎಂದು ಹೇಳುವ ಧೈರ್ಯ ನನಗಿಲ್ಲ. ಏಕೆಂದರೆ ಈ ಅದ್ಭುತ ವ್ಯಕ್ತಿಯ ಸಾಧನೆಯ, ಬುದ್ಧಿಯ ಆಳವನ್ನೂ, ಜ್ಞಾನ ವಿಸ್ತಾರವನ್ನೂ ಅನೇಕರಿಂದ ಕೇಳಿದಂತೆ ಇನ್ನೂ ಅನೇಕ ಸಾಹಿತ್ಯಕೃತಿಗಳಿದ್ದು ಅವು ನನಗೆ ಅಲಭ್ಯವಾಗಿವೆ.

ಅವರ ಮನೆಯನ್ನು. ಕೃತಿಗಳಿಗಾಗಿ ಶೋಧಿಸುವಾಗ, "ಅರೇಬಿಕ್–ಇಂಗ್ಲಿಷ್ ಬೃಹತ್ ನಿಘಂಟು ಕಂಡು ಬಂದಿದೆ. ದಿನಾಲೂ ಸಂಜೆ ತಿರುಗಾಡಲು ಹೋಗುವ ರೂಢಿ ವೆಂಕಪ್ಪನವರದಾಗಿತ್ತು. ಹಾಗೆ ಹೋದಾಗ ಉರ್ದು ಪತ್ರಿಕೆಯಲ್ಲಿಯ ಸುದ್ದಿ ಓದಿಸಿ ತಿಳಿಯಲು ಓರ್ವ ಮುಸ್ಲಿಂ ಬಂಧುವಿನಲ್ಲಿ ಹೋಗುತ್ತಿದ್ದರಂತೆ. ಆತನ ಸಹಾಲನ್ನೆದುರಿಸಲು ಉರ್ದು ಭಾಷೆಯನ್ನು ಕಲಿತಿದ್ದರು ಎಂದು ನಾನು ಕೇಳಿದುದನ್ನು ಇದು ಪುಷ್ಟೀಕರಿಸುತ್ತದೆ.* ಈ ಗ್ರಂಥದ ಜೊತೆಗೆ ಸಂಸ್ಕೃತ ಶಬ್ದಕೋಶ ಕೂಡ ಇದೆ. ಅವರಿಗೆ ಕನ್ನಡ–ಸಂಸ್ಕೃತಗಳಲ್ಲಿ ಒಳ್ಳೆಯ ಪಾಂಡಿತ್ಯ. ಇಂಗ್ಲಿಷ್, ಅರೇಬಿಕ್ ಭಾಷೆಗಳಲ್ಲಿ ಸಾಮಾನ್ಯ ಜ್ಞಾನವಿತ್ತು.

೧೯೧೨ರ ಕಾಲ. ಕನ್ನಡ ಪತ್ರಿಕೆಗಳು ಹೆಚ್ಚಿರಲಿಲ್ಲ. ಶಿವಮೊಗ್ಗದಲ್ಲಿ ಆಗ ಒಂದೆರಡು ಪತ್ರಿಕೆಗಳು ಮಾತ್ರವಿದ್ದವು. ವೆಂಕಪ್ಪನವರು "ಶ್ರೀಮದ್ಧರ್ಮ ನಿದಾನಂ". "ಪದ್ಯಕೋಶವು" ಹಾಗೂ "ಆರ್ಯಧರ್ಮ ಪ್ರಕಾಶ" ಮಾಸ ಪತ್ರಿಕೆಗಳನ್ನು ಅನುಕ್ರಮವಾಗಿ ಕೆಲಕಾಲ ನಡೆಸಿದರು. ಈಗ ಅವುಗಳ ಸಂಚಿಕೆಗಳು ಸಿಗುವುದೂ ಅಪರೂಪ.

ಅಂತೂ ವಿವಿಧ ವಿಷಯಗಳ ಬಗೆಗೆ ೨೫ಕ್ಕೂ ಹೆಚ್ಚು ಗ್ರಂಥಗಳ ರಚನೆ ಮಾಡಿ, ಧಾರ್ಮಿಕ, ಸಾಮಾಜಿಕ, ಶಾಸ್ತ್ರೀಯ ಸಾಹಿತ್ಯ ಕ್ಷೇತ್ರಗಳನ್ನು ವಿಸ್ತರಿಸಿದ ನಡಹಳ್ಳಿ ವೆಂಕಪ್ಪನವರಂತಹ ಸವ್ಯಸಾಚಿಗಳು ತೀರ ವಿರಳ. ಇಂಥ ಅಪಮ್ಯ ಸಾಹಸಿ ವ್ಯಕ್ತಿ ಶತಮಾನಕ್ಕೊಬ್ಬರಾದರೂ ಜನಿಸಿ ಬಂದಾರೆಯ?

*ಅವರ ಆಪ್ತೀಯ ಮಿತ್ರರೂ ಸಂಗಡಿಗರೂ ಆದ ನಡಹಳ್ಳಿಯ ಸಮೀಪದ ಕೆರೆಕೊಪ್ಪದ ಶ್ರೀ ಜಾಣ ಮಂಜಪ್ಪನವರಿಂದಲೂ (೮೮ ವರ್ಷ) ಮುಟುಗುಪ್ಪೆಯ ಗೋಪಾಲಯ್ಯ (೯೩ ವರ್ಷ) ನವರಿಂದ ಇಂಥ ಅನೇಕ ಮನೋರಂಜಕ ಘಟನೆಗಳನ್ನು ಈಗಲೂ ಕೇಳಬಹುದು.

---

"ಜ್ಯೋತಿಶ್ಶಾಸ್ತ್ರ 'ಫ್ರಾಡ್'' (ಮೋಸದ್ದು, ಠಕ್ಕನದು) ಸಾರಾಸಗಾಟು 'ಫ್ರಾಡ್''" ಎಂದು ನೀರದ್ ಚೌಧುರಿಯವರು ಗುಡುಗಿ, "ನಾನು ಹುಟ್ಟಿದ ಸ್ಥಳದಲ್ಲಿ, ನಾನು ಹುಟ್ಟಿದಂದೇ, ನಾನು ಹುಟ್ಟಿದ ಕಾಲದಲ್ಲೇ ನಾಯಿಯೊಂದು ಹುಟ್ಟಿದ್ದರೆ, ಅದು ನನ್ನಂತೆ ಪುಸ್ತಕಗಳನ್ನು ಬರೆಯಬಲ್ಲುದೇ ನೀವೆ ಹೇಳಿ!" ಎಂದವರು ಜಬರಿಸಿದರು.

"ಇಲ್ಲ. ಖಂಡಿತವಾಗಿಯೂ ಅದು ಬರೆಯಲಾರದು. ಆದರೆ ಅದು ಹೆಚ್ಚು ಆಬ್ಬರದಲ್ಲಿ ಒಂದೇ ಸವನೆ ಕಿರುಚಬಲ್ಲುದು. ಇನ್ನುಳಿದ ಕೋತಿ ಹಲ್ಲಿನ ಪ್ರಾಣಿಗಳಿಗಿಂತ ಅದು ಇನ್ನೂ ಹೆಚ್ಚು ಚೂಪಾಗಿ ಮತ್ತು ಆಳವಾಗಿ ಕಚ್ಚಬಲ್ಲುದು!" ಎಂದು ಅಲ್ಲಿಯೇ ಇದ್ದ ಸುಧಾಕರ ಎಸ್. ದೀಕ್ಷಿತರವರು ಹೇಳಿದರು.

ಇದು ಚೌಧುರಿಯವರನ್ನು ಮನಸಾರೆ ನಗುವಂತೆ ಮಾಡಿತು. ಅಲ್ಲಿದ್ದವರೆಲ್ಲ ಅದರಲ್ಲಿ ಪಾಲ್ಗೊಂಡರೆಂದು ಹೇಳಬೇಕಿಲ್ಲ.

–ಸಂಗ್ರಹ: ಎಸ್. ವಿಶ್ವನಾಥ

# ದುರ್ಯೋಧನನಿಗೊಂದು ದೇವಸ್ಥಾನ

ಎಚ್. ಆರ್. ಸತ್ಯನಾರಾಯಣ

ದುರ್ಯೋಧನನ್ನು ಪೂಜಿಸಲು ಒಂದು ದೇವಸ್ಥಾನವಿದೆ ಎಂದರೆ ನಂಬುತ್ತೀರಾ? ಆದರೆ ಅದು ಇದ್ದದ್ದಂತೂ ಸತ್ಯ. ಅದು ಇರುವುದು ಮಹಾರಾಷ್ಟ್ರದ ಅಹಮದ್‌ನಗರ ಜಿಲ್ಲೆಯ ಕರ್ಜತ್ ತಾಲೂಕಿನಲ್ಲಿಯ ದುಗಾ೯ಂವ್‌ನಲ್ಲಿ. ಇಂತಹ ದೇವಸ್ಥಾನವಿರುವುದು ಭಾರತದಲ್ಲಿ ಇದೊಂದೇ. ಅಲ್ಲಿ ದುರ್ಯೋಧನನಿಗೆ ನಿತ್ಯ ಪೂಜೆ ನಡೆಯುತ್ತಿದೆ.

ಈ ದೇವಸ್ಥಾನ ಹದಿಮೂರು ಅಥವಾ ಹದಿನಾಲ್ಕನೆಯ ಶತಮಾನದಲ್ಲಿ ಯಾದವ ವಂಶದ ದೊರೆ ರಾಮದೇವರಾವ್‌ನ ಮಂತ್ರಿ ಹೇಮಾಡಪಂತ ಎಂಬವನಿಂದ ಕಟ್ಟಿಸಲ್ಪಟ್ಟಿದ್ದು. ಇದು ಒರಿಸ್ಸಾ ದೇವಸ್ಥಾನಗಳ ಮಾದರಿಯಲ್ಲಿದೆ. ಈ ಮಾದರಿಗೆ 'ಹೇಮಾಡ್ ಪಂತಿ' ಎಂದೂ ಹೇಳುತ್ತಾರೆ. ದೇವಸ್ಥಾನ ಷಟ್‌ಕೋನಾಕೃತಿಯಲ್ಲಿದ್ದು ಅದಕ್ಕೆ ಹೊರ ಆವರಣ ಹಾಗೂ ಗರ್ಭ ಗುಡಿಗಳಿವೆ.

ದೇವಸ್ಥಾನವು ಪೂರ್ವಾಭಿಮುಖವಾಗಿದ್ದು ಒಳಗಡೆ ಎರಡು ಶಿವಲಿಂಗಗಳಿವೆ. ವಿಚಿತ್ರವೇ-ನೆಂದರೆ ಈ ಎರಡು ಶಿವಲಿಂಗಗಳಲ್ಲಿ ಒಂದು ಚೌಕಾಕಾರದಲ್ಲಿದ್ದು ಅದನ್ನು ಬೇರಾವುದೋ ದೇವಸ್ಥಾನದಿಂದ ತಂದಂತೆ ಕಾಣುತ್ತದೆ. ದೇವಸ್ಥಾನದ ಮುಂಭಾಗದಲ್ಲಿ ಒಂದು ಶಿಲಾಶಾಸನವಿದ್ದು ಅದರಲ್ಲಿರುವ ಬರಹದ ಬಗ್ಗೆ ಇನ್ನೂ ಸಂಶೋಧನೆ ನಡೆಯಬೇಕಾಗಿದೆ. ದುರ್ಯೋಧನನ ವಿಗ್ರಹವು ಗರ್ಭಗುಡಿಯ ಒಳಗಡೆ ಇದ್ದು ಅದು ಕುಳಿತಿರುವ ಭಂಗಿಯಲ್ಲಿದೆ. ಈ ದೇವಸ್ಥಾನಕ್ಕೆ ಒಂದು ಶಿಖರವೂ ಇದ್ದು ಅದನ್ನು ಹಳ್ಳಿಯ ಜನರು ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ್ದಾರೆ. ಅಲ್ಲದೆ ವಿಗ್ರಹಕ್ಕೆ ಬಣ್ಣವನ್ನು ಬಳಿಯಲಾಗಿದೆ.

ಇಟ್ಟಿಗೆ ಗಾರೆಗಳಿಂದ ಈ ದೇವಸ್ಥಾನದ ಮುಖ್ಯದ್ವಾರ ಮಳೆಗಾಲದಲ್ಲಿ ಮುಚ್ಚಲ್ಪಟ್ಟಿರುತ್ತದೆ. ಹಾಗೆ ಮಾಡದೆ ಇದ್ದರೆ ಮೋಡಗಳು ಆ ಊರಿನ ಕಡೆ ಬರುವುದಿಲ್ಲ. ಹಾಗಾಗಿ ಮಳೆ ಬೀಳುವುದಿಲ್ಲ. ಏಕೆಂದರೆ ದುರ್ಯೋಧನನ ದೃಷ್ಟಿ ಮೋಡದ ಮೇಲೆ ಬೀಳುತ್ತದೆ ಎಂದು ಆ ಹಳ್ಳಿಯ ಜನ ಭಾವಿಸಿದ್ದಾರೆ. ಇದಕ್ಕೆ ಒಂದು ಐತಿಹ್ಯವೂ ಉಂಟು.

ಆ ಹಳ್ಳಿಗಳ ಪ್ರಕಾರ ಮಹಾಭಾರತ ಯುದ್ಧದ ಕಾಲದಲ್ಲಿ ದುರ್ಯೋಧನ ಭೀಮನಿಂದ ತಪ್ಪಿಸಿಕೊಳ್ಳಲು ಕೊಳದಲ್ಲಿ ಅಡಗಿಕೊಳ್ಳಲು ಪ್ರಯತ್ನಿಸಿದ. ಆದರೆ ದುರ್ಯೋಧನನ ದುಶ್ಚರಿತ್ರೆಯ ಬಗ್ಗೆ ಅರಿವಿದ್ದ ಆ ಕೊಳದ ನೀರು ಅವನಿಗೆ ಆಶ್ರಯ ಕೊಡಲಿಲ್ಲವಂತೆ. ಹಾಗಾಗಿ ಅವನಿಗೆ ನೀರಿನ ಮೇಲೆ ಸಿಟ್ಟು ಬಂದಿತು.

ಇಂದೂ ಅವನ ದೃಷ್ಟಿ ದೇವರ ಮೇಲೆ ಬಿದ್ದರೆ ಆ ಊರಿನಲ್ಲಿ ಮಳೆ ಬೀಳುವುದಿಲ್ಲವೆಂಬುದಾಗಿ ದುರ್ಗಾಂವಿನ ಜನ ಹೇಳುತ್ತಾರೆ.

ಈ ಹಳ್ಳಿಯಲ್ಲಿ ದುರ್ಯೋಧನನ ಬಗ್ಗೆ ಇನ್ನೊಂದು ಕಥೆಯಿದೆ. ಈ ಕಥೆಯ ಬಗ್ಗೆ ಮಹಾಭಾರತದ ಯಾವ ಪುಸ್ತಕಗಳಲ್ಲೂ ಅಥವಾ ಪುರಾಣಗಳಲ್ಲೂ ಪ್ರಸ್ತಾಪವಿಲ್ಲ. ಅದೇನೆಂದರೆ ಬಲರಾಮನಿಗೆ ಸುಭದ್ರೆಯನ್ನು ದುರ್ಯೋಧನನಿಗೆ ಕೊಟ್ಟು ಮದುವೆ ಮಾಡಿಸಬೇಕೆಂಬ ಆಸೆ ಬಲರಾಮನಿಗಿತ್ತು. ಆದರೆ ಶ್ರೀಕೃಷ್ಣ ಅವಳನ್ನು ಅರ್ಜುನನಿಗೆ ಕೊಟ್ಟು ವಿವಾಹ ಮಾಡಿಸಿದ. ಇದರಿಂದ ಬಲರಾಮ ಹಾಗೂ ದುರ್ಯೋಧನರ ಅಭಿಮಾನಕ್ಕೆ ಪೆಟ್ಟು ಬಿತ್ತು. ಇದರ ಜೊತೆಗೆ ದುರ್ಯೋಧನನಿಗೆ ಮಯಸಭೆಯಲ್ಲಿಯೂ ಅವಮಾನವಾಯಿತು. ಆದ್ದರಿಂದ ದುರ್ಯೋಧನನಿಗೆ ಅರ್ಜುನನ ಮೇಲಿದ್ದ ಕ್ರೋಧ ಹೆಚ್ಚಾಯಿತು. ಅದಕ್ಕೆ ಸೇಡು ತೀರಿಸಿಕೊಳ್ಳಲು ಆತ ದುರ್ಗಾಂವ್‌ನಲ್ಲಿದ್ದ ಉಮಾಮಹೇಶ್ವರ ದೇವಸ್ಥಾನಕ್ಕೆ ತಪಸ್ಸಿಗಾಗಿ ಬಂದ. ದುರ್ಯೋಧನನ ತಪಸ್ಸಿಗೆ ಮೆಚ್ಚಿದ ಈಶ್ವರ ಅವನಿಗೆ ಪ್ರತ್ಯಕ್ಷನಾಗಿ ಅವನ ಅಭಿಲಾಷೆ ಏನೆಂದು ಕೇಳುತ್ತಾನೆ. ಆಗ ದುರ್ಯೋಧನನು ಈಶ್ವರನಲ್ಲಿ ತನಗೆ ಅರ್ಜುನನ ಕೈನಿಂದ ಸಾವಿಲ್ಲದಂತೆ ವರ ಬೇಡುತ್ತಾನೆ. ಅದನ್ನು ಈಶ್ವರ ಅನುಗ್ರಹಿಸುತ್ತಾನೆ. ಅದರಿಂದ ಸಂತೋಷಗೊಂಡ ದುರ್ಯೋಧನ ಹಸ್ತಿನಾವತಿಗೆ ಬರುತ್ತಾನೆ.

ಆದರೆ ಈ ವರದಿಂದ ಉಮೆಗೆ ಸಿಟ್ಟು ಬರುತ್ತದೆ. ಅವಳು ಈಶ್ವರನಿಗೆ, "ನೀವು ದುರ್ಯೋಧನನಿಗೆ ಕೊಟ್ಟ ವರ ಒಳ್ಳೆಯದಕ್ಕಿಂತ ಕೆಟ್ಟದನ್ನೇ ಹೆಚ್ಚು ಮಾಡುತ್ತದೆ," ಎಂದು ಹೇಳಿ ಸಿಟ್ಟಿನಿಂದ ಈಶ್ವರನನ್ನು ಬಿಟ್ಟು ದಕ್ಷಿಣದ ವನಪ್ರದೇಶಕ್ಕೆ ಹೊರಟುಹೋಗುತ್ತಾಳೆ. ಉಮೆಯನ್ನು ಅಗಲಿದ ಶಿವ ದುರ್ಗಾಂವಿನಲ್ಲಿ ಒಬ್ಬನೇ ಉಳಿದುಕೊಳ್ಳುತ್ತಾನೆ.

ಅನಂತರ ಮಹಾಭಾರತದ ಯುದ್ಧ ಸಮಯದಲ್ಲಿ ಕೊಳದಿಂದ ಹೊರಬಂದ ದುರ್ಯೋಧನನನ್ನು ಭೀಮ ಗಾಯಗೊಳಿಸುತ್ತಾನೆ. ಆಗ ತನ್ನ ಕೊನೆಯ ಕ್ಷಣಗಳಲ್ಲಿ ದುರ್ಯೋಧನನು ಈಶ್ವರನನ್ನು ಪ್ರಾರ್ಥಿಸುತ್ತಾನೆ. ಆಗ ಶಿವನು ಅವನಿಗೆ ದುರ್ಗಾಂವಿನಲ್ಲಿ ಆಶ್ರಯ ಕೊಡುತ್ತಾನೆ. ಹಾಗಾಗಿ ಆ ಹಳ್ಳಿಯವರ ಪ್ರಕಾರ ಈ ಶಿವ ದೇವಾಲಯದಲ್ಲಿ ದುರ್ಯೋಧನನಿಗೂ ಆಶ್ರಯ ಸಿಕ್ಕಿದೆಯಂತೆ.

ಈ ದೇವಸ್ಥಾನದಲ್ಲಿ ಮೂರು ವರ್ಷಕ್ಕೊಮ್ಮೆ ಬರುವ ಅಧಿಕ ಮಾಸದಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಆಗ ಮಹಾರಾಷ್ಟ್ರದಿಂದಷ್ಟೇ ಅಲ್ಲದೆ ಬಿಹಾರ, ಒರಿಸ್ಸಾ, ಅಸ್ಸಾಂ ಕಡೆಗಳಿಂದಲೂ ಜನ ಬರುತ್ತಾರೆ. ಆ ಕಾಲದಲ್ಲಿ ಉತ್ಸವ, ಊಟೋಪಚಾರ ಬಹಳ ಅದ್ದೂರಿಯಾಗಿ ನಡೆಯುತ್ತದೆ.

ಈ ದೇವಸ್ಥಾನದ ಪೂಜೆಯನ್ನು ಮಹಾರಾಷ್ಟ್ರದ ಒಂದು ಪಂಗಡದ ಜನ ನಡೆಸುತ್ತಾರೆ. ವಿಚಿತ್ರವೆಂದರೆ ಆ ಪಂಗಡದವರು ಈ ಹಳ್ಳಿಯಲ್ಲಿ ಯಾರೂ ಇಲ್ಲವೆಂದು ತಿಳಿದುಬಂದಿದೆ. ಈ ಪಂಗಡದ ಜನಕ್ಕೆ ದುರ್ಯೋಧನನ ಮೇಲೆ ಅಪಾರ ಭಕ್ತಿ ಹಾಗೂ ನಂಬಿಕೆ ಇದೆ. ದುರ್ಯೋಧನನನ್ನು ಆರಾಧಿಸುವ ಜನ ಬಿಹಾರ್ ಮತ್ತು ಒರಿಸ್ಸಾದ ಗುಡ್ಡಗಾಡು ಪ್ರದೇಶಗಳಲ್ಲಿದ್ದಾರೆ.

ಅಂತೂ ಪುರಾಣದಲ್ಲಿ ದುರ್ಯೋಧನನನ್ನು ಖಳನಾಯಕನನ್ನಾಗಿ ಮಾಡಿ ಕಡೆಗಣಿಸಿದ್ದರೂ ಈಗಿನ ಕೆಲವು ಜನರಾದರೂ ಅವನನ್ನು ಪೂಜಿಸಿ ಗೌರವಿಸುವುದು ಸೋಜಿಗವೇ ಸರಿ.



**ಈ ದಿನಗಳಲ್ಲಿ ರಾಜಕೀಯದಲ್ಲಿ ಹೊಸ ನೀತಿ ಸಂಹಿತೆಗಳ ಬೇಡಿಕೆ ಬಹಳವಾಗಿರುವುದರ ಕಾರಣವೇನು?**

**ಅಧಿಕಾರ ಗ್ರಹಣದ ಸಂದರ್ಭದಲ್ಲಿ ಅವು ಮೇಲಿಂದ ಮೇಲೆ ಹಿಡಿಯಲ್ಪಟ್ಟು ಹಳತಾಗಿರುವುದು.**

**–ಬಿಲ್‌ವ್ಯಾನ್**

# ಹೂಗಳಿಂದ ಆರೋಗ್ಯ

**ನಡಿಬೈಲು ಉದಯಶಂಕರ**

ಆಧುನಿಕ ವೈದ್ಯ ವಿಜ್ಞಾನ ಈಗ ಪ್ರಚಂಡ ಪ್ರಗತಿ ಸಾಧಿಸಿದೆ. ಆದರೆ ಹೊಸ ಹೊಸ ಸಂಶೋಧನಾ ವರದಿಗಳು ಅಷ್ಟೇ ಭೀತಿಯನ್ನು ಹುಟ್ಟಿಸುತ್ತಿವೆ. ಪ್ರತಿಜೈವಿಕಗಳ ಬಹುಮುಖ ಶ್ರೇಣಿ, ಸ್ಟೀರಾಯ್ಡ್ಸ್ ಮುಂತಾದ 'ಸಂಜೀವಿನಿ'ಗಳ ವಿಕೃತ ಪ್ರಭಾವವನ್ನು ತಿಳಿದಾಗ ನಾವು ಬೆಚ್ಚಿ ಬೀಳುತ್ತೇವೆ.

ಆದರೆ ಆಯುರ್ವೇದದ ಔಷಧಗಳು ಹಾಗಲ್ಲ. ಸಾವಧಾನವಾಗಿಯಾದರೂ ಹಿತಕರವಾದ ಪ್ರಭಾವವನ್ನವು ಬೀರಬಲ್ಲವು. ಅತಿಪ್ರಾಚೀನವಾದ ಆಯುರ್ವೇದದ ಚಿಕಿತ್ಸಾ ಪದ್ಧತಿಯಲ್ಲಿ ಆಗಾಗ ಸುಧಾರಣೆಗಳು ಆಗುತ್ತಲೇ ಬಂದಿವೆ. ಹದಿನಾರನೆಯ ಶತಮಾನದ ಸುಮಾರಿಗೆ ಖನಿಜ ದ್ರವ್ಯಗಳೂ ಆಯುರ್ವೇದದಲ್ಲಿ ಬೆರೆತುಕೊಂಡವು. ಆಗ ಪ್ರಚಲಿತವಿದ್ದ ಪಾದರಸದಿಂದ ಉಚ್ಚಮಟ್ಟದ ಲೋಹಗಳ ನಿರ್ಮಾಣದ ಧಾತುವಾದವು ಮುಂದೆ ದೇಹವಾದವಾಗಿ ಮಾರ್ಪಟ್ಟಿತು. 'ರಸಶಾಸ್ತ್ರ' ಎಂಬ ಹೊಸ ವಿಭಾಗವು ತೆರೆದುಕೊಂಡಿತು. ರೋಗಿಗೂ ಗೊತ್ತಾಗದಷ್ಟು ಅಲ್ಪ ಪ್ರಮಾಣದ ಔಷಧಿ ಸೇವನೆಯಿಂದ ಬೇಗನೆ ರೋಗಗಳನ್ನು ಗುಣಪಡಿಸಲು ಇದು ನೆರವಾಯಿತು.

ನಮ್ಮ ಸುತ್ತಮುತ್ತಲಿನ ಹೂ ಬಳ್ಳಿಗಳೂ ಔಷಧಿಯೇ ಆಗಿವೆ ಎಂದರೆ ನಮಗೆ ಅಚ್ಚರಿಯಾಗಬಹುದಲ್ಲವೆ? ಹೌದು. ಆಯುರ್ವೇದವು ಹೆಚ್ಚಿನ ಎಲ್ಲಾ ಹೂಗಳ ವೈದ್ಯಕೀಯ ಗುಣಧರ್ಮಗಳನ್ನು ಕಂಡುಕೊಂಡಿದೆ.

ತುಳಸಿ ಹೂ ಗಿಡವಲ್ಲ. ಇದರ ಹಲವು ಔಷಧೀಯ ಪ್ರಯೋಜನಗಳನ್ನು ನಮ್ಮ ಗ್ರಾಮೀಣ ಜನತೆ ದಿನ ನಿತ್ಯ ಪಡೆದುಕೊಳ್ಳುತ್ತಿದ್ದಾರೆ. ಇದರ ರಸವನ್ನು ಒಂದೊಂದು ಚಮಚದಂತೆ ದಿನಕ್ಕೆರಡು ಬಾರಿ ಕುಡಿದಲ್ಲಿ ನೆಗಡಿ ಗುಣವಾಗುವುದು. ಅಥವಾ ಏಳೆಂಟು ತುಳಸಿ ದಳಗಳನ್ನು ಕರಿಮೆಣಸು, ಜೀರಿಗೆಗಳೊಂದಿಗೆ ಕಷಾಯ ಮಾಡಿ ಕುಡಿಯುವುದು ಇನ್ನಷ್ಟು ಉತ್ತಮ ಉಪಶಮನ ನೀಡುತ್ತದೆ. ಸಾಮಾನ್ಯ ಚರ್ಮರೋಗಗಳಾದ ತುರಿಕಜ್ಜಿ, ಹುಳಿ ಮೇಯುವುದು ಮುಂತಾದವುಗಳಿಗೆ ತುಳಸಿ ರಸದ ಲೇಪ ಉತ್ತಮ ಔಷಧಿಯಾಗಿದೆ. ಊಟಕ್ಕೆ ಮೊದಲು ಒಂದೆರಡು ತುಳಸಿ ಎಲೆಗಳನ್ನು ಜಗಿಯುವುದರಿಂದ ಪಾಚಕಾಂಗಗಳು ಚುರುಕಾಗುತ್ತವೆ. ಊಟದ ನಂತರ ಹೊಟ್ಟೆ ಭಾರವೆನಿಸಿದರೆ ಆಗಲೂ ನಾಲ್ಕೈದು ತುಳಸಿ ಎಲೆಗಳನ್ನು ಜಗಿದರೆ ಒಳ್ಳೆಯ ಪರಿಣಾಮ ದೊರೆಯುತ್ತದೆ. ಮಲಬದ್ಧತೆಯುಂಟಾದಾಗ ನಾಲ್ಕೈದು ಒಣಗಿದ ತುಳಸೀ ಬೀಜಗಳನ್ನು ನೀರಿನಲ್ಲಿ ನೆನೆ ಹಾಕಿ ಸಕ್ಕರೆಯೊಡನೆ ಕೂಡಿಸಿ ತಿನ್ನಬೇಕು. ಇದು ವಿರೇಚಕವಾಗಿ ಕೆಲಸ ಮಾಡುತ್ತದೆ.

ಗುಲಾಬಿ ಹೂ ಸೌಂದರ್ಯದ ರಾಣಿ. ಕಣ್ಣಿಗೆ ಮಾತ್ರವಲ್ಲ ಮನಸ್ಸಿಗೂ ಇದು ತಂಪು ನೀಡುತ್ತವೆ. ಇದರ ಕಂಪು ಆಹ್ಲಾದಕರ. ಚರ್ಮರೋಗಗಳಲ್ಲಿ ತುಂಬಾ ಕಸಿವಿಸಿಯನ್ನುಂಟು ಮಾಡುವ ಚರ್ಮದ ಬಣ್ಣದಲ್ಲಿ ಬದಲಾವಣೆಯಾಗುವ ರೋಗವನ್ನು ಇದು ಗುಣಪಡಿಸುತ್ತದೆ. ಬಾತುಕೊಂಡ ಹುಣ್ಣುಗಳು ಹೂವಿನ ರಸದ ಲೇಪದಿಂದ ಗುಣಮುಖವಾಗುತ್ತವೆ. ಇದರ ಅವಚೂರ್ಣನ (ಡೆಸ್ಟಿಂಗ್) ಮಾಡುವುದರಿಂದ ವ್ರಣಗಳು ಬೇಗನೆ ಮಾಯುತ್ತವೆ. ಅತಿಯಾದ ಬೆವರುವಿಕೆಯಿಂದ ಮೈ ವಾಸನೆ ಬರುವುದಿದ್ದರೆ ಚರ್ಮದ ಮೇಲೆ ಇದರ ರಸವನ್ನು ಹಚ್ಚಿಕೊಳ್ಳಬೇಕು. ಜಠರ, ಕರುಳುಗಳು ಮತ್ತು ಯಕೃತ್ತಿಗೆ ಇದು ಬಲವನ್ನು ಕೊಡುತ್ತದೆ. ಇದರ ಸೇವನೆಯಿಂದ ನಪುಂಸಕತ್ವ ನಿವಾರಣೆಯಾಗುವುದೆಂಬ ನಂಬಿಕೆಯೂ ಪ್ರಚಲಿತವಿದೆ.

ಪಾರಿಜಾತವು ಶ್ರೀಕೃಷ್ಣನಿಂದಾಗಿ ಈ ಭೂವಿಗೆ ಬಂದ ಕತೆ ನಮಗೆಲ್ಲ ಪರಿಚಿತ. ಇದು ಆಯುರ್ವೇದದಲ್ಲಿ ವಿವರಿಸಿದ ಜ್ವರನಾಶಕ ಔಷಧಿಗಳಲ್ಲಿ ಅಗ್ರ ಪಂಕ್ತಿಯಲ್ಲಿ ನಿಲ್ಲುತ್ತದೆ. ಕೆಂಗಣ್ಣು ಉಂಟಾದಾಗ ಇದರ ಕಷಾಯದಿಂದ ಕಣ್ಣನ್ನು ತೊಳೆಯಬೇಕು. ಹೆರಿಗೆಯ ನಂತರ ಬಾಣಂತಿಯ ಎದೆಹಾಲು ಕಡಿಮೆಯಾಗಿದ್ದರೆ ಇದರ ತೊಗಟೆ ಹಾಗೂ ಎಲೆಗಳ ಕಷಾಯವನ್ನು ಕುಡಿಯಬೇಕು. ಇದರಿಂದ ಹಾಲಿನ ಪ್ರಮಾಣ ಹೆಚ್ಚುವುದು. ತುಂಬಾ ದಿನಗಳಿಂದ ವಾಸಿಯಾಗದ ಮತ್ತು ಹೆಚ್ಚಾಗಿ ಕೀವು ಬರುವ ಹುಣ್ಣುಗಳನ್ನು ಪಾರಿಜಾತದ ಎಲೆಯ ಕಷಾಯದಿಂದ ತೊಳೆಯುವುದರಿಂದ ಗಾಯವು ಶುದ್ಧವಾಗಿ ಬೇಗನೆ ವಾಸಿಯಾಗುತ್ತದೆ.

ಅಗಲವಾಗಿ ಬಿಳಿಯಾಗಿ ಅರಳಿ ನಿಂತ ಮಂದಾರಕ್ಕೆ ತನ್ನದೇ ಆದ ಸೊಗಸು ಇದೆ. ಸಂಸ್ಕೃತದ ಕವಿಗಳು ಇದನ್ನು 'ಗಂಡಾರಿ' ಎಂದು ವರ್ಣಿಸುತ್ತಾರೆ. ಗಂಡಮಾಲಾ ರೋಗವನ್ನು ಇದು ಗುಣಪಡಿಸುವುದರಿಂದ ಈ ಹೆಸರು ಬಂದಿದೆ. ಇದರ ರಸವನ್ನು ಕುಡಿದರೆ ಕೆಮ್ಮು ವಾಸಿಯಾಗುತ್ತದೆ. ಪ್ರಮೇಹ ರೋಗಗಳು, ಕ್ರಿಮಿಗಳಿಂದ ಉಂಟಾಗುವ ರೋಗಗಳು, ಕುಷ್ಠರೋಗ, ಮೇದೋವಿಕಾರಗಳು ಮುಂತಾದವುಗಳಲ್ಲೂ ಮಂದಾರ ಯೋಗ್ಯ ಪ್ರಭಾವ ಬೀರಿ ವಾಸಿಮಾಡುತ್ತದೆ.

ನಮ್ಮ ಗುಡ್ಡಗಾಡುಗಳಲ್ಲಿ ಕೆಂಪುಕೆಂಪಾಗಿ ಗೊಂಚಲುಗಳಲ್ಲಿ ಅರಳುವ ಕೇಪಳ ಹೂವು ದುರ್ಗಾದೇವಿಗೆ ಪ್ರಿಯವಂತೆ. ಕಿಸ್ಕಾರ, ಪಟ್ಕಳಿ ಮುಂತಾದ ಹೆಸರುಗಳಿಂದಲೂ ಇದನ್ನು ಕರೆಯುತ್ತಾರೆ. ಕಡುಬೇಸಿಗೆಯಲ್ಲಿ ಬಾಯಾರಿ ಗಂಟಲೊಣಗಿದಾಗ ಇದರ ಹೂಗಳನ್ನು ಜಗಿದಲ್ಲಿ ಬಾಯಾರಿಕೆ ಕಡಿಮೆಯಾಗಿ ಹಿತವೆನಿಸುತ್ತದೆ. ಮೂತ್ರದಲ್ಲಿ ಉರಿಯಿದ್ದಾಗ ಈ ಹೂವಿನ ರಸವನ್ನು ಸೇವಿಸಿದರೆ ಒಂದೆರಡು ದಿನಗಳಲ್ಲಿಯೇ ಶಮನವಾಗುವುದು. ತುಂಬಾ ದಿನಗಳಿಂದ ನೆಗಡಿಯ ಬಾಧೆಯಿದ್ದರೆ ಇದರ ಬೇರಿನೊಂದಿಗೆ ಕುದಿಸಿದ ಎಣ್ಣೆಯನ್ನು ತಲೆಗೆ ಹಚ್ಚಿ ಸ್ನಾನ ಮಾಡುವುದು ಒಳ್ಳೆಯದು. ಈ ಎಣ್ಣೆಯಿಂದ ನಿದ್ರೆ ಬಾರದಿರುವವರಿಗೆ ಸುಖಕರವಾದ ನಿದ್ರೆಯೂ ಬರುತ್ತದೆ.

ಸರೋವರಗಳನ್ನು ಅಲಂಕರಿಸುವಂತೆ ಅರಳಿ ನಿಲ್ಲುವ ನೈದಿಲೆ ಹಲವಾರು ಔಷಧೀಯ ಸತ್ವಗಳಿಂದ ಕೂಡಿದೆ. ಗರ್ಭಾವಸ್ಥೆಯಲ್ಲಿ ಇದನ್ನು ಸೇವಿಸುವುದರಿಂದ ಗರ್ಭಸ್ರಾವದ ಭಯ ಇರುವುದಿಲ್ಲ. ಮೂರ್ಛೆ, ಅಪಸ್ಮಾರ ಮುಂತಾದವುಗಳಲ್ಲೂ ಹೃದ್ರೋಗ-ರಕ್ತಪಿತ್ತಗಳಲ್ಲೂ ಇದು ಗುಣಕಾರಿ ಎನಿಸುತ್ತದೆ. ಅವಶ್ಯಕತೆಗೆ ತಕ್ಕಂತೆ ಇದರ ಚೂರ್ಣ ಮತ್ತು ಕಷಾಯಗಳನ್ನು ಮಾಡಿ ಉಪಯೋಗಿಸಿಕೊಳ್ಳಬಹುದು. ಜ್ವರ, ಮೈ ಉರಿ ಮುಂತಾದವುಗಳಲ್ಲಿ ಪುಷ್ಪದ ಲೇಪನದಿಂದ ಉಪಶಮನವಾಗುತ್ತದೆ.

ಸಂಜೆ ನೆಲದ ತುಂಬ ಉದುರಿಬಿದ್ದ ನಕ್ಷತ್ರಗಳಂತೆ ಕಾಣುವ ಹಿತವಾದ ಸುವಾಸನೆಯುಳ್ಳ ರೆಂಜೆಯು ಹಲ್ಲುಗಳಿಗೆ ಒಳ್ಳೆಯ ವನಸ್ಪತಿ ಎಂಬುದು ನಮ್ಮಲ್ಲಿ ಬಹಳರಿಗೆ ಗೊತ್ತಿಲ್ಲ. ಹಲ್ಲಿನ ನೋವು, ಒಸಡಿನ ಬಾವು, ರಕ್ತಸ್ರಾವ ಮುಂತಾದವುಗಳುಂಟಾದಾಗ ರೆಂಜೆಯ ಮರದ

ತೊಗಟೆಯಿಂದ ಹಲ್ಲುಜ್ಜಬೇಕು. ಹೆಚ್ಚಿನ ಆಯುರ್ವೇದೀಯ ಟೂತ್‌ಪೇಸ್ಟ್, ಟೂತ್ ಪೌಡರುಗಳ ಪ್ರಮುಖ ಘಟಕವು ಇದೇ ಆಗಿದೆ. ರೆಂಜೆ ಹೂವನ್ನು ಒಣಗಿಸಿ ಪುಡಿ ಮಾಡಿಟ್ಟು ಕೊಂಡು ಅದನ್ನು ನಸ್ಯದಂತೆ ಸೇವಿಸುವುದರಿಂದ ಹಲವು ರೀತಿಯ ತಲೆನೋವುಗಳು ನಿವಾರಣೆ ಯಾಗುತ್ತವೆ. ಈ ಪುಡಿಯನ್ನು ಬಿಸಿನೀರಿ ನೊಂದಿಗೆ ಸೇರಿಸಿ ಕುಡಿಯುವುದರಿಂದ ಜ್ವರ ಬಿಟ್ಟ ನಂತರದ ದೌರ್ಬಲ್ಯವು ಪರಿಹಾರವಾಗು ತ್ತದೆ. ಪಕ್ವವಾದ ರೆಂಜೆ ಹಣ್ಣು ಆಮಶಂಕೆ ಯನ್ನು ಗುಣಪಡಿಸುತ್ತದೆ.

ಎಲ್ಲೆಡೆ ಕಾಣಸಿಗುವ ತುಂಬೆ ಹೂವು ಕಾಮಾಲೆ ರೋಗಕ್ಕೆ ಉತ್ತಮ ಔಷಧಿಯಾಗಿದೆ. ತುಂಬೆ ಎಲೆಯ ರಸವನ್ನು ದಿನಕ್ಕೆರಡು ಬಾರಿ ಸೇವಿಸುವುದರಿಂದ ರಕ್ತದೋಷಗಳು ನಿವಾರಣೆ ಯಾಗುತ್ತವೆ. ಮುಟ್ಟು ಸರಿಯಾಗಿ ಆಗದಿರು ವುದು, ಕಷ್ಟಾರ್ತವ ಮುಂತಾದ ಹೆಂಗಸರ ಕಾಯಿಲೆಗಳನ್ನು ಇದು ಗುಣಪಡಿಸುತ್ತದೆ. ವಿಷಮಶೀತ ಜ್ವರದಲ್ಲೂ ಇದು ಒಳ್ಳೆಯ ಪ್ರಭಾವವನ್ನು ಬೀರುತ್ತದೆ. ಬೇರಿನಿಂದ ಹಿಡಿದು ಇದರ ಎಲ್ಲ ಭಾಗಗಳನ್ನೂ ಉಪ ಯೋಗಿಸಬಹುದಾದರೂ ಎಲೆಯ ರಸವನ್ನು ಸೇವಿಸುವುದು ಶ್ರೇಯಸ್ಕರವೆನಿಸಿದೆ.



"ಪರೀಕ್ಷೆಯಲ್ಲಿ ಪ್ರಶ್ನೆಗಳ ಸುರಿಮಳೆ ಆಗುವ ಸಂಭವ ಇದೆ. ಅದಕ್ಕೋಸ್ಕರ ಕೊಡೆ ತೆಗೆದು ಕೊಂಡು ಹೋಗು..."

ಹೂವಿನ ಸಹಜ ಮೃದುತ್ವ, ಪರಿಮಳಗಳಾ ವುವೂ ಇಲ್ಲದಿದ್ದರೂ ಎಕ್ಕದ ಹೂ ಪೂಜಾದಿ ಗಳಲ್ಲಿ ಬಳಕೆಯಾಗುತ್ತದೆ. ಇದು ಸೂರ್ಯ ನಿಗೆ ಸಮಾನವಾಗಿ ತೀಕ್ಷ್ಣವಿರುವುದೆಂದು ವರ್ಣಿ ಸುವ ಸಂಸ್ಕೃತ ಕವಿಗಳು ಇದನ್ನು 'ಅರ್ಕ' ಎಂದೇ ಕರೆಯುತ್ತಾರೆ. ಆಯುರ್ವೇದದ ಔಷಧಿ ನಿರ್ಮಾಣ ವಿಧಾನದಲ್ಲೂ ಇದಕ್ಕೆ ಮಹತ್ವದ ಸ್ಥಾನ ನೀಡಲ್ಪಟ್ಟಿದೆ. ಅಜೀರ್ಣ, ಹೊಟ್ಟೆ ನೋವು ಹೊಟ್ಟೆಯುಬ್ಬರ ಮುಂತಾದವುಗಳಿ ದ್ದಾಗ ಎಕ್ಕದ ಎಲೆಯನ್ನು ಸೈಂಧವಲವಣ ದೊಂದಿಗೆ ಸೇರಿಸಿ ಸೇವಿಸಬೇಕು. ಕುರು ಎದ್ದಾಗ ಅದರ ಸುತ್ತಲೂ ಎಕ್ಕದ ಹಾಲನ್ನು ಹಚ್ಚು ವುದರಿಂದ ಅದು ಒಂದೆರಡು ದಿನಗಳಲ್ಲೇ ಹಣ್ಣಾಗಿ ಒಡೆದುಬಿಡುತ್ತದೆ. ಇದರಿಂದ ಶೀಘ್ರ ಉಪಶಮನ ದೊರೆತಂತಾಗುತ್ತದೆ. ತುಂಬಾ ಹಳೆಯ ಚರ್ಮರೋಗಗಳಲ್ಲೂ ಇದು ಪ್ರಭಾವ ಬಿರುತ್ತದೆ ಆದರೆ ಬಾವು, ತುರಿಕೆ ಮುಂತಾದವುಗಳು ಹೆಚ್ಚಿದಲ್ಲಿ ಇದರ ಪ್ರಯೋಗ ವನ್ನು ಕೂಡಲೇ ನಿಲ್ಲಿಸಿಬಿಡಬೇಕು.

ನಮ್ಮ ಹಳ್ಳಿಗಳಲ್ಲಿ ಗರ್ಭನಿರೋಧಕವಾಗಿ ದಾಸವಾಳ ಹೂವನ್ನು ಬಳಸಿಕೊಳ್ಳುತ್ತಾರೆ. ರಾಸಾಯನಿಕ ಪರೀಕ್ಷೆಗೊಳಪಡಿಸಿದಾಗ ಸಾರ ಜನಕ, ಏಸಾ, ಕ್ಯಾಲ್ಸಿಯಂ, ರಂಜಕ, ಕಬ್ಬಿಣ, ಬಿ ಮತ್ತು ಸಿ ಅನ್ನಾಂಗಗಳು ಇದರಲ್ಲಿ ಕಂಡು ಬರುತ್ತವೆ. ಇದು ಮಸ್ತಿಷ್ಕ ದೌರ್ಬಲ್ಯ. ಉನ್ಮಾದಗಳಂತಹ ರೋಗಗಳಲ್ಲೂ ರಕ್ತಪ್ರದರ ಮುಂತಾದ ಪ್ರಜನನ ಸಂಸ್ಥಾನೀ ರೋಗ ಗಳಲ್ಲೂ ಉಪಯುಕ್ತವಾಗಿದೆ. ರಕ್ತಸ್ತಂಭಕ ವಾಗಿಯೂ ಕಾರ್ಯಮಾಡುತ್ತದೆ. ಗಾಯಗಳಿಗೆ ಇದರ ಹೂವಿನ ರಸವನ್ನು ಹಚ್ಚಬಹುದು. ತಲೆ ಕೂದಲು ಉದುರುವುದು, ಬೇಗನೆ ಬಿಳಿಯಾಗು ವುದು ಮುಂತಾದ ತೊಂದರೆಗಳಲ್ಲಿ ಈ ಹೂವನ್ನು ಗೋಮೂತ್ರದೊಂದಿಗೆ ಬೀಸಿ ಹಚ್ಚಬೇಕು. ಹೂ ಗಳನ್ನು ಎಣ್ಣೆಯೊಂದಿಗೆ ಕಾಯಿಸಿ ತಯಾರಿಸುವ

ತೈಲವು ಹಲವು ವಿಧದ ಶಿರೋರೋಗಗಳಲ್ಲಿ ಉಪಯುಕ್ತ.

ಹಳದಿ, ನೀಲಿ, ಬಿಳಿ, ನೇರಳೆ ಹೀಗೆ ಬೇರೆ ಬೇರೆ ಬಣ್ಣಗಳಲ್ಲಿರುವ ಗೊರಂಟೆ ಹೂವು ಹುಡುಗಿಯರಿಗೆ ಬಹು ಇಷ್ಟ. ಬಾಯಿ ಹುಣ್ಣಾದಲ್ಲಿ ಇದರ ಎಲೆಯ ಕಷಾಯದಿಂದ ಬಾಯಿ ಮುಕ್ಕಳಿಸಬೇಕು. ಹಲ್ಲು ನೋವಿಗೂ ಇದು ಒಳ್ಳೆಯ ಔಷಧಿ. ಮಕ್ಕಳ ಕಫ ಮತ್ತು ಕೆಮ್ಮುಗಳಿಗೆ ಇದರ ಎಲೆಯ ರಸವನ್ನು ಜೇನಿನೊಂದಿಗೆ ಕೂಡಿ ಮಿಶ್ರಿಸಿ ಕೊಡಬೇಕು.

ಸಂಪಿಗೆಯ ಕಂಪು ಬಹಳ. ಇದರ ಹೂವಿನ ಲೇಪವನ್ನು ಮಾಡಿದರೆ ದಾಹ, ತುರಿಕೆ, ತಲೆನೋವು ಮುಂತಾದವುಗಳು ನಿವಾರಣೆಯಾಗುತ್ತವೆ. ಇದರ ತೊಗಟೆಯಿಂದ ಕಷಾಯ ತಯಾರಿಸಿ ಕುಡಿದಲ್ಲಿ ಬಾಯಿ ರುಚಿ ಇಲ್ಲದಿರುವಿಕೆ, ಹಸಿವಿಲ್ಲದಿರುವುದು, ಹೃದಯದಲ್ಲಿ ವೇದನೆ, ದೌರ್ಬಲ್ಯ ಬಾವು, ಕೆಮ್ಮು-ದಮ್ಮು, ಮುಂತಾದ ಹಲವು ರೋಗಗಳಲ್ಲಿ ಗುಣ ಕಾಣುತ್ತದೆ. ಇದರ ಬೇರಿನ ತೊಗಟೆಯು ಗಂಧವನ್ನು ಕೊಡುವುದರಿಂದ ಋತು ಕಾಲದಲ್ಲಿ ಆಗುವ ನೋವು ಉಪಶಮನವಾಗುತ್ತದೆ. ಇದರ ಒಣಗಿದ ಹೂವಿನ ಪುಡಿಯನ್ನು ಬಿಸಿನೀರಿನಲ್ಲಿ ಸೇರಿಸಿ ಕುಡಿಯುವುದರಿಂದ ವಿಷಮ ಶೀತಜ್ವರ, ಮೂತ್ರ ವಿಸರ್ಜನೆಯ ತೊಂದರೆಗಳು, ಉಪದಂಶದಂತಹ ಲೈಂಗಿಕ ರೋಗಗಳು ಗುಣಮುಖವಾಗುತ್ತವೆ.

ಮೈಸೂರು ಮಲ್ಲಿಗೆ, ಮಂಗಳೂರು ಮಲ್ಲಿಗೆ ಎಂದು ಬೇರೆ ಬೇರೆ ಪ್ರಭೇದಗಳನ್ನು ನಾವು ಹೇಳುತ್ತೇವಾದರೂ, ಎಲ್ಲಾ ಮಲ್ಲಿಗೆಗಳೂ ಅಚ್ಚುಮೆಚ್ಚು. ಚಿಕಿತ್ಸಾ ವಿಭಾಗದಲ್ಲೂ ಮಲ್ಲಿಗೆಯು ಮನ್ನಣೆಯ ಮಣೆಯೇರಿ ಕುಳಿತಿದೆ. ದುರ್ಗಂಧ ಮುಂತಾದ ಬಾಯಿಗೆ ಸಂಬಂಧಿಸಿದ ಹಲವಾರು ರೋಗಗಳಲ್ಲಿ ಇದರ ಎಲೆಯ ಕಷಾಯವನ್ನು ಬಾಯಿ ಮುಕ್ಕಳಿಸಬೇಕು. ಹಲ್ಲುನೋವು ಮತ್ತು ಹಲ್ಲಿನ ದೌರ್ಬಲ್ಯಗಳಲ್ಲಿ ಇದರ ಎಲೆಗಳನ್ನು ಜಗಿಯುತ್ತಿರಬೇಕು. ಪಕ್ಷಾಘಾತ, ಅರ್ದಿತವಾತ (Facial paralysis) ಮುಂತಾದ ತೀವ್ರ ಪ್ರಕಾರದ ವಾತ ವಿಕಾರಗಳಲ್ಲಿ ಇದರ ಬೇರನ್ನು ಲೇಪಿಸಬೇಕು. ಇದರ ತೈಲದಿಂದ ಅಭ್ಯಂಗ ಮಾಡಬೇಕು. ಇದರ ತೈಲವು ಹಲವಾರು ರೋಗಗಳಿಗೆ ಉಪಶಮನ ನೀಡುವ ನಿತ್ಯೌಷಧಿ ಎನಿಸಿದ್ದು, ಜಾತ್ಯಾದಿ ತೈಲವು ಆಯುರ್ವೇದ ಪ್ರಪಂಚದ ಅತ್ಯಂತ ಪ್ರಸಿದ್ಧ ವ್ರಣರೋಪಕ ಔಷಧಿಯಾಗಿದೆ. ಇದರ ಎಲೆಗಳನ್ನು ಸೇರಿಸಿ ಕಾಯಿಸಿದ ಎಣ್ಣೆಯು ಕಿವಿ ಸೋರುವುದಕ್ಕೆ ಉತ್ತಮ ಔಷಧಿಯಾಗಿದೆ. ಕೈಕಾಲುಗಳಲ್ಲಿ ಬರುವ 'ಆಣಿ'ಗಳನ್ನು ಇದರ ಎಲೆಯ ರಸವು ಉತ್ತಮ ಪರಿಣಾಮ ಬೀರಿ ಗುಣಪಡಿಸುತ್ತದೆ. ಬಾಣಂತಿ ಕಾಲದಲ್ಲಿ ಮಗು ಸರಿಯಾಗಿ ಹಾಲು ಕುಡಿಯದಿದ್ದಾಗ ಅಥವಾ ಮಗು ತೀರಿಕೊಂಡಿದ್ದರೆ ಅನಂತರ ಆಗುವ ಎದೆಯ ನೋವಿಗೆ ಮಲ್ಲಿಗೆ ಹೂವನ್ನು ಸ್ತನಗಳ ಮೇಲೆ ಇಟ್ಟು ಕಟ್ಟಿಬಿಡಬೇಕು. ಇದರಿಂದ ಉತ್ತಮ ಪರಿಹಾರ ಲಭಿಸುತ್ತದೆ.

ಶಂಖ ಪುಷ್ಪವು ಮಾಂಗಲ್ಯ ಕುಸುಮ ಎಂಬ ನಂಬಿಕೆಯಿದೆ. ಇದು ಮಿದುಳಿನ ಮೇಲೆ ಒಳ್ಳೆಯ ಪ್ರಭಾವ ಬೀರುವುದರಿಂದ ಇದನ್ನು 'ಮೇಧ್ಯ' ಎಂದೂ ಕರೆಯುತ್ತಾರೆ. ನಿದ್ರೆ ಬಾರದಿರುವುದು, ಉನ್ಮಾದ, ಅಪಸ್ಮಾರ ಮುಂತಾದ ರೋಗಗಳಲ್ಲಿ ಇದರ ಪೂರ್ಣ ಗಿಡವನ್ನು ಕಿತ್ತು ಕಷಾಯ ಮಾಡಿ ಕುಡಿದಲ್ಲಿ ಒಳ್ಳೆಯ ಪರಿಹಾರ ಸಿಗುವುದು. ಇದು ಗರ್ಭಾಶಯದ ದೌರ್ಬಲ್ಯವನ್ನು ನಿವಾರಿಸುತ್ತದೆ. ಗರ್ಭಧಾರಣೆ ಆಗದಿದ್ದಲ್ಲಿ, ಆಗಾಗ ಗರ್ಭಸ್ರಾವವಾಗುತ್ತಿದ್ದಲ್ಲಿ ಇದು ಉಪಯುಕ್ತ. ಇದು ಹಲವುವಿಧದ ಮೂತ್ರ ವಿಕಾರಗಳನ್ನೂ ಗುಣಪಡಿಸುತ್ತದೆ.

ಈ ರೀತಿ ಹೂಗಳು ನಮ್ಮ ಆರೋಗ್ಯದ ಮೇಲೆ ಹತ್ತು ಹಲವು ವಿಧದಲ್ಲಿ ಪ್ರಭಾವ ಬೀರಬಲ್ಲವು. ಸ್ವಾಸ್ಥ್ಯ ರಕ್ಷಣೆಯಲ್ಲೂ ನೆರವಾಗಬಲ್ಲವು. ಪ್ರಥಮ ಚಿಕಿತ್ಸೆಯ ಪೆಟ್ಟಿಗೆಗಿಂತ ಅಂಗಳದಲ್ಲಿ ಗಮಗಮಿಸುವ ಹೂಗಳೇ ಒಳ್ಳೆಯ ಚಿಕಿತ್ಸೆಯನ್ನು ನೀಡಬಲ್ಲವು.

**ಸಂಸ್ಕೃತ ಗ್ರಂಥಗಳನ್ನು ಸಂಪಾದಿಸಿದ ಪ್ರಕಟಿಸಿದ ಮೊದಲ ಅಮೇರಿಕನ್**

# ಫಿಜೆಡ್‌ವರ್ಡ್ ಹಾಲ್

**ರಾಜೀವ ಅಜ್ಜೀಬಳ**

ಫಿಜೆಡ್‌ವರ್ಡ್ ಹಾಲ್ ಅಮೇರಿಕದ ಪ್ರಾಚ್ಯ ಭಾಷಾ ಪಂಡಿತ. ಈತ ಸಂಸ್ಕೃತ ಗ್ರಂಥಗಳನ್ನು ಸಂಪಾದಿಸಿದ ಪ್ರಪ್ರಥಮ ಅಮೇರಿಕನ್ನನೂ ಹೌದು.

೨೧ನೆಯ ಮಾರ್ಚ್ ೧೮೨೨ರಲ್ಲಿ ನ್ಯೂಯಾರ್ಕ್‌ನ ಟ್ರಾಯ್ ಎಂಬಲ್ಲಿ ಜನಿಸಿದ. ಈತನ ತಂದೆ ಒಬ್ಬ ಅನುಕೂಲಸ್ಥ ವಕೀಲನಾಗಿದ್ದ. ಚಿಕ್ಕಂದಿನಿಂದಲೂ ಹಾಲ್‌ನಿಗೆ ಶಬ್ದಗಳನ್ನು ಹಾಗೂ ನುಡಿಗಟ್ಟುಗಳನ್ನು ಅಭ್ಯಸಿಸುವುದರಲ್ಲಿ ಅಪಾರ ಆಸಕ್ತಿ. ಅದು ಆತನೊಂದಿಗೇ ಬೆಳೆದುಕೊಂಡು ಬಂದಿತು. ೧೮೪೨ರಲ್ಲಿ ಹಾಲ್ ಹಾರ್ವರ್ಡ್ ಕಾಲೇಜನ್ನು ಸೇರಿದ. ಮನೆ ತ್ಯಜಿಸಿ ಹೋದ ತನ್ನ ಸಹೋದರನೊಬ್ಬನನ್ನು ಹುಡುಕುವ ಜವಾಬ್ದಾರಿ ಹೊತ್ತ ಆತನಿಗೆ ಹೆಚ್ಚು ಕಾಲ ವಿದ್ಯಾಭ್ಯಾಸ ಮುಂದುವರಿಸಲು ಸಾಧ್ಯವಾಗಲಿಲ್ಲ. ಸಹೋದರನನ್ನು ಅರಸುತ್ತ ೧೮೪೬ರ ಸೆಪ್ಟೆಂಬರ್ ತಿಂಗಳಿನಲ್ಲಿ ಭಾರತಕ್ಕೆ ಬಂದ. ಹೂಗ್ಲಿ ನದಿಯಲ್ಲಿ ಅವನ ಹಡಗು ಒಡೆದದ್ದರಿಂದ ಆತ ಕಲ್ಕತ್ತೆಗೆ ಬಂದು ಸೇರಿದ. ಕ್ರಮೇಣ ಅಲ್ಲಿಯೇ ನೆಲೆಸಲು ನಿರ್ಧರಿಸಿದ. ಕಲ್ಕತ್ತೆಯಲ್ಲಿರುವಾಗಲೇ ಹಿಂದಿ, ಉರ್ದು, ಪರ್ಶಿಯನ್, ಸಂಸ್ಕೃತ ಹಾಗೂ ಬಂಗಾಲಿ ಭಾಷೆಗಳನ್ನು ಕಲಿತು ಪತ್ರಿಕಾಲಯವೊಂದರಲ್ಲಿ ಕೆಲಸಕ್ಕೆ ಸೇರಿದ.

ಕಲ್ಕತ್ತೆಯಲ್ಲಿ ಮೂರು ವರ್ಷಕಾಲ ಹಾಗೂ ಘಾಜೀಪುರದಲ್ಲಿ ಐದು ತಿಂಗಳು ಕಳೆದು ೧೮೫೦ರ ಜನವರಿ ೧೬ ರಂದು ವಾರಾಣಸಿಗೆ ಬಂದು ಅಲ್ಲಿಯ ಸರ್ಕಾರಿ ಕಾಲೇಜಿನಲ್ಲಿ ಉಪನ್ಯಾಸಕನಾಗಿ ನೇಮಕಗೊಂಡ. ಸುಮಾರು ಮೂರು ವರ್ಷಗಳ ನಂತರ ಹಾಲ್ ಸಂಸ್ಕೃತ ಹಾಗೂ ಇಂಗ್ಲೀಷ್ ಭಾಷೆಗಳ ಪ್ರೊಫೆಸರ್ ಆಗಿ ನೇಮಕ ಹೊಂದಿದ. ಆಗ ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದ ಜೇಮ್ಸ್ ರಾಬರ್ಟ್ ಬೆಲನ್‌ಟೈನ್ ಹಾಲ್‌ಗೆ ಸಂಸ್ಕೃತ ಭಾಷೆ ಹಾಗೂ ಪ್ರಾಚೀನ ಭಾರತೀಯ ತತ್ತ್ವಜ್ಞಾನವನ್ನು ವಿಶೇಷವಾಗಿ ವ್ಯಾಸಂಗ ಮಾಡಲು ಪ್ರೇರೇಪಿಸಿದ. ತರುಣ ಹಾಲ್ ಆ ನಂತರದ ದಿನಗಳಲ್ಲಿ ಮಹತ್ವದ ಸಂಸ್ಕೃತ ಗ್ರಂಥಗಳ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ ಪ್ರಕಟಿಸಿದ. ಆತ ಪ್ರಪ್ರಥಮವಾಗಿ ಸಂಗ್ರಹಿಸಿ ಪರಿಷ್ಕರಿಸಿದ ಎರಡು ಗ್ರಂಥಗಳು ವೇದಾಂತಕ್ಕೆ ಸಂಬಂಧಪಟ್ಟವುಗಳು, ಅವು ಯಾವವೆಂದರೆ 'ಆತ್ಮಬೋಧ' (ಟೀಕೆ ಸಹಿತ) ಹಾಗೂ 'ತತ್ವಬೋಧ'. ನಂತರ ಆತ 'ಸಾಂಖ್ಯ ಪ್ರವಚನ'ಹಾಗೂ 'ಸಾಂಖ್ಯ–ಸಾರ' ಎಂಬ ಗ್ರಂಥಗಳನ್ನೂ 'ಸೂರ್ಯ ಸಿದ್ಧಾಂತ,' ಸುಬಂಧುವಿನ 'ವಾಸವದತ್ತ,' 'ದಾಸ–ರೂಪ' (ಟೀಕೆ ಸಹಿತ), 'ಭರತನ ನಾಟ್ಯಶಾಸ್ತ್ರ'ದ

ನಾಲ್ಕು ಅಧ್ಯಾಯಗಳನ್ನೂ ಸಂಪಾದಿಸಿ ಪರಿಷ್ಕರಿಸಿದ.

ಭಾರತೀಯ ತತ್ತ್ವಜ್ಞಾನದ ವ್ಯಾಸಂಗಕ್ಕೆ ಅನುಕೂಲವಾಗುವಂತೆ ಅವನು ತಯಾರಿಸಿದ ಆಧಾರ ಗ್ರಂಥಗಳ ಸೂಚಿಪಟ್ಟಿಯು ಆತನ ಮಹತ್ವದ ಕೆಲಸಗಳಲ್ಲೊಂದು. ಹಾಲ್‌ನ ಇನ್ನೊಂದು ಮುಖ್ಯ ಕೆಲಸವೇದರೆ ಹೊರೇಸ ಹೇಮನ್ ವಿಲ್ಸನ್ನನಿಂದ ಅನುವಾದಗೊಂಡ 'ಋಗ್ವೇದ ಸಂಹಿತೆ' ಹಾಗೂ 'ವಿಷ್ಣುಪುರಾಣ'ದ ಕೆಲವು ಭಾಗಗಳನ್ನು ಪುನಃ ಪರಿಷ್ಕರಿಸಿದ್ದು.

ಫಿಜೆಡ್‌ವರ್ಡ್‌ಹಾಲ್‌ನ ಹಿಂದೂ ಸಂಸ್ಕೃತಿಯ ಆಳವಾದ ವ್ಯಾಸಂಗಕ್ಕೆ ಉದಾಹರಣೆಯೆಂದರೆ ನ್ಯಾಯಶಾಸ್ತ್ರ ಹಾಗೂ ತತ್ವಜ್ಞಾನದ ಮೇಲಿನ ಉಪನ್ಯಾಸಗಳು. ಹಿಂದಿ ಹಾಗೂ ಸಂಸ್ಕೃತದಿಂದ ಅನುವಾದಗೊಂಡ 'ಹಿಂದೂ ಪದ್ಧತಿಯಲ್ಲಿಯ ವೈಚಾರಿಕ ಹಿರಿಮೆ' ಹಾಗೂ 'ಪ್ರಾಚೀನ ಹಾಗೂ ಮಧ್ಯ ಕಾಲೀನ ವಾರಾಣಸಿ' ಗ್ರಂಥಗಳು.

೧೮೬೨ರಲ್ಲಿ ಹಾಲ್ ಭಾರತವನ್ನು ಬಿಟ್ಟು ಲಂಡನ್ನಿನಲ್ಲಿ ನೆಲೆಸಿದ. ಅಲ್ಲಿಯ ಕಿಂಗ್ಸ್ ಕಾಲೇಜಿನಲ್ಲಿ ಸಂಸ್ಕೃತ, ಹಿಂದುಸ್ತಾನಿ ಹಾಗೂ ಭಾರತೀಯ ನ್ಯಾಯಶಾಸ್ತ್ರಗಳಲ್ಲಿ ಪ್ರೊಫೆಸರ್ ಆಗಿಯೂ, ಇಂಡಿಯಾ ಕಛೇರಿಯಲ್ಲಿ ಗ್ರಂಥಪಾಲಕನಾಗಿಯೂ ಕೆಲಸ ಮಾಡಿದ.

ಇಂಗ್ಲೀಷಿನ ಬೃಹತ್ ನಿಘಂಟುವಾದ 'ನ್ಯೂ ಇಂಗ್ಲೀಷ್ ಡಿಕ್ಶನರಿ'ಯನ್ನು ರಚಿಸುವಾಗ ಇಂಗ್ಲೀಷ್ ಭಾಷೆಯ ಮೇಲೆ ಸಾಕಷ್ಟು ಪ್ರಭುತ್ವವಿದ್ದ ಹಾಲ್‌ನ ಸಹಾಯವನ್ನು ಪಡೆಯಲಾಯಿತು.

೧೮೬೦ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿಯನಿತ್ತು ಹಾಲ್‌ನನ್ನು ಸನ್ಮಾನಿಸಿತು, ಅದಕ್ಕೆ ಪ್ರತಿಯಾಗಿ ಹಾಲ್ ತನ್ನ ಸಂಗ್ರಹದಲ್ಲಿಯ ೧೦೦ ಹಸ್ತಪ್ರತಿಗಳನ್ನೂ ೧೦೦೦ ವಿಶೇಷ ಕೃತಿಗಳನ್ನೂ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ.

ಭಾರತದ ಬಂಧು ಹಾಗೂ ಪ್ರಕಾಂಡ ಪಂಡಿತ ಫಿಜೆಡ್‌ವರ್ಡ್‌ಹಾಲ್ ೧೯೦೧ರ ಫೆಬ್ರುವರಿ ೧ ರಂದು ಸಪ್ಲೇಕಿನ ಮಾರ್ಲೆಸ್ಫೋರ್ಡ್‌ನಲ್ಲಿರುವ ತನ್ನ ಮನೆಯಲ್ಲಿ ೭೬ನೇ ವಯಸ್ಸಿನಲ್ಲಿ ವಿಧಿವಶನಾದ.

---

## ....ಸ್ಪಂದನ....

ಕಾಯಿ ಭಾರಕೆ
ಕೊಂಬೆ ಬಾಗಿದೆ

ಹೆಜ್ಜೆ ಭಾರಕೆ
ನಿಲುವು ಸೋತಿದೆ...

ಬಸುರಿ ಚಲುವೆಗೆ
ಬಯಕೆ ಕಾಡಿದೆ

ಮೊದಲ ಕಿರಣದಿ
ಆಶೆ ಮೂಡಿದೆ...

ಮಂಜು ಚಲ್ಲಿದೆ
ತೆಂಗು ತೋಟದಿ

ನೀರು ಚಿಮ್ಮಿದೆ
ನೀರೆ ಆಟದಿ...

–ನ್ಯೆದೂರು ಕೃಷ್ಣಮೂರ್ತಿ




ಶ್ರೀ ಮಾಸ್ತಿಯವರೀಗ ಜ್ಞಾನಪೀಠ ಪ್ರಶಸ್ತಿ ವಿಜೇತರು. ಸಣ್ಣ ಕತೆಗಳ ಜನಕರಾಗಿ ಕಾದಂಬರಿ, ಕವಿತೆ, ವಿಮರ್ಶೆ, ನಾಟಕ, ಜೀವನ ಚರಿತ್ರೆ, ಅನುವಾದ, ಸಂಪಾದಕೀಯ – ಇತ್ಯಾದಿ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಅವರು ಕೃಷಿ ಮಾಡಿದ್ದಾರೆ. 'ಅವರ ಸಾಹಿತ್ಯ ಸೃಷ್ಟಿ ಎಷ್ಟು ವಿಪುಲವೋ ಅಷ್ಟೇ ಪ್ರಾಮುಖ್ಯವಾದದ್ದು" ಅವರು ಕನ್ನಡ ನುಡಿ ದೇವಿಯ ಮುಡಿಗೇರಿಸಿದ ಸುಂದರ ಪುಷ್ಪಗಳನೇಕ. ಆ ಸಾಹಿತ್ಯ ಪುಷ್ಪಗಳ ಸ್ನಿಗ್ಧಸೌಂದರ್ಯವನ್ನೂ ಹಿತಕರ ಸುಗಂಧವನ್ನೂ ಸವಿಯದ ಕನ್ನಡಿಗನಿಲ್ಲ.

ಮಾಸ್ತಿಯವರ ಕಥನ ಕವನಗಳಲ್ಲಿ 'ಮಾದಲಿಂಗನ ಕಣಿವೆ' ಹಲವಾರು ದೃಷ್ಟಿಯಿಂದ ವಿಶಿಷ್ಟ್ಯ ವೆನಿಸುತ್ತದೆ. ಅವರ ಬೇರೆ ಕಥನ ಕವನಗಳು, ಕವಿತೆಗಳ ಬಗ್ಗೆ ರಸ ವಿಮರ್ಶೆ ಮಾಡಿರುವ ವಿಮರ್ಶಕರು ಮಾಡಲಿಂಗನ ಕಣಿವೆಯತ್ತ ಕಣ್ಣು ಹಾಯಿಸದಿರುವುದು ಆಶ್ಚರ್ಯವೇ ಸರಿ. ಶ್ರೀ ವಿ.ಸೀ.ಯವರೊಬ್ಬರು ಮಾತ್ರ ಈ ಬಗ್ಗೆ ಒಂದೆರಡು ಮಾತು ಹೇಳಿದ್ದಾರೆ. 'ಸ್ಥಳಗಳ ಹೆಸರುಗಳು' ಎಂಬ ಕವಿತೆಯಲ್ಲಿ ಸರಳ ರಗಳೆಯನ್ನು ಮೊದಲು ಕಂಡು. ಅಲ್ಲಿನ ಮಾದಲಿಂಗನ ಕಣಿವೆಗೆ ಮಾರುಹೋದೆ' ಎಂದಷ್ಟೇ ಅವರು ಹೇಳಿದ್ದಾರೆ.

ಆರ್. ಬಸವರಾಜ

'ಅರುಣ' ಸಂಕಲನದ 'ಸ್ಥಳಗಳ ಹೆಸರು' ಕಥನ ಕಾವ್ಯದ ಒಂದು ಭಾಗವೇ 'ಮಾದಲಿಂಗನ ಕಣಿವೆ.' ಕವಿತೆಯಲ್ಲಿ ಕಥೆ ಹೇಳುವುದೇ ಕಥನ ಕಾವ್ಯ. 'ಈ ಕಥನ ಕಾವ್ಯ ಸ್ಥಳ ಪುರಾಣದ ವಿವರಗಳನ್ನು ಬಿಚ್ಚಿಕೊಳ್ಳುತ್ತ ಮುಂದುವರಿಯುತ್ತದೆ. ಗತ ಕಥಾ ಸಂದರ್ಭವನ್ನೂ ಅಂದಿನ ವಾತಾವರಣವನ್ನೂ ಕಣ್ಣಿಗೆ ಕಟ್ಟಿದಂತೆ ಚಿತ್ರಿಸುತ್ತದೆ. ಈ ಕೃತಿಯು ರಗಳೆಯ ಶೈಲಿ

ಗದ್ಯಕ್ಕೆ ತೀರ ಹತ್ತಿರ. ಸರಳ ಸುಂದರವಾಗಿ, ಗಂಭೀರವಾಗಿ ಕಥೆ ಹೆಣೆದಿರುವ ನೈಪುಣ್ಯ ಪ್ರಶಂಸಾರ್ಹ. ಸರಸದಿಂದ ಪ್ರಾರಂಭವಾಗಿ ವಿರಸದಲ್ಲಿ ಅಂತ್ಯಗೊಳ್ಳುವ ಕಥೆ ಹೃದಯ ವಿದ್ರಾವಕ.

ಮದಲಿಂಗನ ಕಣಿವೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಒಂದು ಹಳ್ಳಿ. ಚಿಕ್ಕನಾಯಕನಹಳ್ಳಿಗೆ ಎಂಟು ಕಿಲೋಮೀಟರ್ ದೂರದಲ್ಲಿದೆ ಈ ಕಣಿವೆ. ತಾಲ್ಲೂಕು ಕೇಂದ್ರದಿಂದ ಈಶಾನ್ಯ ದಿಕ್ಕಿನಲ್ಲಿ ತೀರ್ಥಪುರಕ್ಕೆ (ತೀ.ನಂ.ಶ್ರೀ. ಅವರ ಜನ್ಮಸ್ಥಳ) ಹೋಗುವ ದಾರಿಯಲ್ಲಿದೆ. 'ಸುತ್ತು ಕಣಿವೆ' ಎಂಬ ಬೇರೊಂದು ಹೆಸರೂ ಇದಕ್ಕುಂಟು. ಈ ಕಣಿವೆಗೆ ಹೊಂದಿಕೊಂಡಂತೆ 'ಮದಲಿಂಗನ ಗುಡ್ಡ'ವಿದೆ. ಈ ಗುಡ್ಡ ಮತ್ತು ಕಣಿವೆಯ ಹೆಸರಿನ ಹಿಂದಿರುವ ಕಥೆ ಕರುಣಾಜನಕವಾದದ್ದು. ಎಂಥ ಕಠಿಣ ಹೃದಯಿಗೂ ಕಣ್ಣೀರು ತರಿಸುವಂಥಾದ್ದು.

'ಆ ಬಳಿಯ ಕತೆಯನ್ನು ಕೇಳೆ ಯಾರ ಮನಸಾದರೂ ಕರಗುವುದು' ಎಂದೇ ಕಥೆ ಪ್ರಾರಂಭವಾಗುತ್ತದೆ.

ಅನೇಕ ವರ್ಷಗಳ ಹಿಂದಿನ ಮಾತು. ಈ ಕಣಿವೆಯ ಹತ್ತಿರದಲ್ಲಿ ಒಂದು ಹಳ್ಳಿ. ಆ ಹಳ್ಳಿಯಲ್ಲಿ ಚೆಲುವೆಯರಾದ ಅಕ್ಕ–ತಂಗಿಯರಿಬ್ಬರಿದ್ದರೆಂದು ಕವಿ ಹೇಳುತ್ತಾರೆ. 'ಚೆಲುವೆಯರು' ಎಂಬ ಒಂದೇ ಪದದಲ್ಲಿ ಸ್ತ್ರೀ ವರ್ಣನೆ ಮುಗಿಯುತ್ತದೆ. ಬೇರೆ ಕವಿಗಳಾಗಿದ್ದರೆ ಸ್ತ್ರೀ ಸೌಂದರ್ಯ ವರ್ಣನೆಯ ಪ್ರವಾಹವನ್ನೇ ಹರಿಸಿ ಓದುಗರನ್ನು ಆ ಪ್ರವಾಹದಲ್ಲಿ ದೂಡುತ್ತಿದ್ದರೇನೋ. ಆದರೆ ಮಾಸ್ತಿಯವರು ವರ್ಣನೆಯ ಮಿತಿಯಲ್ಲೆ ಹಿತವಿದೆ ಎಂಬುದನ್ನರಿತವರು. 'ಅತಿ ಸರ್ವತ್ರ ವರ್ಜ್ಯಯೇತ್' ಎಂಬುದನ್ನೂ ಮನಗಂಡವರು. ಕಾವ್ಯಮೀಮಾಂಸೆಯ ಔಚಿತ್ಯಪ್ರಜ್ಞೆಯುಳ್ಳವರು. ಚೆಲುವೆಯರು ಎಂದಷ್ಟೇ ಹೇಳಿ ಕಥೆಯನ್ನು ಮುಂದುವರಿಸುತ್ತಾರೆ. 'ಮದಲಿಂಗ' ಹೆಸರು ಹೇಗೆ ಬಂದಿರಬಹುದೆಂಬುದನ್ನು ಊಹಿಸುತ್ತಾರೆ. ಆ ಹುಡುಗ ಬೇರಾರೂ ಅಲ್ಲ; ಆ ಚೆಲುವೆಯರ ಸ್ವಂತ ಮಾವನ ಮಗನೇ ಎಂದು ಹೇಳಿ ಸಂಬಂಧ ಎಳೆಗಳನ್ನು ಬಿಗಿಗೊಳಿಸುತ್ತಾರೆ. ಬೇರೆ ಕವಿಗಳು ಕೈಬಿಡಬಹುದಾದ ಪುರುಷ ವರ್ಣನೆ ಮಿತವಾಗಿ ಪ್ರಾರಂಭಿಸುತ್ತಾರೆ.

ಮದಲಿಂಗ ಕಟ್ಟಾಳು. ತೇಜಸ್ವಿ ತರುಣ. ಸಾಹಸ ಪ್ರವೃತ್ತಿಯವ. ಸ್ವಾಭಿಮಾನಿ. 'ಅಗಲವಾಗಿರುವ ಎದೆ. ಅಗಲವಾದ ತುಂಬು ಮುಖ. ಹೊಳೆವ ಕಣ್ಣುಗಳು. ನಕ್ಕರೆ ಕುಡಿಮೀಸೆಗಳ ಚಂದ'. ಒಟ್ಟಿನಲ್ಲಿ ನೋಡಿದ ಹೆಣ್ಣುಗಳ ಚಿತ್ತ ಚಂಚಲಗೊಳಿಸುವ ರೂಪ. ಹಿರಿಯ ಹುಡುಗಿಯೊಡನೆ ಅತನ ಲಗ್ನವಾಗಿ ಈಗಾಗಲೇ ಮೂರು ದಿನಗಳಾಗಿವೆ. ಮದುವಣಗಿತ್ತಿಯನ್ನು ತನ್ನ ಮನೆ ತುಂಬಿಸಿಕೊಳ್ಳಬೇಕು. ಕರೆದುಕೊಂಡು ಒಳ್ಳೆಯ ದಿನ ನೋಡಿ ಹೊರಟಿದ್ದಾನೆ.

ಮದುವಣಗಿತ್ತಿಯೊಬ್ಬಳನ್ನೆ ಮೊದಲ ಸಲ ಕಳಿಸಿದವರುಂಟೆ? ಆದ್ದರಿಂದ ಅಕೆಯ ತಾಯಿ ಮತ್ತು 'ಜಾಣೆ' ಹೆಸರಿನ ತಂಗಿಯ ಜೊತೆಗೆ ಹೊರಟಿದ್ದಾರೆ. ಹಾಸ್ಯ, ಸರಸದ ಮಾತುಗಳಿಂದ ಆಯಾಸ ಮಾಯವಾಗಿದೆ. ದೂರದ ದಾರಿ ಹತ್ತಿರವಾಗಿದೆ.

ಅಕ್ಕನನ್ನು ಕಳಿಸಿ ಇನ್ನು ತಾನೊಬ್ಬಳೇ ತೌರಿನಲ್ಲಿರಬೇಕಲ್ಲಾ ಎಂಬ ಚಿಂತೆ ತಂಗಿ ಜಾಣೆಗೆ. ಭಾರವಾದ ದನಿಯಲ್ಲಿ, 'ಅಕ್ಕಯ್ಯಾ, ನೀನು ನಮ್ಮನ್ನು ಬಿಟ್ಟು ಹೋಗುವರೆ ಮನಸು ಬರುವುದೇ?' ಎಂದಳು. ತಂಗಿಯನ್ನು ಅಗಲುವುದು ಅಕ್ಕನಿಗೂ ಕಷ್ಟವೇ. ಚಿಕ್ಕಂದಿನಿಂದ ಒಡನಾಡಿ ಬೆಳೆದವರು. ಜೀವದಲ್ಲಿ ಜೀವವೆಂಬಂತೆ ಮಚ್ಚಾಗಿದ್ದವರು. ತಂಗಿಯ ಮಾತಿಗೆ ಅಕ್ಕ ಕಣ್ಣೀರು ತಂದುಕೊಂಡಳು. ಮಾತು ಮೌನವಾಯಿತು.

ತಾಯಿ ಹೇಳಿದಳು : 'ನಾಳೆ ಗಂಡನ ಮನೆಗೆ ನೀ ಹೋಗದಿರುವೆಯಾ? ಎಲ್ಲರೂ ಹೋಗುವರು. ಮನಸ್ಸು ಬರುವುದು.' ಜಾಣೆ ಆ ಮಾತಿಗೆ ಹುಸಿಮುನಿಸು ತೋರಿ ನನಗಾವ ಗಂಡನೂ ಬೇಡ' ವೆಂದಳು. ಮದಲಿಂಗ ಸುಮ್ಮನಿರುವನೆ? 'ಎಲ್ಲರೂ ಹೀಗೆಯೇ. ಬೇಡ ಬೇಡಾ ಎಂದು ಬಾಯಲ್ಲಿ ಹೇಳುವರು. ಯಾವನೋ ಬಂದು ಕರೆಯುವ ಮುನ್ನ ಓಡುವರು' ಎಂದು ಪರಿಹಾಸ್ಯ ಮಾಡಿದ. ಜಾಣೆ ಸುಮ್ಮನಿರುವವಳೆ?

# ಮಾಸ್ತಿ-ನಮಗಿನ್ನೂ ಬೇಕು

—ಗೋಪಾಲ

ಅಂತಃಕರಣ, ಮಾನವ ಪ್ರೇಮ, ಸಹೃದಯತೆಗಳು ಕೇವಲ ಉಚ್ಚರಿಸಲ್ಪಡುವ ಆಡಂಬರದ ಶಬ್ದಗಳಾಗದೆ ಬದುಕಿನಲ್ಲಿ ಅಳವಡಿಸಿಕೊಂಡು ಆಚರಿಸಲ್ಪಡುವಂತಾಗಬೇಕು ಎಂಬ ಮಾತಿಗೆ ಜೀವಂತ ಉದಾಹರಣೆಯಾಗಿ ನಿಲ್ಲುತ್ತಾರೆ ಮಾಸ್ತಿ. ಬರೆಹದ ಹಾಗೆಯೆ ಬದುಕು ಅವರದು. ಕಷ್ಟಗಳನ್ನು ಕಂಡು ಮಮ್ಮಲ ಮರಗುವ ಈ ಮೃದು ಹೃದಯಿ ತಮ್ಮ ನೂರೆಂಟು ಕೃತಿಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಮೇಲೇರಿದ್ದರೂ ಹೆಮ್ಮೆಯಿಂದ ಬೀಗಿದವರಲ್ಲ, ಸೊಕ್ಕಿನಿಂದ ಮಾತಾಡಿದವರಲ್ಲ, ಸಿಡುಕಿನಿಂದ ದೂರ ಸರಿದವರಲ್ಲ. ಸಲ್ಲದ ನುಡಿಗಳನ್ನು ಕೇಳಿದರೂ ಪ್ರತಿ ಮಾತು ಆಡಿದವರಲ್ಲ. ಮಾಸ್ತಿಯವರು ಯಾರೊಂದಿಗೇ ಆಗಲಿ ನಗುನಗುತ್ತ, ಆತ್ಮೀಯರಾಗಿ ಮಾತಾಡಿ ತಮಗೆ ತಿಳಿದ ಎಲ್ಲವರ ಬಗ್ಗೆಯೂ ಚರ್ಚಿಸುವ ಅಪರೂಪ ಸ್ವಭಾವದವರು.

ಮಾನವಪ್ರೇಮ ದೊಡ್ಡದೆಂಬುದನ್ನು ಅವರ ಕತೆಗಳೇ ಆಗಲಿ, ನಾಟಕಗಳೇ ಆಗಲಿ, ಕಾದಂಬರಿಗಳೇ ಆಗಲಿ ಸಾರಿ ಹೇಳುತ್ತವೆ. ಅವರ ಮಟ್ಟಿಗೆ ಮಾನವ ಪ್ರೇಮ ಕೇವಲ ಘೋಷಣೆಯಲ್ಲ. ಗವೀಪುರದ ಅವರ ಮನೆಗೆ ಹೋದರೆ ಎದುರು ಕಾಣುವುದು ಬೊಗಳಿ ಎದೆಗೆಡಿಸುವ ನಾಯಿಯಲ್ಲ, ಪಂಜರದಲ್ಲಿ ಕುಳಿತು ಸವಿನುಡಿಯಿಂದ ಸ್ವಾಗತಿಸುವ ಗಿಳಿ. ಮುಮ್ಮಜಲಿನ ಆ ಮನೆಯ ಅಟ್ಟವೇ ಮಾಸ್ತಿಯವರ ಸಾಹಿತ್ಯದ ಕಾರ್ಯಾಗಾರ. ನಿಯಮಿತತನ ಅವರ ಬಾಳಿನ ಗೆಲುವಿನ ಗುಟ್ಟು.

ಹತ್ತೊಂಬತ್ತರ ಹರಯದಲ್ಲಿ ಮೊಟ್ಟ ಮೊದಲ ಕತೆ ಬರೆದು ಕನ್ನಡದಲ್ಲಿ ಸಣ್ಣ ಕತೆಗಳ ಸೃಷ್ಟಿಕರ್ತರೆನಿಸಿದ ಮಾಸ್ತಿ ಚಿಕ್ಕ ಚಿಕ್ಕ ವಾಕ್ಯಗಳಿಗೆ, ನೇರ ನಿರೂಪಣೆಗೆ ಹೆಸರುವಾಸಿಯಾದರು. ಅವರ ಹಾಸ್ಯ ನವಿರಾದದ್ದು. ವ್ಯಂಗ್ಯಕ್ಕೆ ಅವರಲ್ಲಿ ಸ್ಥಾನವಿಲ್ಲ.

ಎರಡು ದಶಕಗಳಿಗೂ ಮಿಕ್ಕಿ ಅವರು ಸಂಪಾದಿಸಿದ "ಜೀವನ" ಸಾಹಿತ್ಯಕ ಮಾಸಪತ್ರಿಕೆಯಾದರೂ ಕನ್ನಡ ಭಾಷೆಯ, ಕನ್ನಡ ನಾಡಿನ ಹಿತರಕ್ಷಣೆಯ ಕೆಲಸವನ್ನೂ ಮಾಡಿತು. ನಾಡು ನುಡಿಯ ವಿಷಯದಲ್ಲಿ ಯಾವುದೇ ಅಡ್ಡಿ ಆತಂಕವೆದುರಾದರೂ ಮಾಸ್ತಿ ಸಿಡಿದೇಳುತ್ತಿದ್ದರು, ದನಿಯೆತ್ತುತ್ತಿದ್ದರು. ಈಗಲೂ ಅಷ್ಟೆ.

ಮಾಸ್ತಿಯವರ ಭಾಷಣಗಳೆಂದರೆ ಪಾಂಡಿತ್ಯ ಪ್ರದರ್ಶನವಲ್ಲ. ಮೇಜು ಕುಟ್ಟಿ ಅಬ್ಬರಿಸಿ ಆಡುವ ಮಾತುಗಳೂ ಅಲ್ಲ. ದಿನನಿತ್ಯದ ಆಡು ಮಾತಲ್ಲೇ ಅಂತಃಕರಣದ ನುಡಿಯಲ್ಲೇ ತಾವು ಹೇಳಬೇಕಾದ್ದನ್ನು ಹೇಳುವುದು ಅವರ ರೀತಿ. ಮಾತು ಸ್ವಲ್ಪ ಅವಸರದ್ದು, ಆದರೆ ಅಸ್ಖಲಿತ. ಆ ಮಾತು ಮುತ್ತಿನಂತೆ.

ಸಣ್ಣ ಕತೆಗಳ ಜನಕರೆಂದೆನಿಸಿರುವ ಮಾಸ್ತಿಯವರಿಗೆ ಅವರು ಬರೆದ ಕಾದಂಬರಿಯೊಂದಕ್ಕೆ ಜ್ಞಾನಪೀಠ ಪ್ರಶಸ್ತಿ ಬಂದದ್ದು ಕೆಲವರ ಮನಸ್ಸಿಗೆ ಬರಲಿಲ್ಲ. ಇನ್ನು ಕೆಲವರಿಗಂತೂ ಮಾಸ್ತಿಯವರಿಗೆ ಈ ಪ್ರಶಸ್ತಿ ಕೊಟ್ಟದ್ದೆ ತಪ್ಪೆನಿಸಿತು. ಪ್ರಶಸ್ತಿ ಬಂದದ್ದಕ್ಕೆ ಹಿಗ್ಗದೆ ಈ ಬಗ್ಗೆ ಕೇಳಿಬಂದ ಕಟುನುಡಿಗಳಿಗೆ ಕುಗ್ಗದೆ ಮಾಸ್ತಿಯವರು ತಮಗೆ ಬರುವ ಬಹುಮಾನದ ಹಣವನ್ನು ಏನು ಮಾಡಬೇಕೆಂಬುದರ ಬಗ್ಗೆ ಯೋಚಿಸಿದರು. ಮೂರು ಪಾಲು ಮಾಡಿ ಎರಡು ಪಾಲು ಹಣ ಕನ್ನಡದ ಇತರ ಲೇಖಕರ ಕೃತಿಗಳ ಪ್ರಕಟಣೆಗೆ, ಇನ್ನೊಂದು ಭಾಗವನ್ನು ತಮ್ಮ ಕೃತಿಗಳ ಪ್ರಕಟಣೆಗೆ ತೆಗೆದಿರಿಸಲು ನಿರ್ಧರಿಸಿದ್ದು ಅವರ ಭವ್ಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

ಅವಳ ಹೆಸರೇ ಜಾಣೆ. 'ಭಾವನಿಗೆ ಮದುವೆಯಾಗಿ ಮೂರೇ ದಿನ. ಎಲ್ಲ ಬಲ್ಲವನಂತೆ ಆಡುವುದೆ?' ಎಂದಳು.

ಮದಲಿಂಗನಿಗೂ ಸರಸದಲ್ಲಿ ಆಸೆ. ಅದೂ ಅಲ್ಲದೆ, ಹರೆಯದ ಹುಡುಗಿ ಪಂತ ಹೊಡಿ ಮಾತಾಡಿದರೆ ಮಾತನಾಡದ ಜವ್ವನಿಗನುಂಟೆ?

'ಎಲ್ಲ ಬಲ್ಲೆನೊ ಇಲ್ಲವೊ ನಿನಗೆ ಗೊತ್ತಾಗುವುದು ಹೇಗೆ? ಅಕ್ಕನನ್ನು ಬಿಡಲು ಇಷ್ಟವಿಲ್ಲವಾದರೆ ನೀನೂ ಜೊತೆಗೇ ಬಾ. ಆಗ ತಿಳಿಯುತ್ತೆ' ಎನ್ನಬೇಕೆ? ನಾದಿನಿ ನಾಚಿದಳು. ಪಯಣ ಸಾಗುತ್ತಲೇ ಇದೆ. ಹಿರಿ ಹುಡುಗಿಗೂ ತಂಗಿಯು ಜೊತೆಗೇ ಇರಲೆಂಬ ಆಸೆ. 'ಜೊತೆಯಲ್ಲಿ ಬೆಳೆದ ತಂಗಿಯನ್ನು ಬಿಟ್ಟಿರಲಾರೆ ಎನ್ನ ಕೈ ಹಿಡಿದವರು ಇವಳ ಕೈ ಹಿಡಿದು ಸಾಕಲಾರರೆ? ಜೊತೆಗೆ ಕಳಿಸು' ಎಂದು ತಾಯಿಯನ್ನು ಗೋಗರೆದಳು.

'ಚೆಲುದೊಂಗ' ಎಂದಷ್ಟೇ ಮೊದಲು ಹೇಳಿದ್ದ ಕವಿಯ ಸೌಂದರ್ಯ ಪ್ರಜ್ಞೆ ಇಲ್ಲಿ ಮತ್ತೆ ಜಾಗೃತವಾಗುತ್ತದೆ. ಅದರೆ ಅಶ್ಲೀಲದ ಲವಲೇಶವೂ ಇಲ್ಲ. 'ತುಟಿಯ ರಂಗು, ಮೂಗು ಮೂಗುತಿ, ಬಾವಲಿಯ ಕಿವಿ ಹಣೆಯ ಕುಂಕುಮದ ಬಟ್ಟು, ಭಾರದ ಹೆರಳು, ಹೆರಳಲ್ಲಿ ಮಲ್ಲಿಗೆಯ ಹೂವು'. ಇಂಥ ಹುಡುಗಿಗೆ ಮದಲಿಂಗನಾವಾಗಲೋ ಮನ ಸೋತಿದ್ದ. ಅವಳೂ ತನಗೆ ಮನ ಸೋತಿದ್ದಾಳೆಂಬುದೂ ಗೊತ್ತು. ಕೈ ಹಿಡಿದ ಮಡದಿಯ ಪ್ರೋತ್ಸಾಹ ಬೇರೆ ರಕ್ಷಣೆಗಿದೆ. ಇಲ್ಲಿ ಆ ಎಳೆ ಹೃದಯಗಳ ತೀವ್ರ ಪ್ರೇಮಕ್ಕೆ ಒತ್ತು ಕೊಟ್ಟಿರುವುದರಿಂದಲೇ ಮುಂದೊದಗುವ ದುರಂತ ಘೋರವೆನಿಸುತ್ತದೆ.

ಅವರಿಬ್ಬರ ಮನ ಹೇಗೆ ಒಂದಾಯ್ತು? ಕಾರಣ ಕೊಡಲಾಗದೆ ಕವಿ ಆಶ್ಚರ್ಯಪಡುತ್ತಾನೆ. ಆಗಸದಲ್ಲಿ ಮೇಲು ಮೇಲಕ್ಕೆ ಹಾರುವ ಗಂಡು-ಹೆಣ್ಣು ಹದ್ದುಗಳ ಉದಾಹರಣೆ ಕೊಡುತ್ತಾರೆ. ಅವುಗಳಲ್ಲಿ ಹೇಗೆ ಪ್ರೇಮ ಅಂಕುರಿಸುತ್ತದೆ; ಹಾರುತ್ತಿದ್ದ ಹದ್ದುಗಳು ಪರ್ವತದ ತಲೆ ಮೇಲಿಳಿದು ಕೆಳೆಯ ಬೆಳೆಸುತ್ತವೆ. ಇದು ದೇವದೇವನ ಮಾಯೆ ಎನ್ನುತ್ತಾರೆ. ಕವಿಯ ಧಾರ್ಮಿಕ ಸ್ವಭಾವಕ್ಕೆ ಈ ಮಾತು ಕನ್ನಡಿ ಹಿಡಿಯುತ್ತದೆ. 'ಹದ್ದುಗಳ ದೃಷ್ಟಾಂತ ಇಲ್ಲಿನ ಗೀತೆಗೆ ಕಾವ್ಯದ ಶೋಭೆ ತಂದಿದೆ' 'ಈ ಕೃತಿಯ ಮರೆಯಲ್ಲಿರುವ ಮನಸ್ಸು ಅಸಾಮಾನ್ಯವಾದ ಸಂಸ್ಕೃತಿಯನ್ನು ಪಡೆದದ್ದು' ಎಂಬ ಅಂಶ 'ದೇವದೇವನ ಮಾಯೆ' ಎಂಬ ಮಾತಿನಲ್ಲಿ ಸ್ಪಷ್ಟವಾಗಿದೆ.

ಮತ್ತೆ ಕಥೆಗೆ ಬರೋಣ. ಹಿರಿ ಮಗಳ ಮಾತಿಗೆ ಅತ್ತೆ ಒಪ್ಪಲಿಲ್ಲ. ಒಬ್ಬ ಹೆಂಡತಿಯನ್ನೇ ಆಳಲಾರದ ಗಂಡಸರನೇಕರು ಅನೇಕರನ್ನು ಆಕೆ ಕಂಡಿದ್ದಳು. ಅದ್ದರಿಂದಲೇ 'ನಿಮ್ಮಂತವರು ತುಂಬು ಹರೆಯದ ಹೆಂಡರಿಬ್ಬರನ್ನು ಆಳುವುದು ಯಾರಿಂದಲಾದೀತು? ಆ ಮಾತು ಬಿಡು' ಎಂದಳು. ಮದಲಿಂಗನ ಪೌರುಷ ಮತ್ತು ಸ್ವಾಭಿಮಾನವನ್ನು ಮೆಟ್ಟಿದಂತಾಯಿತು. 'ಏನತ್ತೆ, ನಾನು ಗಂಡಸಲ್ಲವಾ? ನಿನ್ನ ಒಬ್ಬ ಮಗಳನ್ನು ಸಾಕಿದ ಹಾಗೆ ಇನ್ನೊಬ್ಬಳನ್ನೂ ಸಾಕಲಾರೆನಾ? ನಾನೇನು ಮುದುಕನಾ? ಎಲ್ಲಿಯೂ ಒಬ್ಬ ಗಂಡಿಗೆ ಹೆಂಡಿರಿಬ್ಬರಿಲ್ಲಾರರೇ?' ಎಂದು ಕೇಳಿದ.

ಈ ಮಾತಾಡುವ ವೇಳೆಗಾಗಲೇ ಅವರು ನಾತ್ರ ಕಣಿವೆಯ ಹತ್ತಿರ ಬಂದಿದ್ದರು. 'ಮದಲಿಂಗನ ಹಳ್ಳಿಗೆ ಆ ಕಣಿವೆ ದಾಟಿ ಹೋಗಬೇಕು. ಬುಡದಲ್ಲೇ ನಡೆದರೆ ಹರದಾರಿ ದೂರ. ಗುಡ್ಡವೇರಿ ಆ ಕಡೆ ದಾರಿ ಸೇರಿದರೆ ಹರದಾರಿಯ ಅರರಲ್ಲೊಂದು ಪಾಲು ದೂರ.' ಗುಡ್ಡವೇರುವುದು ಎಂಥ ಕಟ್ಟಾಳಿಗೂ ಕಷ್ಟವೇ. ಅತ್ತೆಗೆ ಏನೆನ್ನಿಸಿತೊ 'ಅಷ್ಟು ಇಷ್ಟ ಎನ್ನುವವರೆ ಈ ಬೆಟ್ಟವನ್ನು ಹಿಮ್ಮುರಿಕೆಯಾಗಿ ಹತ್ತಿ ಹಿಮ್ಮುರಿಕೆಯಾಗಿಯೇ ಇಳಿದು ಬಾ. ಜಾಣೆಯನ್ನು ಮದುವೆ ಮಾಡಿಕೊಡಲು ಆಗ ಒಪ್ಪುತ್ತೇನೆ,' ಎಂದಳು. ಅದು ಅವಳ ದೃಷ್ಟಿಯಲ್ಲಿ ಸರಸಕ್ಕಾಡಿದ ಮಾತು. ಮದಲಿಂಗನ ಪಾಲಿಗದು ಸವಾಲು. ಸಾಹಸಿ ಮದಲಿಂಗ ಸವಾಲು ಸ್ವೀಕರಿಸಿದ. ಜೊತೆಗೆ ಜಾಣೆಯ ಚೆಲುವೂ ಪ್ರೀತಿಯೂ ಪ್ರೋತ್ಸಾಹಿಸಿದವು.

'ನಾನು ಹಿಮ್ಮುರಿಕೆಯಾಗಿಯೇ ಬೆಟ್ಟವೇರಿ ಇಳಿದು ಬರುತ್ತೇನೆ. ಬೆಟ್ಟದ ಇನ್ನೊಂದು

ಭಾಗದಲ್ಲಿ ಜಾಣೆಯು ಕೈಯಿಂದ ಚೊಂಬು ನೀರ ಹೊಯ್ಯಿಸಿ ಕೈಗೆ ಇವಳಿಂದ ನೀರ ಕೊಡಿಸು,' ಎಂದು ಪ್ರತಿಯಾಡಿದ.

ಒಮ್ಮೆ ನಾದಿನಿಯತ್ತ ನೋಡಿ ಉತ್ಸಾಹ ಗೊಂಡ. ಗುಡ್ಡವೋ ಬಹಳ ಎತ್ತರದ್ದು. ರಣಗುಡುವ ಬಿಸಿಲು ಬೇರೆ. ಅವನೂ ಹೊರಟ. ಮುಂದಿಟ್ಟ ಹೆಜ್ಜೆ ಹಿಂದೆ ತೆಗೆಯಲಿಲ್ಲ. ಬೆಟ್ಟವೇರಿದವನನ್ನು ಕಂಡು ಅತ್ತೆಗೂ ಹೆದರಿಕೆ. 'ಈ ಬಿಸಿಲಲ್ಲಿ ಬೆಟ್ಟವೇರಿ ಇವ ಬದುಕಲಾರ' ಎನ್ನಿಸಿತು. 'ಇಳಿದು ಬಾರಪ್ಪಯ್ಯ' ಎಂದು ಹುಯಿಲಿಟ್ಟಳು. ಮದಲಿಂಗ ಹಿಂತಿರುಗಲಿಲ್ಲ. ಏರುತ್ತಲೇ ಹೋದ. 'ರಸದ ಮಾತು ವಿರಸ ವಾಯ್ತಲ್ಲ' ಎಂದು ಮೂವರಿಗೂ ಮೂಕವ್ಯಥೆ, ಸಂಕಟ.

ಮದಲಿಂಗ ಬೆಟ್ಟದ ತುದಿ ಏರಿ ಕುಳಿತ. ಕ್ಷಣಕಾಲ ವಿಶ್ರಮಿಸಿದ. ಒಂದು ನಿಂಬೆ ಹಣ್ಣು ತಿಂದು ಬೀಜ ಉಗಿದ. (ಅದು ಗಜನಿಂಬೆ ಗಿಡ ವಾಗಿ ಬೆಳೆಯಿತು) ಎದ್ದು ಮತ್ತೆ ಓಮ್ಮುರಿಕೆಯಲ್ಲಿ ಬೆಟ್ಟ ಇಳಿದ. ಆ ವೇಳೆಗೆ ಮೂವರು ಹೆಂಗಸರೂ ಬೆಟ್ಟದ ಬದಿಗೆ ಬಂದಿದ್ದರು. ಕೈಚೊಂಬಿನಲ್ಲಿದ್ದ ನೀರನ್ನು ಬಿಟ್ಟರೆ ಬೇರೆ ಅಲ್ಲೆಲ್ಲೂ ತೊಟ್ಟು ನೀರಿಲ್ಲ. ರಣ ಬಿಸಿಲು ಮತ್ತು ಪ್ರಯಾಣದಿಂದ ವಯಸ್ಸಾದ ಅತ್ತೆಗೂ ಅಪರಿಮಿತ ಆಯಾಸ. ಏದುಸಿರು ಬಿಡು ತ್ತಿದ್ದಾಳೆ. ಹಿರಿಯ ಮಗಳು ನೋಡಿದಳು. 'ಅಮ್ಮ, ನೀ ಸ್ವಲ್ಪ ಕುಡಿ' ಎಂದು ಚೊಂಬನ್ನು ಮುಂದೆ ಹಿಡಿದಳು. ತಂಗಿಗೆ ಆ ಮಾತು ಸರಿ ಎನಿಸಲಿಲ್ಲ. ಅನಾಯಾಸವಾಗಿ ನಡೆದು ಬಂದ ತಮಗೇ ಇಷ್ಟು ದಾಹ. ಬೆಟ್ಟವೇರಿಬರುವ ಭಾವನಿಗೆಷ್ಟು ಎಂಬ ಚಿಂತೆ. ಭಾವ ಮೊದಲು ಕುಡಿಯಲಿ. ಆ ಮೇಲೆ ನಿನಗೆ' ಎಂದಳು. ತಾಯಿಯೂ ಆ ಮಾತಿಗೆ ಒಪ್ಪಿಕೊಂಡಳು.

ಭಾವ-ನಾದಿನಿಯ ಸರಸ, ಅತ್ತೆಯ ಪಂತ ವನ್ನು ಈ ಮೊದಲು ಸ್ವಲ್ಪ ವಿಸ್ತಾರವಾಗಿಯೇ ಹೇಳಿದ ಕವಿ ಇಲ್ಲಿ ಮತ್ತೆ ಸಂಗ್ರಾಹ್ಯ ದೃಷ್ಟಿ ತೋರುತ್ತಾನೆ. 'ಈಗಲೇ ಕತೆ ದೊಡ್ಡದಾಯ್ತು. ಇನ್ನವನು ಹತ್ತಿದುದ-ಇಳಿದುದ ಬಣ್ಣಿಸಲಾರೆ' ಎನ್ನುತ್ತಾನೆ. ಇಲ್ಲಿ ವೀರ ರಸಕ್ಕಿಂತ ಕರುಣ ರಸವೇ ಕವಿಗೆ ಮುಖ್ಯವಾಗಿರುವುದನ್ನು ಗಮನಿಸ ಬಹುದು. ಅವನು ಬಳಲಿದ, ಬೆವರಿದ, ಬಸವಳಿದ, ಸೋತ, ಎಂದಷ್ಟೇ ಹೇಳಿ ಮುಂದೆ ಸಾಗುತ್ತಾನೆ.

'ಪಂತಗೆದ್ದೆ. ನಾದಿನಿ ನನ್ನವಳಾದಳು' ಎಂಬ ಸಮಾಧಾನ ಮದಲಿಂಗನಗಾದರೆ, 'ಪಂತ ಗೆದ್ದನಲ್ಲಾ ತನ್ನನಲ್ಲ. ಇನ್ನು ಅವನೊಟ್ಟಿಗೆಹೆಂಡತಿ ಯಾಗಿ ಸುಖದಿಂದಿರಬಹುದೆಂಬ' ಅಮಿತಾನಂದ ಜಾಣೆಗೆ. ಅವರೆ ಮಾನವ ತಾನೊಂದೆಣಿಸಿದರೆ ದೈವ ಬೇರೊಂದನ್ನೆಣಿಸುತ್ತದಲ್ಲವೆ?

ಮದಲಿಂಗನ ಪರಿಸ್ಥಿತಿ ಶೋಚನೀಯ. ಶರೀರವಿಡೀ ಆಯಾಸಗೊಂಡಿದೆ. ಗಂಟಲಲ್ಲಿ ತೇವ ಒಣಗಿದೆ. ತೇಲುಗಣ್ಣು ಮೇಲುಗಣ್ಣು ಬಿಡುತ್ತಿದ್ದಾನೆ. ಏದುಸಿರು ಬಿಡುತ್ತಿದ್ದಾನೆ. ಮಾತಾಡಲೂ ಬಾಯಿ ಬರದು. ಸನ್ನೆ ಮಾಡುತ್ತ ನಾದಿನಿಯ ಕಡೆ ನೋಡಿದ. ಆಕೆ ಮೊಗೆ ಕೊಟ್ಟು ನೀರು ಕುಡಿಸಲು ಮುಂದಾ ದಳು. ತವಕಿಸಿದಳು. ಉಕ್ಕಿದ ಸಂತೋಷ. ಅಮಿತಾನಂದದ. ಭರ. ಭಾವ ಮುಂಚಾಚಿದ ಕೈಗಳಿಗೆ ಸುರಿಯಲು ಮೊಗೆಯನ್ನು ಬಗ್ಗಿಸಿ ದಳು. ಆತುರದಲ್ಲಿ ಮೊಗೆ ಕೈಯಿಂದ ಜಾರಿತು. ನೀರೆಲ್ಲವನ್ನೂ ನೆಲ ಕುಡಿಯಿತು. ಮದಲಿಂಗ ನಾದಿನಿಯನ್ನೇ ದಿಟ್ಟಿಸುತ್ತ ಅಲ್ಲೇ ನೆಲಕ್ಕೊರ ಗಿದ. ಜಾಣೆಯ ಮುಖ ಮೋಡದಂತೆ ಕಪ್ಪಿ ಟ್ಟಿತು. ಅತ್ತೆ, 'ಅಯ್ಯೋ!' ಎನ್ನುತ್ತ ಅಳಿಯ ನಿಗೆ ಸೆರಗಿನಿಂದ ಗಾಳಿ ಬೀಸಿದಳು. ಬಿಂದು ಹುಡುಗಿ ರೋದಿಸಿದಳು. 'ನನ್ನ ಗಂಡನನ್ನು ನೀ ಕೊಂದೆ,' ಎನ್ನುತ್ತಾ ಅಮ್ಮನನ್ನು ಶಪಿಸಿದಳು. ನನ್ನ ಸುಖಕ್ಕೆ ಅಸೂಯೆಗೊಂಡು ನೀರು ಚೆಲ್ಲಿದೆ ಯಲ್ಲೇ, ಎಂದು ತಂಗಿಯನ್ನು ಧಿಕ್ಕರಿಸಿದಳು. ಜಾಣೆಗೆ ಮಾತೇ ಹೊರಡಲಿಲ್ಲ. ಬರಿದಾದ ಚೊಂಬು ಹಿಡಿದು, ಹತ್ತಿರದ ಊರು ಎಲ್ಲಿ ದೆಯೋ ಎಂದು ಓಡಿದಳು. ಕೊನೆಗೆ ಚೊಂಬು ತುಂಬಾ ನೀರು ತಂದಳು. ಕಾಲ ಮಿಂಚಿತ್ತು. ವಿಧಿ ಸಂಚು ಹೂಡಿತ್ತು. ನಾದಿನಿ ನೀರು ತರು ಮೊದಲೇ ಮದಲಿಂಗ ಆ ಕಲ್ಲಲ್ಲಿ ಹೆಣವಾಗಿದ್ದ.

ಸಾವಿನ ಸನ್ನಿವೇಶವನ್ನು ಕವಿ ವರ್ಣಿಸುವುದಿಲ್ಲ. ಕಾವ್ಯದಲ್ಲಿ ಹೇಳಿದುದಕ್ಕಿಂತ ಹೇಳದೆ ಬಿಟ್ಟುದಕ್ಕೇ ಹೆಚ್ಚು ಮಹತ್ವವಲ್ಲವೆ? 'ಬೆಳೆಯುವ ಪೈರು ಭಾದ್ರಪದ ದೊಳೆ ಸುಟ್ಟು ಹೋಯಿತು' ಎಂಬೊಂದು ಮಾತಿನಲ್ಲೇ ಗಾಢ ದುರಂತದ ಚಿತ್ರಣ ನೀಡುತ್ತಾನೆ.

'ಮದಲಿಂಗ ಮಡಿದು ಆ ಕಣಿವೆಗೆ ತನ್ನ ಸರ ಕೊಟ್ಟ'; 'ಅಂದಿನ ಸಂಕಟ ಕಂಡ ಕಲ್ಲುಗಳು ಈಗಲೂ ಮರುಗುತ್ತಿವೆ' ಎಂದು ದುಃಖದ ಪರಿಧಿಯನ್ನು ವಿಸ್ತರಿಸುತ್ತಾನೆ ಕವಿ. ದಾಹದಿಂದ ಬಳಲಿದ ಮದಲಿಂಗ ಈಗಲೂ ಆ ಗುಡ್ಡದ ಸುತ್ತಿನಲ್ಲಿ ಅಲೆಯುತ್ತಿದ್ದಾನೆಂದು ಜನ ನಂಬುತ್ತಾರೆ. ಅವನು ಪ್ರೇತವಾಗಿ ಕಣ್ಣಿಗೆ ಕಾಣಿಸಿದರೇನು ಗತಿ ಎಂಬ ಭೀತಿ. ಅಲ್ಲಿ ನಿಲ್ಲದೆ ಬೇಗ ಬೇಗ ಹೆಜ್ಜೆ ಹಾಕುತ್ತಾರೆ. ಇಲ್ಲಿಗೆ ಕತೆ ಮುಗಿಯುತ್ತದೆ. ಅತ್ತೆ, ಹಿರಿಯ ಮಗಳು ಮತ್ತು ನಾದಿನಿ ಏನಾದರೆಂಬುದನ್ನು ಮಾಸ್ತಿಯವರು ಪ್ರಸ್ತಾಪಿಸುವುದಿಲ್ಲ.

ಆದರೆ ಡಾ॥ ಸಾ. ಶಿ. ಮರುಳಯ್ಯನವರು ಅವನ್ನು ಮತ್ತೆ ಸ್ವಲ್ಪ ಮುಂದುವರಿಸುತ್ತಾರೆ; ನೀರಿಗಾಗಿ ಸುತ್ತ ಮುತ್ತ ಓಡಿದ ನಾದಿನಿಯಾಗಿತ್ತು ಅಲ್ಲೆಲ್ಲೋ ಇದ್ದ ಮಡುವೊಂದಕ್ಕೆ ಬೀಳುತ್ತಾಳೆ. ಸಾಯುತ್ತಾಳೆ. ಆ ಮಡುವೇ ಮಡುವಣ ಮಡು—ಮದನ ಮಡು ಎಂಬ ಹೆಸರಾಯಿತು. ಜಾಣೆ ತನ್ನ ಬಾಯ ಜೊಲ್ಲನ್ನೇ ಮದಲಿಂಗನ ಬಾಯಿಗೆ ತುಂಬಿ ಬದುಕಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಪ್ರಯತ್ನ ವಿಫಲವಾಗುತ್ತದೆ. ಆಕೆ ಭಾವನ ಪಕ್ಕದಲ್ಲೇ ಮಡಿಯುತ್ತಾಳೆ. ಜಾಣೆ 'ಹಾರ'ವಾದ ಜಾಗವೇ ಈಗ 'ಜಾಣೇಹಾರ'ವೆಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಅಳಿಯನ ಸಾವಿನಿಂದ ದೆಸೆಗೆಟ್ಟ ಅತ್ತೆ ಎತ್ತೆತ್ತಲೋ ಓಡಿ ಕೊನೆಗೆ ಮಡಿದಳು. ಅತ್ತೆ ಸತ್ತ ನೆಲ ಅತ್ತೆಹಳ್ಳ—ಹತ್ತಾಳ ಆಯಿತು. ಮದ್ದೂರಿನಲ್ಲಿ ಈಗ ನರಸಿಂಹಸ್ವಾಮಿ ದೇವಾಲಯವಿದೆ. ಅತ್ತೆ ಸಮಾಧಿಯಾದ ಸ್ಥಳಕ್ಕೆ 'ಅಜ್ಜಿ ಗುಡ್ಡೆ' ಎಂಬ ಹೆಸರಾಯಿತು. ಮದಲಿಂಗ ಸತ್ತ ಗುಡ್ಡಕ್ಕೆ ಮದಲಿಂಗನ ಗುಡ್ಡವೆಂದೂ ಕಣಿವೆಗೆ ಮದಲಿಂಗನ ಕಣಿವೆ ಎಂದೂ ಹೆಸರಾಯಿತು. ಹೀಗೆ ಅವರೆಲ್ಲಾ ಮಡಿದು, ಮಡಿದ ಸ್ಥಳಗಳಿಗೆ ತಮ್ಮ ಹೆಸರು ನೀಡಿ ಕೀರ್ತಿಶಾಲಿಗಳಾದರೆನ್ನುತ್ತಾರೆ ಡಾ॥ ಸಾ.ಶಿ. ಮರುಳಯ್ಯನವರು. ಮದಲಿಂಗರ ನಾದಿನಿಯ ಹೆಸರು 'ಜಾಣೆ' ಎಂಬುದನ್ನು ಕೂಡ ಡಾ॥ ಮರುಳಯ್ಯನವರೇ ಹೇಳಿದ್ದಾರೆ. ಮಾಸ್ತಿಯವರಲ್ಲಿ ಆ ಹೆಸರಿನ ಪ್ರಸ್ತಾಪವಿಲ್ಲ.

ಜಾಣೆ ಮದಲಿಂಗನಿಗೆ ನೀರು ಕೊಡಹೋದಾಗ ಅತ್ತೆ ಬೇಕೆಂದೇ ಚೊಂಬನ್ನು ಕೆಡವಿದಳೆಂದು ಕೆಲವರು ಹೇಳುತ್ತಾರೆ. ಆದರೆ ಸಹೃದಯಿಗಳಾದ ಮಾಸ್ತಿಯವರು ದುಷ್ಟ ಅತ್ತೆಯನ್ನು ಚಿತ್ರಿಸಲು ಪ್ರಯತ್ನಿಸಿಲ್ಲ. ಅವರ ಸುಸಂಸ್ಕೃತ ಮನಸ್ಸು ಅದಕ್ಕೊಪ್ಪುವುದಿಲ್ಲ. 'ಈ ಕೃತಿಗಳ ಮರೆಯಲ್ಲಿರುವ ಮನಸ್ಸು ಅಸಾಮಾನ್ಯವಾದ ಸಂಸ್ಕೃತಿಯನ್ನು ಪಡೆದದ್ದು,' ಎನ್ನುತ್ತಾರೆ ಡಾ॥ ಮ. ತಿ. ನರಸಿಂಹಾಚಾರ್.

ಇಲ್ಲಿನ ಶೈಲಿ ಅವರ ವ್ಯಕ್ತಿತ್ವದ ಪ್ರತಿರೂಪ. 'ತಮ್ಮ ಅಪಾರವಾದ ತಿಳಿವನ್ನೂ ಗಾಢವಾದ ಅನುಭವವನ್ನೂ ಶುಚಿ ರುಚಿಗಳುಳ್ಳ ಅನುಭವಗಳನ್ನೂ ಅತ್ಯಂತ ಸರಳವಾದ ನುಡಿಗಳಲ್ಲಿ ಹಿತಮಿತವಾಗಿ ಶ್ರೀನಿವಾಸರಂತೆ ಹೇಳುವ ಕವಿಗಳು ನಮ್ಮಲ್ಲಿ ವಿರಳ,' ಎನ್ನುತ್ತಾರೆ ಡಾ॥ ಜಿ. ವರದರಾಜರಾವ್.

ಒಟ್ಟಿನಲ್ಲಿ ಕನ್ನಡ ನಾಡಿನ ಸ್ಥಳಗಳ ಹೆಸರಿನ ಐತಿಹ್ಯವನ್ನು ಜೀವಂತಗೊಳಿಸಿ ಕೃತಿ ರಚಿಸಿದವರಲ್ಲಿ ಮಾಸ್ತಿ ಮುಂಚೂಣಿಯಲ್ಲಿದ್ದಾರೆ. ಸರಸ ವಿರಸಕ್ಕೆ ತಿರುಗಿ ಘೋರ ದುರಂತದಲ್ಲಿ ಅಂತ್ಯಗೊಳ್ಳುವ ಈ ಕಥೆ ಓದುಗರ ಮನ ಮಿಡಿಯುತ್ತದೆ, ಅವರ ಕಥನ ಕವನಗಳಲ್ಲಿ ಅಗ್ರ ಪಂಕ್ತಿಯಲ್ಲಿ ನಿಲ್ಲುತ್ತದೆ.



# ಇದುವೆ ಜೀವ ಇದು ಜೀವನ

ತುರ್ತು ಕೆಲಸವಿತ್ತು. ಊರಿಗೆ ಹೋಗಬೇಕಾಗಿತ್ತು. ಬಸ್ಸಿನಲ್ಲಿ ತುಂಬ ಜನಸಂದಣಿ ಇತ್ತು. ಹಾಗೂ ಹೀಗೂ ಆ ಬಸ್ಸಿನಲ್ಲಿ ಕಾಲಿಟ್ಟು ನಿಂತುಕೊಳ್ಳುವಷ್ಟು ಜಾಗ ದೊರಕಿಸಿಕೊಂಡೆ. ಏಕೆಂದರೆ ಅದೇ ಆ ಊರಿಗೆ ಹೋಗುವ ಕಡೆಯ ಬಸ್ಸಾಗಿತ್ತು.

ಬಸ್ಸು ಹೊರಟೇಬಿಟ್ಟಿತು. ನನ್ನಂತೆ ಇನ್ನೂ ಮೂರು ನಾಲ್ಕು ಜನ ಬಸ್ಸನ್ನು ಏರಿದ್ದರು. ನಾವಷ್ಟೇ ಈಗ ಟಿಕೆಟ್ಟಾಗಬೇಕಾದವರು. ಮತ್ತೊಮ್ಮೆ ಜನರನ್ನು ಇಳಿಸಿ, "ಟಿಕೆಟ್ ಟಿಕೆಟ್," ಎಂದ ಕಂಡಕ್ಟರ್.

ಒಬ್ಬ ಮುದುಕಿ ಸಂಚಿಯಿಂದ ಎರಡರ ನೋಟನ್ನು ತೆಗೆದಳು. ತಾನಿಳಿಯಬೇಕಾದ ಜಾಗ ಹೇಳಿ ನೋಟು ಕೊಟ್ಟಳು. "ಇನ್ನೂ ಹದಿನೈದು ಪೈಸಾ ಕೊಡು," ಎಂದ ಕಂಡಕ್ಟರ್.

ಆ ಮುದುಕಿ ದೈನ್ಯದಿಂದ, "ಎಪ್ಪಾ, ಉಳದದ್ದs ಅಟು. ಕೊಟ್ಟೇನಿ. ಹೆಂಗಾರಾ ಮಾಡಿ ಟಿಕೀಟ ಕೊಡು," ಎಂದಳು.

"ಇಲ್ಲೆಲ್ಲಾ. ಇನ್ನ ಹದಿನೈದ ಪೈಸಾ ಕೊಡಾಕs ಬೇಕು," ಎಂದನಾತ.

"ಇದ್ರ ಕೊಡತಿದ್ನೆಪಾ. ಇಲ್ಲಾಂದ್ರ ಹ್ಯಾಂಗ ಕೊಡ್ಲಿ? ನನ್ನ ಮಗಾ ಅಡಂಗದಿ. ಹೆಂಗರೆ ಮಾಡು," ಮುದುಕಿ ಮತ್ತೆ ಹೇಳಿತು.

"ಛೇ. ಇಂಥಾ ಮಂದೀನs ಗಂಟಬೀಳತಾರ. ಇಳೀಬೆ ಇಳೀ. ರೊಕ್ಕಿಲ್ರ್ಕ್ಕರ ಯಾಕ ಗಾಡಿ ಹತ್ತಿದಿ?" ಎನ್ನುತ್ತ ಗಂಟಿ ಹೊಡೆದ. ಬಸ್ಸು ನಿಂತಿತು. "ಬೇ, ಹಿಡಿ ನಿನ್ನ ಯಾಡ್ನ ರೂಪಾಯಿ, ಇಳಿ," ಎಂದ.

ಮುದುಕಿ ಎಷ್ಟು ಬೇಡಿಕೊಂಡರೂ ಆತನಿಗೆ ಕರುಣೆ ಬರಲಿಲ್ಲ. "ಸರಕಾರಿ ಗಾಡಿಬೆ ಇದು. ಇಳಿ. ಪೂರ ರೊಕ್ಕಿದ್ದರs ಹತ್ತಬೇಕು," ಎಂದು ಇಳಿಸಿಯೇಬಿಟ್ಟ.

ಗಾಡಿ ಹೊರಟಿತು. ನಾನು ಟಿಕೆಟ್ಟಿಗಾಗಿ ಹಣ ಕೊಟ್ಟೆ. ಟಿಕೆಟ್ ಅವನು ಕೊಟ್ಟ. ಇಪ್ಪತ್ತು ಪೈಸೆ ಚಿಲ್ಲರೆ ಕೊಡಬೇಕಿತ್ತು. ನಾನಿಳಿಯುವ ವರೆಗೂ ಕೊಡಲಿಲ್ಲ. ಇಳಿಯುವ ಮುನ್ನ ಕೇಳಿದೆ. "ಚಿಲ್ಲರ ಇಲ್ರಿ-ನಿಮ್ಹತ್ರ ಇದ್ರ ಕೊಡ್ರಿ," ಅಂದ. ನನ್ನ ಬಳಿ ಇರಲಿಲ್ಲ "ಇಲ್ಲ," ಅಂದೆ.

ಆತ, "ಸಾಹೇಬ್ರ, ಇನ್ನೊಮ್ಮೆ ಬೆಟ್ಯಾದಾಗ ಕೊಡೂಣ ಬಿಡ್ರಿ-ನನ್ನತ್ರಿದ್ರೇನಾತು?" ಎಂದವನೇ ಗಂಟಿ ಹೊಡೆದೇಬಿಟ್ಟ.

—ಪರ್ವತಗೌಡ ಪಾಟೀಲ

ಮಿತ್ರನೊಬ್ಬನ ಬರುವಿಕೆಯನ್ನು ಎದುರು ನೋಡುತ್ತ ಬಸ್ ನಿಲ್ದಾಣದಲ್ಲಿ ನಿಂತಿದ್ದೆ. ತಾಸೆರಡು ತಾಸಾದರೂ ದೂರ-ದೂರಿನಿಂದ ಬರಬೇಕಿದ್ದ ಆ ಬಸ್ಸು ಬಂದಿರಲಿಲ್ಲ. ಅತ್ತಿತ್ತ ಸುತ್ತುತ್ತ, ಸಿಗರೇಟು ಸುಡುತ್ತ, ಕೈಲಿದ್ದ ಪತ್ರಿಕೆಯ ಪುಟಗಳನ್ನು ತಿರುವುತ್ತಲಿದ್ದೆ.

ಒಂದೇ ಕಡೆ ನಿಂತುಕೊಂಡರೆ ಬೇಸರವಷ್ಟೆ. ಹೀಗಾಗಿ ಹತ್ತು ನಿಮಿಷಗಳಿಗೊಮ್ಮೆ ಹುಬ್ಬಳ್ಳಿಯ ಬಸ್ ನಿಲ್ದಾಣದ ಪೂರ್ತಿ ಸರ್ವೆ ಮಾಡುತ್ತಲಿದ್ದಂತೆಯೇ ಒಂದೆಡೆ ಥಟ್ಟನೆ ನಿಂತೆ.

ನಾಲ್ಕಾರು ಸಲ ಆ ಮೂಲೆಯತ್ತ ಗಮನ ಹರಿಸಿ ಬೇರೆಡೆ ದೃಷ್ಟಿ ಹೊರಳಿಸಿದ್ದ ನನಗೆ ಮತ್ತೆ ಆ ಮೂಲೆಯತ್ತ ನೋಡಿದಾಗ ಅಚ್ಚರಿ. ಸುಮಾರು ೨೫ರ ಹರೆಯದ ಡೊಂಬಾರಿ ತರುಣಿಯೊಬ್ಬಳು ಅಲ್ಲಿ ಕುಳಿತಿದ್ದು ಮಗುವನ್ನು ಆಡಿಸುತ್ತಿದ್ದು ಈಗ ಅಲ್ಲಿ ಕಾಣಲಿಲ್ಲ. ಮಗು ಮಾತ್ರ ಇತ್ತು.

ಹರಕು ಬಟ್ಟೆಯಲ್ಲಿಯೂ ಆ ತರುಣಿ ಆಕರ್ಷಕಳಾಗಿದ್ದಳೆಂದು ಬೇರೆ ಹೇಳಬೇಕಿಲ್ಲ.

ಆ ಮಗು ಅತ್ತಿತ್ತ ನೋಡಿ ಗಾಬರಿಗೊಂಡು ಕುಳಿತಿತ್ತು. ಒಂದು ಒಂದೂವರೆ ವರ್ಷದ ಹೆಣ್ಣುಮಗು. ಅದರ ಮೈಮೇಲೆ ಒಂದು ಅಂಗಿ-ಅದೂ ಹರಕು-ಬಿಟ್ಟರೆ ಬೇರೇನೂ ಇರಲಿಲ್ಲ. ತನ್ನತ್ತ ನೋಡಿದವರೆಡೆ ಎತ್ತಿಕೋ ಎಂಬಂತೆ ಕೈ ಮಾಡುತ್ತಿತ್ತು. ಅದರ ತಾಯಿ (?) ತನ್ನ ಗಂಟು ಮೂಟೆಯೆತ್ತಿಕೊಂಡು ಅದೆಲ್ಲಿ ಮಟಾಮಾಯವಾಗಿದ್ದಳೋ.

ಅಳತೊಡಗಿದ ಮಗುವಿನ ಸುತ್ತ ಜನ ಸೇರಿದರು ಕೆಲವರು ಬಿಸ್ಕತ್ತು-ಪೆಪ್ಪರಮಿಂಟು ಹಾಗೂ ಬ್ರೆಡ್‌ಗಳನ್ನು ಅದಕ್ಕೆ ಕೊಟ್ಟರು. ಆದರೆ ಆ ಮಗು ಅದಾವುದನ್ನೂ ನೋಡದೆ ಎದುರಿದ್ದವರ ಮುಖಗಳಲ್ಲಿ ತನ್ನ ತಾಯಿಯ ಮುಖ ಹುಡುಕುತ್ತಿತ್ತು.

ಅದನ್ನು ಕಂಡು ನನ್ನ ಕರುಳು ಚುರ್ರೆಂದಿತು. ಅಲ್ಲಿದ್ದವರೆಲ್ಲ ಆ ತಾಯಿಯನ್ನು ದೂಷಿಸುತ್ತಲಿದ್ದರು. ಅಷ್ಟರಲ್ಲಿ ಕೆಲವು ರಿಕ್ಷಾ ಡ್ರೈವರುಗಳು, ಹಮಾಲರು ಬಂದರು. ಮಗುವನ್ನೆತ್ತಿಕೊಂಡರು; "ಆ ಕಳ್ಳಮುಂಡಿ ಸಿಗಲಿ-ಮಾಡತೇವಿ ಶಾಸ್ತಿ," ಅಂದವರೇ ಮಗುವಿನೊಂದಿಗೆ ಹೊರಟರು.

ಮುಂದೈದು ನಿಮಿಷದಲ್ಲಿಯೇ ಸ್ಟ್ಯಾಂಡ್ ಇನ್‌ಚಾರ್ಜರ ಕಚೇರಿಯಿಂದ ಮೈಕಿನಲ್ಲಿ ಕೇಳಿಬಂತು- "ಮಗು ಸಿಕ್ಕಿದೆ. ಕಳೆದುಕೊಂಡವರು ಬನ್ನಿ," ಎಂದು. ಅದು ಹಾಗೇ ಕೂಗಿಕೊಳ್ಳುತ್ತಲೇ ಇತ್ತು.

ಆದರೆ ಬೇಕೆಂದೇ ಬಿಟ್ಟುಹೋದ ತಾಯಿ ಏಕೆ ಬಂದಾಳು?

ಮಕ್ಕಳು ಬೇಕೆಂಬ ಕೊರಗು ಹಲವರಿಗೆ. ಹೆತ್ತ ಮಗುವನ್ನು ಬೀದಿಪಾಲು ಮಾಡಿಬಿಟ್ಟು ಹೋಗುವ ತಾಯಂದಿರೂ ಇರುವುದುಂಟೆ?

–ವೃಷಭೇಂದ್ರಯ್ಯ

ಎಂದಿನಂತೆ ಬಾಸ್ ಆಫೀಸಿಗೆ ಬಂದಾಗ ನಾನು ಫೈಲುಗಳಲ್ಲಿ ತಲೆ ಹುದುಗಿಸಿಕೊಂಡಿದ್ದೆ. ಅವರು ತಮ್ಮ ಕೋಣೆಗೆ ಹೋಗಿ ಕುಳಿತಿರುವಾಗಲೇ ಗಂಟೆ ಬಾರಿಸಿದ ಸದ್ದು ಯಾರಿಗೋ ಗ್ರಹಚಾರ ಕಾದಿದೆ ಎಂಬುದನ್ನು ಸೂಚಿಸಿತು. ಕಿವಿಗಳನ್ನು ಅತ್ತ ಕಡೆಗೂ, ಕಣ್ಣುಗಳನ್ನು ಫೈಲುಗಳಲ್ಲಿಯೂ ಕೀಲಿಸಿದ್ದಾಗ ಗಂಟೆಗೆ ಓಗೊಟ್ಟ ಜವಾನ ಒಳಗೆ ಹೋಗಿ ನನ್ನ ಬಳಿ ಬಂದು ನಿಂತ. ಸಾಹೇಬರು ನನಗೇ ಹೇಳಿಕಳಿಸಿದ್ದಾರಲ್ಲ-ಯಾಕಿರಬಹುದು ಎಂದು ಯೋಚನೆಗೀಡಾಗುತ್ತಿದ್ದಂತೆಯೇ, "ಸಾರ್, ಸಾಯೇಬ್ರು ನಿಮ್ಮನ್ನ ಕರೀತಿದಾರೆ," ಎಂದ ಜವಾನ. ನಾನು ಅತನೊಂದಿಗೆ ಹೊರಟೆ.

ಚೇಂಬರಿನೊಳಗೆ ಪ್ರವೇಶಿಸಿ, "ನಮಸ್ಕಾರ ಸಾರ್. ಹೇಳಿ ಕಳಿಸಿದಿರಂತೆ," ಎಂದೆ.

"ಏನ್ರೀ ಮಿ. ಪಾಟೀಲ್, ನೋಡಿದ್ರಾ ಇವನ ಮುಖಾನ?" ಎಂದು ಸಾಹೇಬರು ಜವಾನನತ್ತ ಕೈ ಮಾಡಿ ತೋರಿಸುತ್ತ ನನ್ನನ್ನು ಕೇಳಿದರು.

"ನೋಡಿದೀನಿ ಸಾರ್," ಎಂದೆ.

"ಎಷ್ಟು ದಿನದಿಂದ ಹೀಗೇ ಶೇವ್ ಮಾಡಿಕೊಳ್ದೆ ಬರ್ತಿದಾನೊ. ಇಂಥವ್ರ ಮುಖ ನೋಡಿ ನೋಡಿ ಮೂಡ್ ಹಾಳಾಗಿ ಹೋಗುತ್ತೇರಿ..." ಎಂದು ರೇಗಾಡಿ ನಂತರ, "ಮಿ. ಪಾಟೀಲ್, ಇವನಿಗೊಂದು ಮೆಮೋ ಕೊಡಿ. ದಿನಾಲೂ ಶೇವ್ ಮಾಡಿಕೊಂಡು ಕ್ಲೀನಾಗಿರೋದಕ್ಕೆ," ಎಂದು ಹೇಳಿದರು.

ನನಗೇನು ಹೇಳಬೇಕೋ ತಿಳಿಯದೆ ನಿಂತಿದ್ದಾಗ ನನಗರಿವಿಲ್ಲದೆಯೇ ಸಾಹೇಬರನ್ನು ಕೇಳಿಯೇಬಿಟ್ಟೆ: "ಸಾರ್, ಇದರ-ದೊಂದು ಕಾಪೀನ ಬಾರ್ಬರನಿಗೂ ಕಳಿಸಿ ಯೋಗ್ಯ ಕ್ರಮ ಕೈಕೊಳ್ಳೋ ಹಾಗೆ ಬರೀಲಾ?"

ಸಿಟ್ಟಿಗೆದ್ದಿದ್ದ ಸಾಹೇಬರು ಗಹಗಹಿಸಿ ನಗತೊಡಗಿದರು.

–ಶ್ರೀಶೈಲ ಪಾಟೀಲ

ಪ್ರೊ. ಎಸ್. ಎಚ್. ನಾಯಕ

# ನಮ್ಮೂರಿನಲ್ಲೊಬ್ಬ ಫಾರೆಸ್ಟ್ ಗಾರ್ಡ್

ನಮ್ಮೂರ ಫಾರೆಸ್ಟ್ ಗಾರ್ಡನನ್ನು ಆಸ್ಪತ್ರೆಯ ಕೋಣೆಯೊಂದರಲ್ಲಿ ಮಲಗಿಸಿದ್ದರು. ತಲೆಗೊಂದು ಬಿಳಿಯ ಪಟ್ಟಿ ಕಟ್ಟಿದರೂ ರಕ್ತ ಸೋರುತ್ತಲೇ ಇತ್ತು. ಸ್ಮೃತಿ ಬಂದಿದ್ದರೂ ಸರಿಯಾಗಿ ಮಾತನಾಡಲಾರದ ಆತ ಹೆಂಡತಿ ಬಿಕ್ಕಳಿಸುವುದು ಕಡಿಮೆಯಾಗಲೆಂದು ಸುಮ್ಮನಿದ್ದ. ಆಸ್ಪತ್ರೆಯ ವಿಚಿತ್ರವಾಸನೆ ತನ್ನದೇ ಆದ ಪರಿಸರವನ್ನು ರಚಿಸಿತ್ತು. ತಲೆದಿಂಬಿಗೆ ಮೈಯ ಭಾರಕೊಟ್ಟು ಕುಳಿತ ಆತನ ಹೆಂಡತಿ ಬಿಕ್ಕಳಿಸುತ್ತಿದ್ದರೂ ಆಗಾಗ ಕೈಯಿಂದ ಹಣೆ ನೇವರಿಸುತ್ತಿದ್ದಳು. ಮತ್ತೆ ಮತ್ತೆ ಮೈ ನವಿರೇಳಿಸುವ ವಿಚಾರಗಳು ಬಿರುಗಾಳಿಯಂತೆ ಆತನ ತಲೆ ಬಿರಿಯುತ್ತಿದ್ದವು. ತನ್ನ ನೋವನ್ನು ಮರೆತು ವಿಚಾರಮಗ್ನನಾದ ಆತ ಹೆಂಡತಿಯನ್ನು ಸಂತೈಸುವದಕ್ಕೋಸ್ಕರ ಆಗಾಗ ಒಂದೊಂದು ಮಾತನಾಡುತ್ತಿದ್ದ.

ಆತ ತನಗೇನಾಯಿತೆಂಬುದನ್ನು ಯಾರೊಡನೆಯೂ ನಿವೇದಿಸಲಿಲ್ಲ. ಏಕೆಂದರೆ ಸತ್ಯವಾಗಿ ಆತನಿಗೆ ಗೊತ್ತಿಲ್ಲ. ರಾತ್ರಿ ಬಾಗಿಲು ತೆರೆದು ಹೊರಗ ಬಂದು ಆತನ ಹೆಸರು ಹೇಳಿ ಕರೆದವರನ್ನು ನೋಡುವುದರಲ್ಲಿಯೋ ತಲೆಗೆರಡು ಏಟುಗಳು ಬಿದ್ದಿದ್ದವು. ಹೆಂಡತಿ ಎದ್ದು ಬರುವುದರಲ್ಲಿಯೋ ಅವರು ಫರಾರಿಯಾಗಿದ್ದರು. ಆದರೆ ಆತನಿಗೆ ಅವರನ್ನು ಕಂಡುಹಿಡಿಯುವ ಅಥವಾ ಅವರ ಮೇಲೆ ಸೇಡು ತೀರಿಸಿಕೊಳ್ಳುವ ಯಾವುದೇ ವಿಚಾರಗಳಿರಲಿಲ್ಲ. ಅವೆಲ್ಲವೂ ಅವನ ಪಾಲಿಗೆ ನಿರ್ಧಾರವಾದ ವಿಷಯಗಳು. ಊರಲ್ಲಿ ಅವನಿಗೆ ಯಾವಾಗಲೂ ಕಿರುಕುಳ ಕೊಡುವ ಜನರೇ ತುಂಬಿರುವಾಗ ಆ ರಾತ್ರಿಯಲ್ಲಿ ಇನ್ನಾರೂ ಯಾವ ಉದ್ದೇಶಕ್ಕೂ ಬಂದವರಲ್ಲ. ಸೇಡಿನ ಕಿಡಿ ಹೊತ್ತಿಸಿ ಬದುಕಿಗೆ ಬೆಂಕಿ ಹಾಕಲಿಕ್ಕೆ ಬಂದವರು. ಸೇಡು ತೀರಿಸಿಕೊಳ್ಳುವ ಮಾತಂತೂ ಆತನಿಗೆ ಕನಸು. ಇನ್ನು ಮುಂದೆ ಅಂಥ ಪರಿಸ್ಥಿತಿ ಬಾರದೇ ಇದ್ದರೆ ಸರಿ.

ಬದುಕಿನುದ್ದಕ್ಕೂ ನಡೆದ ದುರ್ಧರ ಪ್ರಸಂಗಗಳನ್ನು ನೆನಪಿಸಿಕೊಳ್ಳಲಿಕ್ಕೆ ಆಸ್ಪತ್ರೆಯಲ್ಲಿ ಯಾವುದೇ ಆತಂಕಗಳಿರಲಿಲ್ಲ. ಆಗಾಗ ಬರುವ ನರ್ಸುಗಳನ್ನು ಬಿಟ್ಟರೆ ದಿನಕ್ಕೊಂದು ರೌಂಡ್ಸಿಗೆ ಬರುವ ಡಾಕ್ಟರು ಕೇಳುವ ಅನವಶ್ಯಕ ಪ್ರಶ್ನೆಗಳ ಹೊರತಾಗಿ ಇನ್ನಾರ ಗದ್ದಲವೂ ಇರಲಿಲ್ಲ.

ಹೆಂಡತಿಯೂ ದಿಕ್ಕು ತೋಚದೇ ಮೌನವನ್ನೇ ಆಸರೆಯನ್ನಾಗಿಟ್ಟುಕೊಂಡಿದ್ದಳು. ವಿಚಾರಗಳು ಬಿರುಗಾಳಿಗೆ ಸಿಕ್ಕ ದೋಣಿಯಂತೆ ಡೋಲಾಯಮಾನವಾಗಿದ್ದವು.

ಫಾರೆಸ್ಟ್ ಗಾರ್ಡ್ ಆದ ಒಂದೇ ಒಂದು ದಿನ ಮಾತ್ರ ಆತ ಸುಖವಾಗಿದ್ದನು. ಅಂದಿನಿಂದ ಒಂದಿಲ್ಲೊಂದು ದಿನ ಜೇಡ ಹುಳು ಬಲೆಕಟ್ಟಿದ ಹಾಗೆ ಎಳೆಗಳು ಸುತ್ತುತ್ತಲೇ ಇರುತ್ತಿದ್ದವು ರಾತ್ರಿ ಹಗಲೆನ್ನದೆ ದಟ್ಟ ಬೆಟ್ಟಗಳಲ್ಲಿ ಅಡ್ಡಾಡಬೇಕು. ಹೊಸ ರೇಂಜ ಸಾಹೇಬರು ಬಂದ ಮೇಲಂತೂ ಈ ಫಾರೆಸ್ಟ್ ಗಾರ್ಡನ ಪರಿಸ್ಥಿತಿ ನಾಯಿಗಿಂತ ಕೀಳು. ದಿನನಿತ್ಯ ಇವರನ್ನೆಲ್ಲ ಕರೆದು ಛೀಮಾರಿ ಹಾಕುವುದು ಮಾಮೂಲಿ. "ನೀನಿದ್ದಲ್ಲಿಂದಲೇ ಯಾಕೆ ಕಳ್ಳ ಮಾಲು ಹೋಗಬೇಕು? ಕೆಲ್ಸ ಇಷ್ಟ ಇರ್ದಿದ್ರೆ ರಾಜೀನಾಮೆ ಕೊಟ್ಟು ಹೋಗು. ಪಗಾರ ತಗೊಳ್ಳೊದಿಲ್ವಾ? ಇಲ್ಲೇನು ಬಿಟ್ಟಿ ಕೆಲ್ಸಕ್ಕೆ ಬಂದಿದ್ದೀರೋ?" ಎಂದು ಗದರಿಸುವಾಗ ಇಡೀ ದೇಹವನ್ನು ಮೂರೇ ಇಂಚು ಮಾಡಿ ಮುದುಡಿ ನಿಂತುಕೊಳ್ಳುವುದು. ಎಷ್ಟೇ ನಿಗಾ ಇಟ್ಟರೂ ಒಂದಿಲ್ಲೊಂದು ನಾಟು ದಿನಾ ನಾಪತ್ತೆಯಾಗಿಯೇ ಆಗುತ್ತಿತ್ತು. ಅದು ಆತನ ಕರ್ಮ. ಇತ್ತೀಚೆಗೆ ಕಟ್ಟಿಗೆ ಮಾಲು ಬಂಗಾರ ಆಗಿದೆ ಎಂದು ತಿಳಿದ ಆಸುಪಾಸಿನ ಜನ ಹೇಗಾದರೂ ಕದಿಯುತ್ತಿದ್ದರು.

ಅದೇ ಊರಿನ ರಾಜಣ್ಣ ಈ ಗಾರ್ಡನಿಗೆ ಸಿಂಹಸ್ವಪ್ನ. ಆತ ಬೆಟ್ಟ ಹೊಕ್ಕಿದರೆ ಗಾರ್ಡ ಜೈಲಿನೊಳಗಿದ್ದ ಕೈದಿಯ ತರಹ. ರಾಜಣ್ಣನನ್ನು ಒಂದೆರಡು ಸಲ ಮುಖಾಮುಖಿಯಾಗಿ ಭೆಟ್ಟಿ ಮಾಡಿದ್ದಾಗ, "ರಾಜಣ್ಣ, ನಿನ್ನ ಕಾಲು ಬೀಳ್ತೀನಿ. ಹೀಗ್ಮಾತ್ರ ಮಾಡಬೇಡ. ನಮ್ಮ ಸಾಹೇಬರಿಗೆ ಗೊತ್ತಾದ್ರೆ ನನ್ನ ಹೊಟ್ಟೆ ಮೇಲೆ ಕಾಲ ಕೊಡ್ತಾರೆ, "ಎಂದಿದ್ದ.

ರಾಜಣ್ಣ ಊರಿಗೆ ಒಡೆಯ. ಜನರ ಕಣ್ಣಲ್ಲಿ ಉತ್ತಮ ನಾಗರಿಕ. ಊರ ಪಂಚಾಯತಿಗೆಲ್ಲ ಈತನದೇ ನ್ಯಾಯ. ಊರ ಬಡವರಿಗೂ ಶ್ರೀಮಂತರಿಗೂ ರಾಜಣ್ಣನೇ ರಾಜ. ಅಪ್ಪನ ಆಸ್ತಿಗೂ ಮೀರಿ ಈಗ ಗಳಿಸಿದ್ದಾನೆ. ಹಣ, ಜನ ಎರಡೂ ಇದ್ದ. ಈ ಕುಬೇರನನ್ನು ಮೀರಿಸುವ ಆಸೆ ಜನಗಳಿಗೆ ಇಲ್ಲ. ಯಾವಾಗಲೂ ಆತನ ಕಾಲಬುಡದಲ್ಲೇ ಬಿದ್ದಿರುತ್ತಾರೆ. ರಾಜಣ್ಣ ಭೇಟಿ ಮಾಡಿದ ಸ್ಥಳಗಳು ಇಲ್ಲ, ಜನಗಳೂ ಇಲ್ಲ. ತಾಲೂಕಿನ ಪೋಲೀಸ ಇನಸ್ಪೆಕ್ಟರಿನಿಂದ ಹಿಡಿದು ಪಂಚಾಯತಿ ಸೆಕ್ರೆಟರಿಯ ವರೆಗೂ ಆತನ ಕೈ ನಡೆಯುತ್ತಿದೆ, ಆತ ಮಾಡಿದ್ದೇ ಊರಲ್ಲಿ ಆದು ಹಾಸ್ಯ ಹುಣ್ಣಿಮೆ. ರಾಜಣ್ಣನ ಬಗ್ಗೆ ಎಲ್ಲರಿಗೂ ಆದರ, ಗೌರವ. ರಾಜಣ್ಣನ ಗುಟ್ಟು ರಟ್ಟಾಗುವುದು ಈ ಬೆಟ್ಟದಲ್ಲಿ ಮಾತ್ರ. ಐದಾರು ಲಾರಿ ಇಟ್ಟುಕೊಂಡ ರಾಜಣ್ಣ ಮಾಡುವುದೆಲ್ಲ ಕಳ್ಳ ಸಾಗಾಟ. ಜನರ ಕಣ್ಣು ಕಟ್ಟಲಿಕ್ಕೆ ದೇಣಿಗೆ ಕೊಟ್ಟೋ ಸಹಾಯಧನವಿತ್ತೋ ಅಥವಾ ಯಕ್ಷಗಾನ ಪ್ರಸಂಗ ಆಡಿಸಿಯೋ ಆಟವಾಡುತ್ತಾನೆ. ಮೊದಲೇ ಅಕ್ಷರ ತಿಳಿಯದ ಈ ಜನ ರಾಜಣ್ಣನನ್ನು ರಾಜನೆಂದೇ ಭಾವಿಸುತ್ತಾರೆ.

ಊರಿನಲ್ಲಿಯ ಭೂಮಿಯನ್ನೆಲ್ಲ ಸಾವಕಾಶವಾಗಿ ಕಬಳಿಸಿದರೂ ಪರವೆಯೇ ಇಲ್ಲದವರು.

ರಾಜಣ್ಣನ ಬಗ್ಗೆ ಗಾರ್ಡನಿಗೂ ಅದೇ ಭಾವನೆ ಇಲ್ಲವೆಂದಲ್ಲ. ಆತ ತಂದೆಯನ್ನು ಕಳೆದುಕೊಂಡಾಗ ರಾಜಣ್ಣನ ಸಹಾಯ ಹೇಳತೀರದಷ್ಟು. ಎಸ್.ಎಸ್.ಎಲ್.ಸಿ. ಕಲಿಯುವುದು ರಾಜಣ್ಣನ ಸಹಾಯದಿಂದ ಮಾತ್ರ ಸಾಧ್ಯವಾಗಿತ್ತು. ಇಂಥ ದಲಿತರ ಬಂಧು ರಾಜಣ್ಣನನ್ನು ಕಳ್ಳಮಾಲು ಸಾಗಿಸುವಾಗ ಈ ಬಡ ಗಾರ್ಡ ಹಿಡಿಯುವುದು ಸಾಧ್ಯವೇ? ಆದರೆ ಕರ್ತವ್ಯನಿಷ್ಠ ಗಾರ್ಡನಿಗೆ ಇದು ಬಿಸಿಬಿಸಿ ತುಪ್ಪದಂತೆ. ಬಾಯಲ್ಲಿಟ್ಟು ಸುಡುವ ತುತ್ತು. ಊರಿಗೆ ಊರೇ ಕಿವಿಮುಚ್ಚಿಕೊಂಡರೂ ರೇಂಜರ ಸಾಹೇಬರಿಗೆ ಸುದ್ದಿ ಆಗದೇ ಇರುತ್ತದೆಯೇ ? ವಿಶೇಷ ಕಾವಲಿರಿಸಿದರು. ರಾಜಣ್ಣ ಸಿಕ್ಕು ಬೀಳುವಷ್ಟು ಮೂರ್ಖನಲ್ಲ.

ಸಾವಕಾಶ ಗಾರ್ಡ ಊರಿಗೆ ಬಂದವನೇ ಮಾತು ಕಡಿಮೆ ಮಾಡಿದ. ಊರಿನ ಜನರೆಲ್ಲ ಗುಂಪುಗುಂಪಾಗಿ ಸಂಜೆ ಊರ ಕಟ್ಟೆಯ ಹತ್ತಿರ

ನೆರೆಯುತ್ತಾರೆ. ಅಲ್ಲಿ ಗಾರ್ಡ್ ಹೋಗುವಾಗ ಮಾತನಾಡಿದರೆ, "ಇಂದು ನಿಮ್ಮ ರೇಂಜರ ಸಾಹೇಬ್ರೆಲ್ಲಿ? ಎಲ್ಲೋ ರಾತ್ರಿ ಪ್ರಯಾಣ ಇರಬೇಕಲ್ಲ?" ಎಂದು ಉದ್ದೇಶಪೂರ್ವಕವಾಗಿ ಕೇಳುತ್ತಾರೆ. ಸುಮ್ಮನಾದರೂ ಗೇಲಿಮಾಡುವುದಕ್ಕೆ ಮಿತಿಯೇ ಇಲ್ಲ. ಇವನೂ ಒಬ್ಬ ರೇಂಜನೇ ಆಗಿಬಿಟ್ಟ ಎಂದು ಹೇಳಿ ಗಹಗಹಿಸಿ ನಗುವುದು ಸಾಮಾನ್ಯ.

ತಾನು ಈ ನೌಕರಿಗೇ ರಾಜೀನಾಮೆ ಕೊಡುವ ವಿಚಾರವನ್ನು ಮಾಡಿದ್ದೇನೆ. ಆದರೆ? ಕಟ್ಟಿಕೊಂಡ ಹೆಂಡತಿ, ಹುಟ್ಟಿಸಿಕೊಂಡ ಮಗಳು ಇದ್ದಾರೆ. ಒಂದೇ ಹೊಟ್ಟೆಯಾದರೆ ಬಿಸಿಬೂದಿಯನ್ನಾದರೂ ತಿನ್ನಬಹುದು. ನನ್ನ ಜೊತೆ ಇನ್ನು ಎರಡು ಇದ್ದಾವಲ್ಲ ಎಂದು ಎಚ್ಚರಿಸಿಕೊಂಡ ಪ್ರಸಂಗಗಳೂ ಕೆಲವಿವೆ. ಊರಿಗೆ ಬಂದಾಗ ರಾಜಣ್ಣ ಭೆಟ್ಟಿಯಾಗುವುದು ಖಂಡಿತ. ಸಿಕ್ಕಾಗಲೆಲ್ಲ, "ಏನಪ್ಪಾ, ನಿಮ್ಮ ಸಾಹೇಬ್ರೇನಂತಾರೆ?" ಎಂದು ಕೇಳಿ ಸಾವಕಾಶವಾಗಿ ಬೆಟ್ಟದ ಗುಟ್ಟನ್ನೆಲ್ಲ ತಿಳಿದುಕೊಳ್ಳುವನು. ಆದರೆ ಗಾರ್ಡ್ ಮೋಟಕಾಗಿ ಉತ್ತರಿಸಿ ಆದಷ್ಟು ಬೇಗ ಜಾರಿಕೊಳ್ಳುತ್ತಾನೆ.

ರೇಂಜರ ಸಾಹೇಬರು ಒಮ್ಮೆ ಡ್ಯೂಟಿ ಮುಗಿಸಿ ಹೋಗುವಾಗ ಭೆಟ್ಟಿಮಾಡಲು ಹೇಳಿಕಳಿಸಿದ್ದರು. ಬರುವಾಗ ಎದೆಯಲ್ಲಿ ನೀರಿರಲಿಲ್ಲ.

"ನಿಮ್ಮೂರಲ್ಲಿ ರಾಜಣ್ಣ ಯಾರುಗೊತ್ತೊ?"



"ಹೌದು ಸಾರ್."

"ಅವನಿಗೂ ನಿನಗೂ ಸಂಬಂಧ ಇದೆಯೊ?"

"ಇಲ್ಲ ಸಾಹೇಬರೆ."

"ಸಂಬಂಧ ಇಲ್ಲ? ಆತ- ನೀನು ಸ್ವಲ್ಪ ಫ್ಯಾಮಿಲಿಲಿದ್ದಿ ಅಂತ ಕಾಣಿಸ್ತದೆ," ಎಂದಾಗ ಗಾರ್ಡ್‌ನ ಎದೆ ಒಡೆಯುತ್ತದೆ. ಯಾವ ಪ್ರತ್ಯುತ್ತರವನೂ ಕೊಡದೇ ಸುಮ್ಮನಾಗುತ್ತಾನೆ. "ಇನ್ನು ಮುಂದೇನಾದರೂ ಇಂಥ ಸುದ್ದಿ ಬಂದರೆ ನಿನ್ನೂ ರಾಜಣ್ಣನ ಸಂಗಡವೇ ಹೊರ ಹಾಕಿಸ್ತೀನಿ" ಎಂದಾಗ ಗಾರ್ಡ ಬೆವರುತ್ತಾನೆ.

ರಾಜಣ್ಣನ ಕಳ್ಳತನ ಜಾಸ್ತಿಯಾಯಿತು. ಗಾರ್ಡ ರಿಪೋರ್ಟ ಮಾಡದಿರುವದು ಯಾರಿಗೂ ತಿಳಿಯುತ್ತದೆ. ರೇಂಜರ ಸಾಹೇಬರಿಗೆ ಹೇಗಾದರೂ ಮಾಡಿ ಹೇಳಲೇಬೇಕೆಂದು ನಿರ್ಧರಿಸಿದ. "ಸಾಹೇಬರೇ, ರಾಜಣ್ಣ ಇಂದು ಲಾರಿ ತಕ್ಕೊಂಡು ಬರೋಹಾಗೆ ಕಾಣಿಸ್ತದೆ," ಎಂದ. ರೇಂಜರ ಸಾಹೇಬರು ಇನ್ನೂ ಎರಡು ಗಾರ್ಡುಗಳನ್ನು ಜೊತೆಯಲ್ಲಿ ಕರೆದು ಒಯ್ದರು. ತಾವು ಟಾರ್ ರಸ್ತೆಯಲ್ಲಿ ಜೀಪು ಇಟ್ಟುಕೊಂಡು ನಿಂತರು. ಕೈಯಲ್ಲಿ ಪಿಸ್ತೂಲು ಇದೆ. ಜೊತೆಗೆ ಜೀಪು ಇದೆ. ಗಾರ್ಡುಗಳಿಗೆ ಬರೇ ಕೋಲು, ಟೊಪ್ಪಿಗೆ, ಕಾಲಿಗೊಂದು ಚಪ್ಪಲಿ. ಹೊಡೆಸಿದರೆ ಹೊಡೆಸಿಕೊಳ್ಳುವುದು, ಗದರಿಸಿದರೆ ಓಡುವದು. ರಾತ್ರಿ ೧೨ ಗಂಟೆಗೆ ಕಾದುಕುಳಿತರು. ಲಾರಿ ಬರುವ ಕಚ್ಚಾ ರಸ್ತೆಯಲ್ಲಿಯೇ ಗಾರ್ಡುಗಳು ಕಾದು ಸುಸ್ತಾದರು. ಲಾರಿ ಬಂದ ತಕ್ಷಣ ಗಾರ್ಡ ಕೈ ಮಾಡಿದ. ಕೂಡಲೇ ಲಾರಿ ನಿಲ್ಲಿಸಿದರು. ರಾಜಣ್ಣ ಇಳಿದು ಬಂದು, "ರೇಂಜರ ಸಾಯಿಬ್ರಿದ್ದಾನೇನೊ?" ಎಂದು ಕೇಳಿದ. "ಇದೂ ಊರಂತ ಮಾಡಿರಬೇಕು ಬಡ್ಡಿಮಗ. ಇಳಿಸ್ತೇನೆ ನೋಡು, ನಿನ್ನ ದಮ್ಮು," ಎಂದುಕೊಂಡ ಗಾರ್ಡ. "ಹೌದು, ಇಲ್ಲೇ ನಿಂತಿದ್ದಾರೆ. ಹೋಗಿ ಹೇಳಿಕೊಳ್ಳಿ," ಎಂದ.

ರಾಜಣ್ಣ ಲಾರಿಯೊಂದಿಗೆ ಬಂದ. ರೇಂಜರ ಆಫೀಸಿನಲ್ಲಿ ಕೇಸು ದಾಖಲಾಯಿತು. ರಾಜಣ್ಣ ಕಾಣ ಕಂಡವನಾದ. ಗಾಯಗೊಂಡ ಸರ್ಪದಂತಾದ. ಗಾರ್ಡನನ್ನು ಕಂಡರೆ ಬುಸುಗುಟ್ಟಿದ. ಅರ್ಧಲಕ್ಷ ರೂಪಾಯಿಯ ಸಾಗವಾನಿಕಟ್ಟಿಗೆಯ ಕಳ್ಳಸಾಗಾಟ ಮಾಡಿದ ಕೇಸು ದಾಖಲಾಗಿತ್ತು. ಆದರೆ ರಾಜಣ್ಣ ಬಿಡುವನೆಯೇ? ಐವತ್ತು ಸಾವಿರವೆಂದರೆ ಆತನಿಗೆ ಕಾಲುಕ. ಸಿ.ಆರ್.ಎಫ್.ಓ.ನಿಂದ ಹಿಡಿದು ಡಿ. ಎಫ್. ಓ. ಕನ್ಸರ್ವೇಟವರೆಗೂ ಗೊತ್ತಿದೆ. ಅವರ ತಾತ-ಮುತ್ತಾತರನ್ನೂ ಮಾತಾಡಿಸಬಲ್ಲವ, ಅವನಮೇಲೆ ಕೇಳಬೇಕೆ? ರಾಜಣ್ಣ ಬಚಾವಾದದ್ದು ನೀರು ಕುಡಿದಷ್ಟು ಸುಲಭ.

ಗಾರ್ಡ ಊರಿಗೆ ಹೋಗುವಾಗ ಗಡಗಡ ನಡುಗಿದ. ಮನೆಯ ಮೇಲೆ ರಾತ್ರಿ ಕಲ್ಲುಗಳ ತೂರಾಟ ಪ್ರಾರಂಭವಾಯಿತು.

ಆತ ರಸ್ತೆಯಲ್ಲಿ ಓಡುವಾಗ ರಾಜಣ್ಣ ಕಣ್ಣು ಅರಳಿಸಿ ನೋಡಿದ-ನುಂಗಿ ಬಿಡುವ ಹದ್ದಿನ ಹಾಗೆ. ಗಾರ್ಡ ಅಸಹಾಯಕನಂತೆ ನುಸುಳಿಕೊಂಡ.

ಈಗ ಈ ಅವಸ್ಥೆಗೆ ಮಾತ್ರ ರಾಜಣ್ಣನೇ ಕಾರಣ ಎಂದು ಹೇಳಬೇಕೆ? ಅಂದು ರೇಂಜರ ಸಾಹೇಬರು ಅವನನ್ನು ನೋಡಲಿಕ್ಕೆ ಬರುವವರಿದ್ದಾರೆ-ಅನುಕಂಪ ತೋರಿಸಲಿಕ್ಕೆ. ಈಗಾಗಲೇ ಗಾರ್ಡನ ಗೆಳೆಯ ರೇಂಜರ ಸಾಹೇಬರು ಬರುವ ಬಗ್ಗೆಯೂ ಹೇಳಿದ್ದಾನೆ. ಸಾಹೇಬರು ಬಂದರು, ಕೆಲವು ಗಾರ್ಡುಗಳನ್ನೂ ಕೂಡಿಕೊಂಡು ಎಲ್ಲರನ್ನೂ ಹೊರಗೆ ಕಳಿಸಿ ಅವರು ಗಾರ್ಡನ ತಲೆಪಟ್ಟಿ ಮೇಲೆ ಕೈಯಿಟ್ಟು ಕೇಳಿದರು:

"ರಾಜಣ್ಣನೇ ಇರಬೇಕಲ್ಲ?"

"ಅಲ್ಲ ಸರ್."

"ಮತ್ತೆ ನಮ್ಮ ಎಲ್ಲ ಗಾರ್ಡ್ಸ ಹಾಗೆ ಹೇಳ್ತಾರ?"

"ಮತ್ತೆ ನನಗೊತ್ತಿಲ್ಲ ಸರ್."

"ನೀನೋಡ್ಲಿಲ್ವೆ?

"ನನಗೆ ನೆನಪಿಲ್ಲ ಸರ್."

"ನೀನೇ ಹೀಂಗೆಂದ್ರೆ ಹ್ಯಾಗೆ ಕೇಸು ಮಾಡೋದು? ಪೋಲೀಸ್ನೋರ ಮುಂದಾದ್ರೂ ಹೇಳ್ತೀಯಾ?"

"ಇಲ್ಲ, ನನಗೊತ್ತಿಲ್ಲ ಸರ್."

ಪೋಲೀಸಿನೋರಿಗೆ ದೂರು ಕೊಡಲಿಕ್ಕೆ ಅವರೇನು ಮೇಲಿಂದ ಇಳಿದು ಬಂದವರಲ್ಲ. ಅವರೂ

ಮನುಷ್ಯರು ತಾನೆ? ಕೇಸು ಮಾಡಿದ್ರೆ ರಾತ್ರಿ ಹನ್ನೆರಡು ಗಂಟೆಗೆ ಗಾರ್ಡನ ಮನೆ ಬಾಗ್ಲಲ್ಲಿ ನಿಂತು ನೋಡಿದವರ ಸಾಕ್ಷ್ಯ ಬೇಕು. ಅವರು ಸಂಬಂಧಿಕರೂ ಇರಬಾರದು. ವಕೀಲಿ ಕಟ್ಟಲೇ ಬೇಕು. ಕೇಸು ರೂಢಿಸಲಿಕ್ಕೆ ಕಡಿಮೆಯೆಂದರೂ ಐದಾರು ಸಾವಿರ ಬೇಕೇಬೇಕು. ಆಸ್ಪತ್ರೆಯ ಬಿಲ್ ಕೊಡೋದೇ ಭಾರವಾಗಿರುವಾಗ ಅವನ್ನೆಲ್ಲ ಯಾವ ರೀತಿ ಬಗೆಹರಿ-ಬೇಕು? ಊರಿಗೆ ಊರೇ ರಾಜಣ್ಣನ ಕೈ ಕೆಳಗಿರುವಾಗ ಈ ಬಡ ಗಾರ್ಡನಿಗೆ ಸಾಕ್ಷ್ಯ ಯಾರು ಹೇಳಬೇಕು. ಹೇಳುವವರಿದ್ದರೂ ರಾಜಣ್ಣ ಸುಮ್ಮನಿರ್ತಾನೆಯೆ? ನಮ್ಮ ಸಾಹೇಬ್ರು ಹೇಳ್ತಾರೆಯೋ? ಈ ಪ್ರಶ್ನೆಗಳನ್ನೆಲ್ಲಾ ಗಾರ್ಡ ಕೂಲಂಕಷ ವಿಚಾರ ಮಾಡಿದ್ದಾನೆ. ತೀರ್ಮಾನಕ್ಕೂ ಬಂದಿದ್ದಾನೆ. ಆತನಿಗೆ ರೇಂಜರ ಸಾಹೇಬ್ರು ಕೇಳುವ ಪ್ರಶ್ನೆಗಳು ಅರ್ಥಹೀನವಾದವುಗಳು.

ಗಂಟಲು ಸಡಿಲಿಸುತ್ತ ಸಾಹೇಬರು ಹೇಳಿದರು: "ಛೇ, ಹೇಗಾದರೂ ಮಾಡಿ ಕೇಸು ಮಾಡಲೇಬೇಕು."

"ಕೋರ್ಟಿಗೇ ಹೋಗಿ ಅಲ್ಲೇ ನನ್ನ ಸಂಸಾರ ಇರೋದಂದ್ರೆ ಅಡ್ಡಿಯಿಲ್ಲ ಸರ್. ಊರಿಗೆ ಹೋಗೋದಿದ್ರೆ ಆಗಲಿಕ್ಕಿಲ್ಲ ಸರ್." ಇಷ್ಟು ದಿಟ್ಟತನದಿಂದ ಅವನು ಸಾಹೇಬರ ಹತ್ತಿರ ಮಾತನಾಡಿದ್ದು ಇದೇ ಮೊದಲ ಸಲ. ಅಪ್ರಿಯವಾದರೂ ಸತ್ಯ. ಆದ್ದರಿಂದ ಗದ್ಗದಿತ ಕಂಠದಿಂದ ಇಷ್ಟೊತ್ತಿನವರೆಗೆ ಒತ್ತಿ ಹಿಡಿದಿಟ್ಟ ಶಬ್ದಗಳು ಒಮ್ಮೆಲೆ ಹೊರಗೆ ಬಂದವು.

ಈ ರೇಂಜರ ಸಾಹೇಬರು ದೊಡ್ಡ ಜನ. ಅಧಿಕಾರ ಇದೆ. ದರ್ಪ ಇದೆ. ಹಣ ಇದೆ, ತಲೆ ಇದೆ. ಹೇಗಾದರೂ ಕೇಸ್ ಮಾಡಬೇಕು ಅನ್ನೋದು ತನ್ನ ಹಿತಕ್ಕಾಗಿ ಅನ್ನೋದು ಆತನಿಗ ಗೊತ್ತಿಲ್ಲದೇ ಇಲ್ಲ. ಆದರೆ ತಾನೇ ಪಿತೂರಿ ಕೊಟ್ಟು ರಾಜಣ್ಣನನ್ನು ಅಷ್ಟು ಸಲೀಸಾಗಿ ಬಿಟ್ಟುಕೊಡುವಾಗ ಇವರಿಗೆ ಆ ವಿಚಾರ ಬರಲಿಲ್ಲವೇನೋ? ತನ್ನ ಅವಸ್ಥೆ ಈ ರೀತಿ ಆಗಬಹು




"ರೇಲ್ವೆ ಅಪಘಾತಗಳು ಹೆಚ್ಚಾಗುತ್ತಾಯಿವೆಯೆಂದು ನೀವು ಹೆದರಬೇಕಿಲ್ಲ. ನಾವು ರೈಲು ಕಂಬಿಗಳ ಮೇಲೆ ಸ್ಪೀಡ್ ಬ್ರೇಕರ್ಸ್ ನಿರ್ಮಾಣ ಮಾಡಲು ನಿರ್ಧರಿಸಿದ್ದೇವೆ."

ದೆಂಬುದನ್ನು ಆತ ಆಗಲೇ ಊಹಿಸಿದ್ದ. ಪರಿಸ್ಥಿತಿಯ ಪೂರ್ಣ ಅರಿವಿದ್ದವನಿಗೇ ವಿಷಯದ ಪೂರ್ವಾಪರಗಳನ್ನು ಊಹಿಸುವ ಶಕ್ತಿ ಇರುತ್ತದೆ. ತನ್ನ ಅವಸ್ಥೆ ಹೀಗಾಗಲಿಕ್ಕೆ ರೇಂಜರ ಸಾಹೇಬ್ರೂ ಕಾರಣರಲ್ಲದೇ ಇಲ್ಲ ಎನ್ನುವ ವಿಚಾರಗಳೂ ಸುಳಿದವೆ.

ಕಳ್ಳ ಸಾಗಾಟ ಮಾಡಲಿಕ್ಕೆ ರಾಜಣ್ಣನಂಥವರಿದ್ದಾರೆ. ಅಂಥವರು ಸಿಕ್ಕಿ ಹಾಕೊಳ್ಳದೇ ಇರೋಹಾಗೆ ನೋಡಲಿಕ್ಕೆ ಅವರ ಹತ್ರ ಹಣ ಇದೆ, ಜನ ಇದ್ದಾರೆ. ಅವರ ಪರವಾಗಿ ವಾದಿಸಲಿಕ್ಕೆ ವಕೀಲ್ರಿದ್ದಾರೆ. ಲಾರೀನೂ ಅವಂದಲ್ಲ ಎಂದು ತೀರ್ಮಾನ ಕೊಡಲಿಕ್ಕೆ ನ್ಯಾಯಾಧೀಶದ್ದಾರೆ. ಅವಕ್ಕಿಂತ ಮಿಗಿಲಾಗಿ ಹಿಡಿದವರೇ ಅವರನ್ನೂ ಎಂ.ಪಿ. ದೋ ಎಂ.ಎಲ್.ಎ.ನ ದೋ ಅಥವಾ ಮಿನಿಸ್ಟರದ್ದೋ ಒತ್ತಾಯಕ್ಕೆ ಮಣಿದು ಬಿಡುವ ಅಧಿಕಾರಿಗಳಿದ್ದಾರೆ. ಆದರೆ ಗಾರ್ಡರು ಮಾತ್ರ ಪತಂಗಗಳು. ಗೋರಿ ತೋಡಿಕೊಳ್ಳುವವರು. ಹಿಡಿದುಬಿಡಬೇಕಾದವರು, "ಯಾಕೆ ಸಾಹೇಬ್ರೆ, ಆತನನ್ನು ಬಿಡ್ತೀರಾ?" ಅಂತ ಕೇಳುವಷ್ಟು ಹಕ್ಕಿಲ್ಲದವರು". ಮೈಯಲ್ಲಿ ರಕ್ತವೇ ಇಲ್ಲದವರು. ಹೇಳಿದಷ್ಟು ಮಾಡಿ, ಕೊಟ್ಟಷ್ಟು ತಿಂದು ಸಾಯುವ ನಾಯಿಗಳು. ಕೆಲವು ನಿಮಿಷ ಮೌನಿಯಾದ ರೇಂಜರ ಸಾಹೇಬರು ಹೇಳಿದರು:

"ನಾನೀಗ ಪಿ.ಎಸ್. ಐ.ಯವರಿಗೆ ಬರಲಿಕ್ಕ ಹೇಳಿದ್ದೇನೆ. ಇದೀಗ ಬರ್‍ತಾರೆ ನಿನ್ನ ಕೇಳೋಕೆ. ಮೆಡಿಕಲ್ ಸರ್ಟಿಫಿಕೇಟು ಪಡೆದುಕೊಳ್ತಾರೆ. ಆಮೇಲೆ ನೀನು ಸ್ವಲ್ಪ ಸಂಶಯ ವ್ಯಕ್ತಪಡಿಸಿದರೂ ರಾಜಣ್ಣನನ್ನು ಅರೆಸ್ಟ್ ಮಾಡ್ತಾರೆ." ಅಂದಾಗ ಗಾರ್ಡ್ ದೊಡ್ಡಕ್ಕೆ ನಕ್ಕುಬಿಟ್ಟ.

ಕುದಿಯುತ್ತಿದ್ದ ವಿಚಾರಗಳೆಲ್ಲ ಕೋಣೆಯ ಹಂಚಿನವರೆಗೆ ನಗೆಯ ಅಲೆ ಅಲೆಯಾಗಿ ತೇಲಿಹೋದವು. ಡಾಕ್ಟರ ಸರ್ಟಿಫಿಕೇಟು ಪಿ. ಎಸ್. ಐ. ಅರೆಸ್ಟುಗಳ ಬಗ್ಗೆಲ್ಲ ಆತ ಈಗಾಗಲೇ ವಿಚಾರಿಸಿ, "ಅವೆಲ್ಲ ದುಡ್ಡಿನ ಮೇಲೆ ನಿಂತಿರುವವು. ಯಾವುದರ ಮೇಲೂ ನನಗೆ ಈ ಬಡವನಿಗೆ ನಂಬಿಕೆ ಇಲ್ಲಸಾರ್, ಕ್ಷಮಿಸಿಬಿಡಿ," ಎಂದ. ವಿಚಾರಕ್ಕೆ ಅವಕಾಶ ಕೊಡಲಾಗಲಿಲ್ಲ. ಪಿ.ಎಸ್. ಐ. ಬಂದು ವಿಚಾರಣೆ ಪ್ರಾರಂಭಮಾಡಿಬಿಟ್ಟಿದ್ದರು. ರೇಂಜರ ಸಾಹೇಬರ ಒತ್ತಾಯಕ್ಕೆ ಗಾರ್ಡ ಮಣಿಯಲೇಬೇಕಾಯಿತು. ಅದೇ ಬಾಯಿಂದ ರಾಜಣ್ಣನ ಬಗ್ಗೆಯೂ ಒಂದೆರಡು ಶಬ್ದಗಳು ಹೊರಬಂದವು. ರಿಪೋರ್ಟ ತೆಗೆದುಕೊಂಡು ಸಾಹೇಬರೂ ಅವರ ಜೊತೆಗೆ ಹೊರಟುಹೋದರು.

ಗಾರ್ಡನ ಹೆಂಡತಿ ಮೂಕಿಯಂತೆ ಕುಳಿತಿದ್ದಳು. ಪೋಲೀಸ್ ಇನಸ್ಪೆಕ್ಟರ ಜತೆ ಒಂದೆರಡು ಮಾತನಾಡಿದ್ದಳು. ರಿಪೋರ್ಟಿನಲ್ಲಿ ಅವಳು ಯಾವುದೇ ಮಾತನಾಡುವ ಸಂಭವ ಇರಲಿಲ್ಲ. ಮತ್ತೆ ಮತ್ತೆ ಅದೇ ವಿಷಯಕ್ಕೆ ಆಕೆ ತಿರುಗುತ್ತಿದ್ದಳು; "ನಾನು ನಿಮಗೆ ಎಷ್ಟು ಸಲ ಹೇಳಿದ್ದೀನಿ. ಇಡೀ ಜಗತ್ತೆ ಬಂಡ ಸಾಮ್ರಾಜ್ಯ ಆದಾಗ ನಿಮಗ್ಯಾಕೆ ಅಂತ, ನೀವು ಕೇಳಿದ್ದೀರಾ?. ಯಾರನ್ನು ಕಾಡಿದ್ರೂ ರಾಜಣ್ಣನ್ನ ಕಾಡಬೇಡಿ ಅಂತ ಹೇಳಲಿಲ್ಲ?" ಎಂದಾಗಲಂತೂ ಗಾರ್ಡನ ಮೈ ಉರಿಹಾಕಿಕೊಂಡಂತೆ. ಆಫೀಸಿನಲ್ಲಿ ಸಾಹೇಬರ ಕಿರುಕಳ ಅವಳಿಗೇನರ್ಥ ಆಗಬೇಕು ಎಂದು ಮನಸ್ಸಿನಲ್ಲಿಯೇ ನೊಂದುಕೊಂಡ.

ಗಾರ್ಡ ಚೇತರಿಸಿಕೊಂಡ ಕೆಲವೇ ದಿನಗಳಲ್ಲಿ ಕೋರ್ಟು ಪ್ರಾರಂಭವಾಯಿತು. ರೇಂಜರ ಸಾಹೇಬರು ರಾಜಣ್ಣನಷ್ಟೇ ಪ್ರಭಾವಶಾಲಿಯಾದ ವಕೀಲನನ್ನು ತರಲಿಲ್ಲ. ಸಾಕ್ಷಿ ಇಲ್ಲದ ಕೇಸು ಒಂದೇ ಒಂದು ಹಿಯರಿಂಗಿಗೆ ಹಾರಿಹೋಗಿತ್ತು. ಊರಿಗೆ ಊರೇ ರಾಜಣ್ಣನ ಪರವಾಗಿ ವಾದಿಸಿತ್ತು. ಸಾಕ್ಷ್ಯಗಳು ಹಲವಾರು. ಆದಿನ ರಾತ್ರಿ ರಾಜಣ್ಣ ಊರಿನಲ್ಲೇ ಇಲ್ಲವಂತೆ. ಅಂದಮೇಲೆ ಹೊಡೆತದ ಮಾತೆಲ್ಲಿ? ನ್ಯಾಯಾಧೀಶರೇ ನ್ಯಾಯ ಕೊಟ್ಟ ಮೇಲೆ ಸಾಮಾನ್ಯರ ಅಭಿಪ್ರಾಯಗಳಿಗೆಲ್ಲಿ ಬೆಲೆ?

ಗಾರ್ಡ ಮುಖಮುಚ್ಚಿ ಕೋರ್ಟಿನ ಹೊರಗೆ ಬಂದ. ಮತ್ತೆ ಅದೇ ಊರಿಗೆ ಹೋಗಬೇಕು. ಮತ್ತೆ ಅದೇ ಜನಗಳ ಮಧ್ಯೆ ಬಾಳಬೇಕು. ನರಕಕ್ಕೂ ಅದಕ್ಕೂ ಅಂತರವೇ ಇಲ್ಲ. ಮತ್ತೆ ಅದೇ ಡ್ಯೂಟಿ. ಹೊಟ್ಟೆ ಹೊರೆಯುವದಕ್ಕಾಗಿ ಮಾಡುವ ಕರ್ತವ್ಯಗಳು. ನಿಷ್ಠೆಯಿಂದ ದುಡಿದವರಿಗೆ ಸಿಗುವ ಫಲಗಳನ್ನೇನು ಈ ಯುಗದಲ್ಲಿ ಯಾರಿಗೂ

ಯಾರೂ ತಿಳಿಸಿ ಹೇಳಬೇಕಾಗಿಲ್ಲ. ಗಾರ್ಡ ದಾರಿ ಬಡಿದವನಂತೆ ಮಂಕಾಗಿದ್ದ.

ಇಂಥ ಜೀವನವನ್ನು ಕೆಲವೇ ದಿನ ಕಳೆದ. ಒಮ್ಮೆ ಹೆಂಡತಿಯನ್ನು ಮಗಳನ್ನೂ ಕರೆದು ಕೊಂಡು ಆಸ್ಪತ್ರೆಗೆ ಬಂದಿದ್ದ. ತಿರುಗಿ ಹೋಗಿ ನೋಡಿದರೆ ಗುಡಿಸಲು ಬೆಂಕಿಗಾಹುತಿಯಾಗಿತ್ತು. ಬೆಟ್ಟ ರಕ್ಷಿಸುವವರ ಮನೆ ಬಯಲಾಗಿತ್ತು. ಬಿಸಿ ಬೂದಿಯ ಸುತ್ತ ಕೆಲವರು ನೀರು ಹಾಕು ತ್ತಿದ್ದರು. ಕೆಲವರು ಮೊಸಳೆ ಕಣ್ಣೀರು ಸುರಿಸು ತ್ತಿದ್ದರು. ಹೆಂಡತಿ ಗೋಳೋ ಎಂದು ಹೊಯ್ದು ಕೊಂಡಳು. ಗಾರ್ಡ ತನ್ನ ಕಣ್ಣನ್ನೇ ನಂಬದಾದ. ಮನೆಯಲ್ಲಿದ್ದ ಯಾವ ಸಾಮಾನೂ ಸಿಗುವ ಹಾಗಿರಲಿಲ್ಲ. ಮೂರು ವರ್ಷ ದುಡಿದ ಸಂಬಳ ವನ್ನೆಲ್ಲ ಬೆಂಕಿಗಿಟ್ಟಿದ್ದ. ರಾಜಣ್ಣನನ್ನು ಹಿಡಿ ಯುವ ಕರ್ತವ್ಯ ಪಾಲಿಸಿದ್ದ. ಅವನ ಬೆಂಕಿಗೆ ಆಹುತಿಯಾಗಿದ್ದ.

ತನ್ನ ಅಳಲನ್ನು ಯಾರೊಡನೆ ತೋಡಿಕೊಳ್ಳ ಬೇಕು? ಸಾಹೇಬರೊಡನೆ? ಅಧಿಕಾರಿಗಳೊಡನೆ? ಏನೇ ಮಾಡಿದರೂ ಈ ಪ್ರಪಂಚದಲ್ಲಿ ಅವು ಅರಣ್ಯರೋದನ. ಕೆಲವೇ ನಿಮಿಷಗಳಲ್ಲಿ ಪೋಲೀ- ಸರು ವಿಚಾರಣೆ ನಡೆಸಲಿಕ್ಕೆ ಬಂದರು. ರೇಂಜರ ಸಾಹೇಬರೂ ಸುದ್ದಿ ತಿಳಿದು ಬೆಳಗಾದ ತಕ್ಷಣ ಧಾವಿಸಿದರು. ಈಗ ಯಾವ ಸಾಕ್ಷ್ಯವೂ ಬೇಕಾಗಿರಲಿಲ್ಲ. ಪೋಲೀಸರಿಗೆ ಬೇಕಾದದ್ದು ಈಗ ಗಾರ್ಡನ ರಿಪೋರ್ಟ್ ಮಾತ್ರ.

ಊರಿಗೆ ಊರೇ ಗಾರ್ಡನ ಮನೆಯ ಮುಂದೆ. ಬಿಸಿಬಿಸಿ ಬೂದಿಯ ಹತ್ತಿರ. ಚಳಿಯಲ್ಲಿ ನಿಂತೆಲ್ಲ ರಿಗೂ ಸಮಾಧಾನವಾಗಿರಬೇಕು. ಬೆಳಗಿನ ಚಳಿ ಯಲ್ಲಿ ಪೋಲೀಸರನ್ನು ನೋಡಲು ಜನ ನೆರೆದಿ ದ್ದರು. ರಾಜಣ್ಣನೂ ತಾನು ಬಾರದಿದ್ದರೆ ಸಂಶಯ ಬರಬಹುದೆಂದು ಬಂದಿದ್ದ. ಪೋಲೀಸರನ್ನು ಆತನೇ ನಮಸ್ಕರಿಸಿದ. ಎಲ್ಲರೂ ಬೆಂದ ಮನೆ ನೋಡುತ್ತಾ ನಿಂತರು. ರಾಜಣ್ಣ ಗಾರ್ಡನನ್ನು ನೋಡಿ ಕಣ್ಣು ಕೆಕ್ಕರಿಸಿದ.

ಗಾರ್ಡನ ಸಹನೆ ಮಿತಿಮೀರುತ್ತದೆ. ಈ ಊರನ್ನೇ ಬಿಟ್ಟರೂ ಅಡ್ಡಿಯಿಲ್ಲ. ಹೇಗಾದರೂ ಮಾಡಿ ರಾಜಣ್ಣನ ವಿರುದ್ಧ ಕಂಪ್ಲೇಂಟು ಕೊಡಲೇ ಬೇಕು. ಇಂದು ಮನೆಗೆ ಬೆಂಕಿ ಹಾಕಿಸಿದವ ನಾಳೆ ಕೊಲೆ ಮಾಡಲೂ ಹೇಸುವದಿಲ್ಲ. ನಾನಿಲ್ಲದ ವೇಳೆ ಯಲ್ಲಿ ಮಗಳನ್ನೂ ಹೆಂಡತಿಯನ್ನೂ ಕೊಲೆ ಮಾಡಿ ಸಿದರೆ? ದಿನಾ ಕಿರುಕಳವನ್ನಂತೂ ಕೊಟ್ಟೇ ಕೊಡು ತ್ತಾನೆ. ಅದಕ್ಕಿಂತ ಊರು ಬಿಟ್ಟು ಯಾರ ದಾದರೂ ಮೊರೆಹೋಗಿ ಬದುಕುವುದೇ ಲೇಸು. ಈ ಕೇಸಿನಲ್ಲಿ ಸಾಕ್ಷ್ಯ ಇಲ್ಲದಿದ್ದರೂ ನಡೆಯಬಹುದು. ಮೊದಲೊಮ್ಮೆ ನಾನೇ ಕಂಪ್ಲೇಂಟು ಮಾಡಿದ್ದು ಕೋರ್ಟಿಗೆ ಗೊತ್ತಿದೆ. ರೇಂಜರ ಸಾಹೇಬರ ಕಾಲು ಬಿದ್ದಾದರೂ ಈ ಕೇಸು ರೂಢಿಸಲೇಬೇಕು. ರಾಜ- ಣ್ಣನ ಕೈಗೆ ಕೋಳ ಬೀಳುವದನ್ನು ನೋಡಬೇಕು. ಭೋರ್ಗರೆಯುವ ವಿಚಾರಗಳು ವೈಮನಸ್ಸ ನ್ನೆಲ್ಲ ತುಂಬುತ್ತವೆ. ನಿಂತಲ್ಲಿಯೇ ಆಕಾಶ ದೆತ್ತರ ವಿಚಾರಗಳು ಒಮ್ಮೆಲೆ ಧೊಪ್ಪನೆ ನೆಲಕ್ಕೆ ಕುಸಿಯುತ್ತವೆ. ವಾಸ್ತವತೆಗೆ ಹತ್ತಿರವಾದ ಬದುಕು ಬೇರೆ ಎನಿಸುತ್ತದೆ. ರೇಂಜರ ಸಾಹೇಬ ರೊಡನೆ ಕಾಲು ಬೀಳೋದಕ್ಕಿಂತ ಇನ್ನೊಂದು ಗುಡಿಸಲು ಕಟ್ಟಿಸುವುದೇ ಲೇಸೆನಿಸುತ್ತದೆ. ರೊಚ್ಚಿನ ಕಿಡಿ ಬೂದಿಯಲ್ಲಿ ಬಿದ್ದು ಮುಳುಗಿ ಹೋಗುತ್ತದೆ.

ಗಾರ್ಡ ರಿಪೋರ್ಟ್ ಮಾಡಿದ;

“ಸಂಜೆಯ ಮುಂದೆ ನನ್ನ ಮಗಳಿಗೆ ನೆಗಡಿ ಬಹಳ ಆದದ್ದರಿಂದ ಜ್ವರ ಬಂದಿತ್ತು. ದೇವರಲ್ಲಿ ಹರಕೆ ಹೊತ್ತು ದೀಪ ಹಚ್ಚಿ ದೇವರ ಫೋಟೋ ಮುಂದೆ ಇಟ್ಟಿದ್ದಿ. ಅದೇ ಏನಾದ್ರೂ ಹೆಚ್ಚು ಕಡಿಮೆ ಆಗಿರಬೇಕು....” ಆಗ ರೇಂಜರ ಸಾಹೇಬರು ಪೋಲೀಸ ಇನಸ್ಪೆಕ್ಟರ ಮುಖ ನೋಡಿದರು.

ರಾಜಣ್ಣ ನಿಟ್ಟುಸಿರು ಬಿಟ್ಟ. ಅಂಡರವೇರಿನ ಕಿಸೆಯೊಳಗಿಟ್ಟ ಹಣ ಭದ್ರವಾಗಿದೆಯೋ? ಎಂದು ನೋಡಿಕೊಂಡ.



# ಸರ್ಪಗಂಧಾ

**–ಎಂ. ಆರ್. ಶಾನಭಾಗ**

ರಕ್ತದ ಒತ್ತಡ. ಮಾನಸಿಕ ಒತ್ತಡಗಳನ್ನು ಕಡಿಮೆ ಮಾಡಿ ಸುಖನಿದ್ರೆ ನೀಡುವ ಸರ್ಪಗಂಧವು ಇನ್ನೂ ಹಲವು ಔಷಧೀಯ ಗುಣಗಳನ್ನು ಪಡೆದಿದೆ. ಚಂದ್ರಿಕಾ, ಸರ್ಪಗಂಧ, ಗರುಡ ಪಾತಾಳ, ಛೋಟಿ ಚಂದ, ಹರಕಾಯ ಎಂಬ ಹೆಸರಿನಿಂದ ಇದನ್ನು ಕರೆಯುವುದಿದೆ. ಈ ಗಿಡವು ಬಿಹಾರದ, ಪಾಟ್ನಾ, ಭಾಗಲಪುರ; ಆಸ್ಸಾಂ ಮತ್ತು ಕರ್ನಾಟಕದ ಬೆಟ್ಟಗಳಲ್ಲಿ ಬೆಳೆಯುತ್ತದೆ.

ಮೃದು ತೊಗಟೆಯ ಈ ಗಿಡವು ಸಾಧಾರಣ ೨೫ ರಿಂದ ೭೫ ಸೆಂಟಿಮೀಟರಿನ ಎತ್ತರಕ್ಕೆ ಬೆಳೆದು ಸಣ್ಣದಾದ ಗೊಂಚಲು ಗೊಂಚಲು ಹೂವನ್ನು ನೀಡುವುದು. ಹೂವು ಕೆಂಪು ಅಥವಾ ಬಿಳಿಯಾಗಿದ್ದು ನಂತರ ಕಪ್ಪು ಬಣ್ಣದ ಸಣ್ಣ ಗುಂಡಾದ ಹಣ್ಣು ಉಂಟಾಗುತ್ತದೆ. ಎಲೆಗಳು ೮ ರಿಂದ ೩೦ ಸೆಂಟಿಮೀಟರಿನಷ್ಟು ಉದ್ದವಾಗಿರುವವು. ಇದರ ಬೇರನ್ನು ಸುಮಾರು ೪೦೦೦ ವರ್ಷಗಳಿಂದಲೂ ಬಳಸಲಾಗುತ್ತಿದೆ.

ಈ ಬೇರನ್ನು ಇಂದಿಗೂ ಬಿಹಾರದ ಹೆಚ್ಚಿನ ಹಳ್ಳಿಗಳಲ್ಲಿ ಸಣ್ಣ ಮಕ್ಕಳಿಗೆ ನಿದ್ರೆ ಬರಿಸಲು ಉಪಯೋಗಿಸುವುದಿದೆ. ಹಿಂದೆ ಬೇರಿನ ಕಷಾಯವನ್ನು ಗರ್ಭಾಶಯವನ್ನು ಸಂಕುಚಿತಗೊಳಿಸಲು, ಭ್ರೂಣವನ್ನು ತೆಗೆದುಹಾಕಲು ಉಪಯೋಗಿಸುತ್ತಿದ್ದರು. ವಿಷಕಾರಕ ಹಾವು ಕಡಿದಾಗ, ಹುಳದ ಕೊಂಡಿಗಳು ಮೈಗೆ ಚುಚ್ಚಿದಾಗ ಬೇರನ್ನು ತೇಯ್ದು ಹಚ್ಚುವರು. ಮಿದುಳಿನ ದೋಷವಾದಾಗ ಇದನ್ನು ಅರೆದು ಸೇವಿಸುವರು.

೨–೪ ವರ್ಷದ ಗಿಡ ಮತ್ತು ಬೇರನ್ನು ಸಿಪ್ಪೆಯೊಂದಿಗೆ ಮಳೆಗಾಲದಲ್ಲಿ ಕೀಳುವರು. ಈ ಗಿಡಗಳನ್ನು ಬೇರಿನಿಂದ ಅಥವಾ ಬೀಜದಿಂದ ತಯಾರಿಸಬಹುದಾಗಿದೆ. ಡೆಹರಾಡೂನಿನ ಅರಣ್ಯ ಸಂಶೋಧನಾ ವಿಜ್ಞಾನ ಕೇಂದ್ರದಲ್ಲಿ ಇದರ ಹಲವು ತಳಿಗಳನ್ನು ಬೆಳೆಸುತ್ತಲಿದ್ದಾರೆ. ಭಾರತದಲ್ಲಿ ಇದರ ವಾರ್ಷಿಕ ಅಗತ್ಯ ೧೨೦೦ ಕ್ವಿಂಟಲ್ ಎಂಬುದಾಗಿ ಅಂದಾಜು ಮಾಡಲಾಗಿದೆ. ನಮ್ಮಲ್ಲಿ ಈ ಗಿಡಗಳ ಬಗೆಗೆ ಹಲವು ಮುಖ್ಯ ಸಂಶೋಧನೆಗಳು ನಡೆದಿದ್ದರೂ ಇವುಗಳಲ್ಲಿಯ ಮುಖ್ಯ ಸತ್ವಗಳನೊಳಗೊಂಡ 'ರಿಸರ್ಪಿನ್' ಎಂಬ ಔಷಧವನ್ನು ನಾವು ಇನ್ನೂ ಪರದೇಶದಿಂದ ತರಿಸಿಕೊಳ್ಳುತ್ತಲಿದ್ದೇವೆ.

ಅಮೃತಶಿಲೆಯ ಸೌಂದರ್ಯವನ್ನು ಸವಿಯಲು

# ಭೇಡಾ ಘಾಟಿಗೆ ಬನ್ನಿ

**ಅನಂತ ಜ್ಯೋತಿಷಿ**

ಪ್ರಾಕೃತಿಕ ಸಂಪತ್ತು ಮತ್ತು ಅಮೃತಶಿಲೆಯ ಸೌಂದರ್ಯದಿಂದ ತುಂಬಿದ ಜಬ್ಬಲಪುರ ಇಂದು ದೇಶವಿದೇಶಗಳ ಪ್ರವಾಸಿಗರ ಆಕರ್ಷಣ ಕೇಂದ್ರವಾಗಿದೆ.

ಮೌರ್ಯಕಾಲ ಮತ್ತು ಕಲಚೂರಿ ಅರಸು ಮನೆತನದ ಕಾಲದಲ್ಲಿ ಈ ಸ್ಥಳ ಮಹತ್ವಪೂರ್ಣವಾಗಿತ್ತು. ಸುಮಾರು ನಾಲ್ಕು ಶತಮಾನಗಳವರೆಗೆ ರಾಜ್ಯಭಾರ ಮಾಡಿದ ಪ್ರತಾಪಿಯಾಗಿದ್ದ



ಇಂದ್ರಧನುಷ್ಯದ ಅಮೃತಶಿಲೆಯ ಪರ್ವತದ ದೃಶ್ಯ- ಭೇಡಾ ಘಾಟ

ಯುವರಾಜದೇವ, ಕರ್ಣದೇವ ಮತ್ತು ಗಂಗದೇವ ಇತ್ಯಾದಿ ರಾಜಮಹಾರಾಜರುಗಳಿಗೆ ಜನ್ಮ ನೀಡಿದ ಕಲಚೂರಿ ವಂಶದ ರಾಜಧಾನಿ 'ತ್ರಿಪುರಿ'ಯು ಜಬ್ಬಲ್‌ಪುರದ ಬಳಿ ಇತ್ತು. ಹದಿನೆಂಟನೆಯ ಶತಮಾನದಲ್ಲಿ ಮರಾಟರು ತಮ್ಮ ರಾಜಧಾನಿಯನ್ನು ಸಾಗರದಿಂದ ಜಬ್ಬಲಪುರಕ್ಕೆ ಸ್ಥಳಾಂತರಿಸಿಕೊಂಡರು. ೧೮೧೭ರಲ್ಲಿ ಈ ಸುಂದರ ಪ್ರದೇಶವು ಆಂಗ್ಲರ ಕೈವಶವಾಯಿತು.

ಸಮುದ್ರ ಪಾತಳಿಯಿಂದ ಜಬ್ಬಲ್‌ಪುರದ ಎತ್ತರ ೪೧೩ ಮೀಟರಿನಷ್ಟು. ಹೀಗಾಗಿ ಬೇಸಿಗೆಯ ಧಗೆ ಇಲ್ಲಿಂದ ಬಲು ದೂರ. ಈ ನಗರಕ್ಕೆ ಭೋಪಾಲ, ಭರತಪುರ, ಗ್ವಾಲಿಯರ್, ಮಂಡಲಾ, ನಾಗಪುರ, ಝಾಂಸಿ ಮತ್ತು ವಾರಾಣಸಿಯಿಂದ ಬಸ್ಸಿನ ಮೂಲಕ ಬರಬಹುದು. ರೈಲು ಮಾರ್ಗವನ್ನು ಇಲ್ಲಿಂದ ದಿಲ್ಲಿಯ ತನಕ ಜೋಡಿಸಿದ್ದಾರೆ. ಅಲಹಾಬಾದಿನಿಂದ ಇಟಾರಸಿಗೆ ಹೋಗುವ ರೇಲ್ವೆ ಲೈನಿನ ಮೇಲೆ ಇದು ಅಲಹಾಬಾದಿನಿಂದ ೩೬೯ ಕಿಲೋ ಮೀಟರ್ ಅಂತರದಲ್ಲಿದೆ.

ಮಧ್ಯಪ್ರದೇಶದ ರಾಜಧಾನಿ ಭೋಪಾಲ. ಉದ್ಯೋಗ, ವ್ಯಾಪಾರದ ದೃಷ್ಟಿಯಿಂದ ಸುಪ್ರಸಿದ್ಧವಾದ ಇಂದೊರ ಪಟ್ಟಣದ ನಂತರ ಮೂರನೆಯದೇ ಈ ಪಟ್ಟಣ. ಈ ನಗರವನ್ನು ಕೆಲವರು ಬಾಲಿಪಟ್ಟಣವೆಂದು ಕರೆಯುತ್ತಾರೆ. ಮಹಾರಾಣಿ ಲಕ್ಷ್ಮೀಬಾಯಿಯ ಶೌರ್ಯದಿಂದ ಝಾಂಸಿ ಪಟ್ಟಣವು ಪ್ರಸಿದ್ಧಿಯನ್ನು ಪಡೆದ ಹಾಗೆಯೇ ಮಹಾರಾಣಿ ದುರ್ಗಾವತಿಯ ಶೌರ್ಯ ಮತ್ತು ಯಶಸ್ವೀ ಜೀವನದಿಂದ ಜಬ್ಬಲ್‌ಪುರ ಬೆಳಕಿಗೆ ಬಂದಿತು. ಮಹಾರಾಣಿ ದುರ್ಗಾವತಿಯನ್ನು ಕುರಿತು ಅನೇಕ ಕತೆಗಳಿವೆ. ನಗರದ ಕೇಂದ್ರ ಉದ್ಯಾನದಲ್ಲಿ ಮಹಾರಾಣಿ ದುರ್ಗಾವತಿ ಆನೆಯ ಮೇಲೆ ಸವಾರಿ ಮಾಡುವ ಭವ್ಯ ಮೂರ್ತಿಯಿದೆ. ಊರಲ್ಲಿ ರಾಣಿ ದುರ್ಗಾವತಿಗೆ



**ಅಮೃತಶಿಲೆಯಿಂದ ಕೂಡಿದ ಪರ್ವತದ ಸುಂದರ ದೃಶ್ಯ**

ಸಂಬಂಧಿಸಿದ ಸಂಗ್ರಹಾಲಯವೂ ಇದೆ.

ಜಬ್ಬಲ್‌ಪುರದಿಂದ ೨೧ ಕಿಲೋಮೀಟರ್ ದೂರದಲ್ಲಿ ಭೇಡಾ ಘಾಟ್ ಇದೆ. ಅವರ ಮಧ್ಯ ಭಾಗವಲ್ಲಿ ಹರಿಯುತ್ತಿರುವ ನರ್ಮದೆಯಿಂದಾಗಿ ಇದು ಪ್ರವಾಸಿ ಕೇಂದ್ರವಾಗಿದೆ. ನರ್ಮದೆಯ ಎರಡೂ ಕಡೆಗಳಲ್ಲಿ ಒಂದೂವರೆ ಕಿಲೋಮೀಟರಿನ ತನಕ ವಿವಿಧ ವರ್ಣಗಳ ಅಮೃತಶಿಲೆಗಳನ್ನು ಕಾಣಬಹುದು. ಬೀದರ ಕೂದನಿ ಎಂಬ ಸ್ಥಳದ ಮುಂದೆ ಪಂಚವಟಿಯಿದೆ. ಇದು ಭಾರತದ ಪ್ರಸಿದ್ಧ ತೀರ್ಥಗಳಲ್ಲಿ ಒಂದು.

ಪರ್ವತಗಳಲ್ಲಿ ಭೂಲಭುಲೈಯಾ ಎಂಬ ಸ್ಥಳ ವಿದ್ದು ಇಲ್ಲಿ ನರ್ಮದಾ ನದಿಯು ಯಾವ ದಾರಿ ಯಿಂದ ಹರಿಯುತ್ತದೆಂದು ಗೊತ್ತಾಗುವುದಿಲ್ಲ. ಇಲ್ಲಿಯೇ ಇನ್ನೊಂದು ಸ್ಥಳದಲ್ಲಿ ಶಿವಲಿಂಗವಿದ್ದು ಮಹಾರಾಣಿ ಅಹಲ್ಯಾಬಾಯಿಯ ಕಾಲದಲ್ಲಿ ಸ್ಥಾಪಿಸಲ್ಪಟ್ಟದೆ. ಕಪ್ಪುಕಲ್ಲಿನ ಕಾಲಭೈರವ ಮೂರ್ತಿ, ದತ್ತಾತ್ರೆಯ ಮುನಿಗಳ ಗುಹೆಗಳು ಇಲ್ಲಿವೆ. ಇಲ್ಲಿಯ ಬಿಳಿಯ ಪರ್ವತಗಳು ಅಪ್ರ-ತಿಮ ಸೌಂದರ್ಯದಿಂದ ಕೂಡಿದ ಕಾರಣ ಚಲಚಿತ್ರಗಳಲ್ಲಿ ಮುದ್ರಿತವಾಗಿವೆ.

ಒಂದೂವರೆ ಕಿಲೋಮೀಟರಿನಷ್ಟು ನದಿಯ ಮಾರ್ಗದಲ್ಲಿ ಎರಡೂ ಬದಿಯಲ್ಲಿ ಮೂವತ್ತು ಮೀಟರಿನ ತನಕ ಉದ್ದ ಅಮೃತಶಿಲೆಯ ಪರ್ವತ ವಿದೆ. ನೌಕಾವಿಹಾರವು ಇಲ್ಲಿ ಆನಂದವನ್ನು ನೀಡುತ್ತದೆ. ನೌಕಾವಿಹಾರವು ಸುಮಾರು ೪೫ ನಿಮಿಷಗಳ ತನಕ. ಬೆಳದಿಂಗಳ ರಾತ್ರಿಯಲ್ಲಿ ಹುಣ್ಣಿಮೆಯ ಶುಭ್ರ ರಾತ್ರಿಯಲ್ಲಿ ಈ ಶ್ವೇತ ಗಿರಿಯನ್ನು ನೋಡುವುದೇ ಒಂದು ಸೊಬಗು. ದೀಪಾವಳಿಯ ನಂತರ ಭೇಡಾ ಘಾಟಿನಲ್ಲಿ ಜರು ಗುವ ಜಾತ್ರೆಯಲ್ಲಿ ಬಹು ಜನರು ಕೂಡಿ ಮಧುರವಾದ ಕಂಠದಿಂದ ಲೋಕಗೀತೆಗಳನ್ನು ಹಾಡುತ್ತಾರೆ.

ಪಂಚವಟಿ ಘಟ್ಟದ ಪರ್ವತದ ಮೇಲೆ ಅರವ ತ್ನಾಲ್ಕು ಯೋಗಿನಿಯರ ಮಂದಿರವಿದೆ. ಅಲ್ಲದೆ ಅನೇಕ ಮೂರ್ತಿಗಳು ಹನ್ನೆರಡನೆಯ ಶತ ಮಾನದ ಕಲಚೂರಿ ಕಾಲದ ಸುಂದರ ಉದಾ ಹರಣೆಯಾಗಿವೆ. ಮಂದಿರದಲ್ಲಿ ಬರೆದಿಟ್ಟ ಶಿಲಾ ಲೇಖದ ಪ್ರಕಾರ ಸ್ಥಾಪನೆಯು ೧೧೫೬ರಲ್ಲಿ ಕಲಚೂರಿ ನರೇಶನಿಂದ ಆಯಿತು.

ಜಬ್ಬಲಪುರದಿಂದ ಶಾಹಾಪುರಕ್ಕೆ ಹೋಗು ವಾಗ ಮಾರ್ಗದಲ್ಲಿದ್ದ ನರ್ಮದಾ ನದಿಯ ಪರ್ವತಗಳ ಮಧ್ಯೆ ಹರಿಯುತ್ತದೆ. ತನ್ನ ಮೃದು ನಿನಾದದೊಂದಿಗೆ ಇಳಿದು ಬರುವ ಪ್ರಪಾತ ಸುಂದರವಾಗಿದೆ. ಪ್ರಪಾತಕ್ಕೆ ಇಳಿಯುವಾಗ ಉಂಟಾದ ಧ್ವನಿಯು ಒಂದೂವರೆ ಕಿಲೋ ಮೀಟರಿನ ತನಕ ಕೇಳುತ್ತದೆ.

ಜಬ್ಬಲ್‌ಪುರದ ಸಮೀಪ ಅನೇಕ ಪ್ರೇಕ್ಷ ಣೀಯ ಸ್ಥಳಗಳಿವೆ. ಜಬ್ಬಲ್‌ಪುರದಿಂದ ಸುಮಾರು ೬ ಕಿಲೋಮೀಟರ್ ದೂರದಲ್ಲಿ, ಅಂದರೆ ಜಬ್ಬಲ್‌ಪುರದಿಂದ ನಾಗಪುರಕ್ಕೆ ಹೋಗುವ ಮಾರ್ಗದಲ್ಲಿ ಪುರವಾ ಮತ್ತು ತೇವರದ (ಹಿಂದಿನ ಹೆಸರು ತ್ರಿಪುರಿ) ಮಧ್ಯ ದಲ್ಲಿ ೧೦೦ ಮೀಟರ್ ಎತ್ತರದ ಮಢಿಯಾ ಎಂಬ ಸಣ್ಣ ಪರ್ವತವಿದೆ. ಪರ್ವತದ ಮೇಲೆ ೧೨ ಜೈನ್ ಮಂದಿರಗಳಿವೆ. ಪರ್ವತವು ಅತ್ಯಂತ ಸುಂದರ ಮತ್ತು ಸ್ವಚ್ಛ. ಇದನ್ನೇರಲು ೨೬೫ ಮೆಟ್ಟಲುಗಳನ್ನು ಮಾಡಿರುತ್ತಾರೆ. ಪರ್ವತದ ಕೆಳಗೆ ಪ್ರವೇಶ ದ್ವಾರವಿದೆ.

ಬಹು ದೊಡ್ಡ ಮಂದಿರವು ಆದಿನಾಥ ತೀರ್ಥಂಕರನದಾಗಿದೆ. ಆದಿನಾಥನ ಪುತ್ರ ತಪಸ್ವಿ ಬಾಹುಬಲಿಯ ಅಮೃತಶಿಲೆ ಬಹು ಸುಂದರ ವಾಗಿದೆ. ಇಲ್ಲಿ ಗೆಸ್ಟ್‌ಹೌಸು ಮತ್ತು ಮೋಟರ್ ರೆಸ್ಟ ಹೌಸ್ ವಿಶ್ರಾಂತಿ ಗೃಹಗಳಿವೆ. ಜಬ್ಬಲ್ ಪುರದಿಂದ ಭೇಡಾ ಘಾಟಕ್ಕೆ ಟೆಂಪೋ ಹಾಗೂ ಟ್ಯಾಕ್ಸಿಯ ಸೌಕರ್ಯವಿದೆ. ಭಾರತೀಯ ಪರ್ಯ ಟನ ವಿಕಾಸ ನಿಗಮದವರು ವಾರದಲ್ಲಿ ಎರಡು ಬಾರಿ ಭೇಡಾ ಘಾಟಿಗೆ ಬಸ್ ಸೇವೆ ಆರಂಭಿ ಸಿದ್ದಾರೆ.

ಹೀಗೆ ಭೇಡಾ ಘಾಟ ಮತ್ತು ಜಬ್ಬಲ್ ಪುರದ ಅಮೃತಶಿಲೆಯ ಸೌಂದರ್ಯವನ್ನು ಕಣ್ಣಾರೆ ಕಂಡೇ ಸವಿಯಬೇಕು. 

ಇವರ ಮನೆಯೊಂದು
ಮ್ಯೂಜಿಯಂ



# ಮುದೇನೂರ ಸಂಗಣ್ಣ

ಅಪರಿಚಿತರು ಕಂಡರೆ ಇವನೊಬ್ಬ ರಿಟೈರ್ಡ್ ಸ್ಕೂಲ್ ಮಾಸ್ತರನಾಗಿರಬೇಕು ಅಂದುಕೊಂಡಾರು. ಹೊರನೋಟಕ್ಕೆ ಹೀಗೆ ಅನಾಕರ್ಷಕವಾಗಿ ಕಾಣುವ ಈ ವ್ಯಕ್ತಿಯ ಅಂತರಂಗದ ಸೌಜನ್ಯ ಶ್ರೀಮಂತಿಕೆಗೆ ಆಕರ್ಷಿತರಾಗಿರುವವರು ಅಸಂಖ್ಯಾತ ಜನ. ಡಾ. ಶಿವರಾಮ ಕಾರಂತರು ಆಗಾಗ ನಿರುದ್ದಿಶ್ಯವಾಗಿ ಇವರಲ್ಲಿಗೆ ಬಂದು ಹೋಗುವಷ್ಟು ಸ್ನೇಹ ತಂತು ಬೆಸೆದಿದೆ. ಕರ್ನಾಟಕದ ಬಹಳಷ್ಟು ಹಿರಿಯ ಕಿರಿಯ ಸಾಹಿತಿಗಳು, ಕಲಾವಿದರು, ಪತ್ರಕರ್ತರು, ಬುದ್ಧಿಜೀವಿಗಳು ಒಮ್ಮೆಲ್ಲೊಮ್ಮೆ ಇವರ ಅತಿಥಿಯಾಗಿ ಹೋಗಿದ್ದಾರೆ. ಸ್ನೇಹಿತರು, ಅತಿಥಿಗಳು ಇದ್ದುಬಿಟ್ಟರೆ ಸಾಕು, ಈ ವ್ಯಕ್ತಿ ಎಲ್ಲವನ್ನೂ ಮರೆಯುತ್ತಾರೆ. ರಸವತ್ತಾಗಿ ಹರಟೆ ಹೊಡೆಯುತ್ತಾರೆ. ೬೭ ವಯಸ್ಸಿನ (ಜನನ ೧೯೨೭), ಚಿಗಟೇರಿಯ ಮುದೇನೂರ ಸಂಗಣ್ಣನವರದು ಮುದ ತರುವ ವ್ಯಕ್ತಿತ್ವ.

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಒಳ ಮೂಲೆಯಲ್ಲಿರುವ ಚಿಗಟೇರಿಗೆ ನಿಯಮಿತ ಬಸ್ ಸೌಕರ್ಯವಿಲ್ಲ. ನಾಲ್ಕಾರು

**ಡಾ. ಬಸವರಾಜ ಮಲಶೆಟ್ಟಿ**

ಗಂಟೆ ಕಾಯುವ ಪ್ರಸಂಗ ಬಂದರೂ ಆಶ್ಚರ್ಯಪಡಬೇಕಿಲ್ಲ. ಒಮ್ಮೊಮ್ಮೆ ಚಿಟಗೇರಿಗೆ ಪತ್ರ ಮುಟ್ಟುವುದು ಒಂದು ವಾರಕ್ಕೆ. ತಂತಿ ತಲಪಲು ಮೂರೇ ದಿನ ಸಾಕು! ಫೋನ್ ಸಂಪರ್ಕ ದೊರೆಯುವುದರೊಳಗೆ ಅಲ್ಲಿಗೇ ಹೋಗಿ ಬರ

ಬಹುದು. ಇಂಥ ದೂರದ ಚಿಗಟೇರಿಯಲ್ಲಿರುವ ಸಂಗಣ್ಣನವರು ಕರ್ನಾಟಕದ ಸಾಹಿತಿ ಕಲಾವಿದ ಮಿತ್ರರಿಗೆ ತೀರ ಸಮೀಪದವರಾಗಿದ್ದಾರೆ. ಅವರ ಮನೆ ಸಾಹಿತ್ಯ, ಸಂಗೀತಗಳ ಒಂದು ವಿದ್ಯಾಪೀಠದಷ್ಟೇ ಅಲ್ಲ, ಒಂದು ಮ್ಯೂಜಿಯಂ ಎಂದೂ ಅನ್ನಬಹುದು. ಕನ್ನಡ, ಇಂಗ್ಲೀಷ್, ತೆಲುಗು, ಮರಾಠಿ, ಹಿಂದಿ, ಬಂಗಾಲಿ ಭಾಷೆಗಳ ಮಹತ್ವದ ಕೃತಿಗಳು ಮತ್ತು ನೂರಾರು ಗಂಟೆಗಳಷ್ಟು ಕೇಳಬಹುದಾದ ಟೇಪುಗಳು ಸಂಗಣ್ಣನವರ ಅಪಾರ ಆಸಕ್ತಿಯ ದ್ಯೋತಕವಾಗಿವೆ. ಹಿರಿ ಕಿರಿ ಸಾಹಿತಿಯ ಗಮನಾರ್ಹವಾದ ಯಾವುದೇ ಹೊಸ ಪುಸ್ತಕ ಪ್ರಕಟವಾದ ಅಲ್ಪಾವಧಿಯಲ್ಲಿ ಸಂಗಣ್ಣನವರ ಖಾಸಗೀ ಕೋಣೆಯ ಟೀಪಾಯ್ ಮೇಲಿರುತ್ತದೆ. ಹೊಸದಾಗಿ ಪ್ರಾರಂಭವಾಗುವ ಯಾವುದೇ ಪತ್ರಿಕೆ ಸಂಗಣ್ಣನವರನ್ನು ನೆನಪಿಸದೇ ಇರುವುದಿಲ್ಲ. ಅವರು ಅತಿಥಿ ಮಿತ್ರರಿಗೆ ತಿಂಡಿ-ಚಹಾದೊಂದಿಗೆ ಹೊಸ ಪತ್ರಿಕೆ, ಪುಸ್ತಕಗಳ ಬಗ್ಗೆ ಪರಿಚಯ-ವಿಮರ್ಶೆ-ಮೆಚ್ಚುಗೆ ಸ್ವಾರಸ್ಯಕರ ಮಾತುಗಳ ರುಚಿಯನ್ನೂ ಒದಗಿಸುವುದುಂಟು. ಬಂದವರ ಆಸಕ್ತಿಯನ್ನು ಗಮನಿಸಿ ತಾವು ಇತ್ತೀಚೆಗೆ ಓದಿದ್ದನ್ನು, ಚಿಂತಿಸಿದ್ದನ್ನು ನಿರರ್ಗಳವಾಗಿ ನಿರೂಪಿಸುತ್ತಾರೆ. ಮಾತಿನ ಮಧ್ಯೆ ಏನನ್ನೋ ನೆನಪಿಸಿಕೊಂಡು ಎದುರಿಗಿರುವ ರಾಶಿರಾಶಿ ಪತ್ರಿಕೆ ಪುಸ್ತಕಗಳನ್ನು ಕೆದಕಿ ಗಮನಾರ್ಹವಾದುದರತ್ತ ಲಕ್ಷ್ಯ ಸೆಳೆಯುತ್ತಾರೆ. ಇದೆಲ್ಲ ತಮ್ಮ ಓದಿನ ವ್ಯಾಪ್ತಿಯನ್ನು ತಿಳಿಸುವ ಅಹಂಕಾರದಿಂದಲ್ಲ, ಚಪಲದಿಂದಲ್ಲ. ಸಂಗಣ್ಣನವರದು ಪೋಜು ಕೊಡುವ ಸ್ವಭಾವವಲ್ಲ. ವಿನಮ್ರತೆಯಿಂದ ತಮ್ಮ ಓದಿನ ಉಜಳಣೆ ಮಾಡಿಕೊಳ್ಳುತ್ತ ಸ್ನೇಹಿತರಲ್ಲಿಯೂ ಓದುವ ಆಸಕ್ತಿ ಮೂಡಿಸುವ ಹಂಬಲ ಅವರದಾಗಿರುತ್ತದೆ. ಅವರದು ಒನ್‌ವೇ ಅಲ್ಲ. ಕೇಳುಗ ಸ್ನೇಹಿತರ ಪ್ರತಿಕ್ರಿಯೆ ಅಪೇಕ್ಷಿಸುತ್ತಾರೆ.

“ಆಚಾರ್ಯರು, ಕವಿಗಳು ತಮ್ಮ ಉದರನಿಮಿತ್ತಕ್ಕೆ, ಹೊನ್ನಿಗೆ ಬಲ್‌ಬಿರುದಿಗೆ, ಅಜರಾಮರ ಕೀರ್ತಿಗೆ ಸಾಹಿತ್ಯ ಸರಸ್ವತಿಯನ್ನು ಜೀತದಾಳಾಗಿ ದುಡಿಸಿಕೊಂಡಿದ್ದಾರೆ. ಆದರ ನಾಲಗೆಗಕ್ಷರ ಕಲಿಸುವ, ಗಂಟಲು ತೊಡರು ಬಿಡಿಸುವ ನಮ್ಮ ನುಡಿ ತಾಯಿಯನ್ನು ಜನಸಾಮಾನ್ಯರು ಎಂದೂ ತಮ್ಮ ತೊತ್ತೆಂದು ತಿಳಿದವರಲ್ಲ. ಸಾಹಿತ್ಯ ಅವರಿಗೆ ಬಾಳ ಸಂಗಾತಿ. ತಮ್ಮ ಬಗ್ಗೆಯೇ ವಿಶಿಷ್ಟ ಕಾಳಜಿ ತೆಗೆದುಕೊಂಡು ಸಾಹಿತ್ಯ ಸೃಷ್ಟಿಸುವುದಾಗಲಿ ಇತರರಿಗಿಂತ ತಾನೇ ಹೆಚ್ಚು ಕಾರ್ಪಣ್ಯಕ್ಕೊಳಗಾದವರಂತೆ ತಿರುಗುವುದಾಗಲಿ ಹಲವು ಶಿಷ್ಟ ನವ್ಯರ ಸ್ವಭಾವ. ಆದರೆ ನಮ್ಮ ಈ ಕುರಿತೋದದ ಮಂದಿ ಮಾತ್ರ ತಮ್ಮವರ ಸುಖ ದುಃಖಗಳನ್ನು ತಮ್ಮ ಸ್ವಾನುಭವದ ಅನುವಿನಲ್ಲಿ ಕಂಡುಕೊಂಡು ತಮ್ಮದೇ ಆದ ರೀತಿಯಲ್ಲಿ ಕಥೆ ಕಾವ್ಯ ನಾಟಕಗಳ ಮೂಲಕ ತೋಡಿಕೊಂಡಿದ್ದಾರೆ.”

*

“ಇದು ಜನತಾ ಯುಗ. ಬರಹಗಾರ ಯಾರಿಗೆ ಬರೆಯುತ್ತಿದ್ದಾನೋ ಅವರಿಗೆ ಕೃತಿ ನೇರವಾಗಿ ಅರ್ಥವಾಗದಿದ್ದರೆ ವಾಚಕರ ಸಂಖ್ಯೆ ಹೆಚ್ಚಾಗಲಾರದು. ಯಾವ ವಿಧಾಯಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರದೆ ಬರಿ ಪ್ರತಿನಿಂದೆಯ ಮಾತಿನಲ್ಲಿ ಜಗದೋದ್ಧಾರವಾಗುವುದು ಎನ್ನುವುದು ವಂಚನೆಯ ಕೆಲಸವೇ. ಸಾಮಾಜಿಕ ಗತಿಶೀಲತೆಗೆ ತಕ್ಕಂತೆ ಪ್ರತಿಕ್ರಿಯಿಸಿ ಬರೆದ ನವ್ಯ ಲೇಖಕ ಬಳಗದಿಂದ ಉತ್ತಮ ಕೃತಿಗಳನ್ನು ನಿರೀಕ್ಷಿಸಬಹುದು. ಸಾಹಿತ್ಯ ಕಲೆಗಳು ಕೇವಲ ಉತ್ಸವಗಳಲ್ಲಿ ಮಾತ್ರ ಬೆಳೆಯಲಾರವು. ಸಾಹಿತ್ಯದ ಚಳುವಳಿ ಜನತೆಯ ದೈನಂದಿನ ನೂಕುನುಗ್ಗಲಿನಲ್ಲಿ ಬೆಳೆಯಬಲ್ಲುದು.”

**–ಮುದೇನೂರ ಸಂಗಣ್ಣ**

(ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪೀಠದಿಂದ ಮಾಡಿದ ಭಾಷಣದಿಂದ)

ಆ ಮೂಲಕ ತಮ್ಮ ವಿಚಾರ ನಿಲುವುಗಳನ್ನು ತಾಳಿ ನೋಡುತ್ತಾರೆ, ತೂಗಿ ನೋಡುತ್ತಾರೆ. ನಿರ್ಮಲ ಮನಸ್ಸಿನಿಂದ ಒಳ್ಳೆಯದನ್ನು ಹೀರಿಕೊಂಡು ಸಂತೃಪ್ತರಾಗುತ್ತಾರೆ. ಚರ್ಚೆಗಾಗಿ ಚರ್ಚೆಯನ್ನು ಅವರೆಂದೂ ಒಪ್ಪುವುದಿಲ್ಲ. ಅವರಿಗೆ ಬೇಕಾದುದು ಸಹೃದಯರೊಂದಿಗೆ ಅನುಸಂಧಾನ. ಸ್ನೇಹಿತರು ತಾಸೆರಡು ತಾಸು ಇದ್ದು ಹೋದರೆ ಸಂಗಣ್ಣನವರಿಗೆ ಸಮಾಧಾನವಿಲ್ಲ. ದಿನಗಟ್ಟಲೆ ಇದ್ದು ಹೋಗಬೇಕೆಂಬುದು ಅವರ ಪ್ರೀತಿಯ ಸುಗ್ರೀವಾಜ್ಞೆ. ಆಗ ಓದಿದ್ದ, ಓದಬೇಕಾದ ಪುಸ್ತಕಗಳ ಬಗ್ಗೆ, ನೋಡಿದ, ನೋಡಬೇಕಾದ ನಾಟಕಗಳ ಬಗ್ಗೆ, ವಿವಿಧ ಜನಪದ ಕಲಾ ಪ್ರಕಾರಗಳ ಬಗ್ಗೆ, ಸಾಂಸ್ಕೃತಿಕ ರಾಜಕೀಯ ಸಾಮಾಜಿಕ ಸಂಗತಿಗಳ ಬಗ್ಗೆ ನಿರಂತರ ಮಾತುಕತೆ ಹರಟೆ ನಡೆಯುತ್ತದೆ. ನಡುನಡುವೆ ಶಾಸ್ತ್ರೀಯ-ಜಾನಪದ ಸಂಗೀತದ ಸವಿಧ್ವನಿಯ ರುಚಿ ಬೇರೆ.

ಸಂಗಣ್ಣನವರದು ಶ್ರೀಮಂತ ಜಮೀನುದಾರರ ಮನೆತನ- ಆಸ್ತಿ ಪಾಸ್ತಿ ಮತ್ತು ಸಜ್ಜನಿಕೆ ಎರಡರಲ್ಲಿಯೂ. ಅವರ ತಂದೆ ಕೊಟ್ರಬಸಪ್ಪ ಆ ಭಾಗದ ದಣಿ ಆಗಿ ಗೌರವದಿಂದ ಬಾಳಿದವರು. ಅಂದಿನ ಕಾಲಕ್ಕೆ ಡಿಸ್ಟ್ರಿಕ್ಟ್ ಬೋರ್ಡ್ ಮೆಂಬರ್ ಆಗಿ ತಾಲೂಕಿನ ಅಭಿವೃದ್ಧಿಗಾಗಿ ಬಹಳಷ್ಟು ಶ್ರಮಿಸಿದರು. ಕಟ್ಟಾ ರಾಷ್ಟ್ರೀಯವಾದಿ. ಜನಾನುರಾಗಿ, ಉದಾರಿಯಾಗಿದ್ದ ಅವರ ಮನೆಯೆಂದರೆ ಒಂದು ಸಾರ್ವಜನಿಕ ಛತ್ರ. ಬರುಹೋಗುವ ಅತಿಥಿಗಳಿಗೆ ಲೆಕ್ಕವೇ ಇಲ್ಲ. ಊರಿಗೆ ಬಂದ ಹೊರಗಿನವರೆಲ್ಲ-ಅವರು ಉನ್ನತ ಅಧಿಕಾರಿಯೇ ಆಗಿರಲಿ, ಸಾಮಾನ್ಯ ವ್ಯಕ್ತಿಯೇ ಆಗಿರಲಿ-ಈ ಮನೆಯ ಅತಿಥಿಗಳೆಂಬುದು ಚಿರ ಪರಿಚಿತ ಸಂಗತಿ. ಪಂಚಮಿ ಹಬ್ಬಕ್ಕೆ ಒಂದು ಕ್ವಿಂಟಲ್ ಬೆಲ್ಲದ ಉಂಡೆ ಮಾಡುತ್ತಿದ್ದ ಘನ ಮನೆತನ ಅದು. ತಂದೆಯ ಈ ಗುಣಗಳಿಗೆ ಸಂಗಣ್ಣನವರು ನಿಜವಾದ ಉತ್ತರಾಧಿಕಾರಿಯಾಗಿದ್ದಾರೆ.

ಪ್ರಾಥಮಿಕ ಶಿಕ್ಷಣವನ್ನು ಚಿಗಟೇರಿಯಲ್ಲಿ ಮುಗಿಸಿದ ಸಂಗಣ್ಣನವರಿಗೆ ಎಂಟು ವರ್ಷದ ಹುಡುಗನಾಗಿದ್ದಾಗಲೇ ಪದ್ಯ ಬರೆಯುವ ಚಟ ಸುರು ಆಯಿತು. ಮುಂದೆ ಬಳ್ಳಾರಿ ಜಿಲ್ಲೆಯ ಅತ್ಯಂತ ಹಳೆಯ ಪ್ರತಿಷ್ಠಿತ ಹೈಸ್ಕೂಲುಗಳಲ್ಲೊಂದಾದ ಹರಪನಹಳ್ಳಿ ಸರಕಾರಿ ಹೈಸ್ಕೂಲಿನಲ್ಲಿ ಓದುವಾಗ ಅವರ ವ್ಯಕ್ತಿತ್ವ ವಿವಿಧ ಮುಖವಾಗಿ ಬೆಳೆಯಿತು. ಅಂದಿನ ಅವರ ವಿಪರೀತ ಓದಿನ ಹುಚ್ಚು ಹವ್ಯಾಸದ ಬಗ್ಗೆ ಅನೇಕ ದಂತ ಕತೆಗಳೇ ಹುಟ್ಟಿಕೊಂಡಿವೆ. ಹೈಸ್ಕೂಲಿಗೆ ಭೆಟ್ಟಿಯಿತ್ತ ಮಾಸ್ತಿ, ಬೇಂದ್ರೆ ಮುಂತಾದ ಧೀಮಂತ ಸಾಹಿತಿಗಳ ಮುಂದೆ ಕವನ ಬರೆದು ಓದಿ ಅವರಿಂದ ಭೇಷ್ ಅನ್ನಿಸಿಕೊಂಡದ್ದು ಸಂಗಣ್ಣನವರ ಬದುಕಿನ ಸ್ಮರಣೀಯ ಅನುಭವಗಳು. ಅದೇ ಕಾಲಕ್ಕೆ ಚಿಗಟೇರಿಯಲ್ಲಿ ತರುಣ ವಿದ್ಯಾರ್ಥಿಗಳು ಒಂದು ಗ್ರಂಥಾಲಯ ಸ್ಥಾಪಿಸಿದರಂತೆ. ಇನ್ನೂ ಹೈಸ್ಕೂಲಲ್ಲಿ ಓದುತ್ತಿದ್ದ ಸಂಗಣ್ಣನವರು ಅದಕ್ಕೆ ತಮ್ಮ ಸಂಗ್ರಹದಲ್ಲಿನ ಒಂದು ಸಾವಿರ ಪುಸ್ತಕಗಳನ್ನು ದಾನ ನೀಡಿದ್ದು ಊರವರಿಗೆ ಅಚ್ಚರಿಯ ಸಂಗತಿಯಾಯಿತಂತೆ.

ಮದನಪಲ್ಲಿಯಲ್ಲಿ ಕಾಲೇಜ್ ವಿದ್ಯಾಭ್ಯಾಸ. ಪಠ್ಯಕ್ಕಿಂತ ಪಠ್ಯೇತರ ಓದಿನಲ್ಲಿಯೇ ನಿರತ. ದೇಶದಲ್ಲಿ ಆದರ್ಶದ, ಹುಮ್ಮಸ್ಸಿನ ಗಾಳಿ ಬೀಸುತ್ತಿದ್ದ ಕಾಲ. ಆದರ್ಶದ ಕನಸುಗಳನ್ನು ಕಣ್ಣುಗಳಲ್ಲಿ ತುಂಬಿಕೊಂಡ ಸಂಗಣ್ಣನವರು ಅರವಿಂದರಿಂದ ಪ್ರಭಾವಿತರಾಗಿ ಆಜನ್ಮ ಬ್ರಹ್ಮಚಾರಿಯಾಗಿರಲು ನಿರ್ಧರಿಸಿದ್ದು ಮನೆಯವರ ಚಿಂತೆಗೆ ಕಾರಣವಾಯಿತು. ಅವರಿವರು ಬುದ್ಧಿ ಹೇಳಿ ಮದುವೆಗೆ ಒಪ್ಪಿಸಬೇಕಾದರೆ ಸಾಕುಬೇಕಾಯಿತು. ಕೊಟ್ರಬಸಪ್ಪನವರು ಸಂಗಣ್ಣನವರನ್ನು ಇಂಟರ್‌ಮೀಡಿಯೆಟ್ ಮುಗಿದ ಕೂಡಲೇ ಕಾಲೇಜು ಬಿಡಿಸಿ ಮನೆತನದ ಜವಾಬ್ದಾರಿಯ ನೊಗ ಹೊರಿಸಿದರು. ಡಿಗ್ರಿ ಪಡೆಯದೆ ಮನೆಗೆ ಮರಳಿದ ಮಗ ವಿವಿಧ ಭಾಷೆಗಳ ಜ್ಞಾನಸಂಪತ್ತನ್ನು ಸಂಗಡ ತಂದಿದ್ದ. ಸಂಗಣ್ಣನವರು ಆ ಜ್ಞಾನ ಸಂಪತ್ತನ್ನು ಉಳಿಸಿ, ಬೆಳೆಸಿ ಕಾಪಾಡಿಕೊಳ್ಳಲು ನಿಷ್ಠೆಯಿಂದ ಪ್ರಯತ್ನಿಸುತ್ತಲೆ ಬಂದಿದ್ದಾರೆ.

೧೯೪೭ರಲ್ಲಿ ಹರಪನಹಳ್ಳಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ತರುಣ ಸಂಗಣ್ಣನವರು ಉತ್ಸಾಹಿ ಕಾರ್ಯಕರ್ತರಾಗಿ ದುಡಿದರು. ಆ ಸಂದರ್ಭದಲ್ಲಿ ಹಿರಿಯ ಸಾಹಿತಿಗಳೊಂದಿಗೆ ಪತ್ರವ್ಯವಹಾರ–ಸಂಪರ್ಕವನ್ನಿಟ್ಟ ಸಂಗಣ್ಣನವರು ಆ ಹಿರಿಯರ ಸಣ್ಣತನಗಳನ್ನು ಸಾರಸ್ಯವಾಗಿ ಆತ್ಮೀಯರಲ್ಲಿ ಮಾತ್ರ ನಿರೂಪಿಸುತ್ತಾರೆ. ಅವರ ಹಿಂದೆ ಯಾವದೇ ಚಾರಿತ್ರ್ಯವಧೆ ಮಾಡಬೇಕೆಂಬ ಕುಹಕವಿರುವುದಿಲ್ಲ. ಬದಲಾಗಿ ಮಾನವ ಸ್ವಭಾವದ ದ್ವಂದ್ವಗಳ ಬಗ್ಗೆ ಅನುಕಂಪ ಇರುತ್ತದೆ.

ಸಂಗಣ್ಣನವರ ರೈತ ಮನೆತನ ೧೯೫೨ರಲ್ಲಿ ತಂಬಾಕಿನ ದಲ್ಲಾಲಿ ಅಂಗಡಿಯನ್ನು ಪ್ರಾರಂಭಿಸಿತು. ಅದರಿಂದಾಗಿ ಆರ್ಥಿಕ ಲಾಭ ಲೆಕ್ಕಕ್ಕಿಲ್ಲದ್ದು. ವ್ಯಾಪಾರೇತರ ಲಾಭಗಳು ಹಲವು. ಪ್ರತಿ ವರ್ಷದ ದೀಪಾವಳಿಯ ಈ ಅಂಗಡಿಯ ಪೂಜೆ ಒಂದು ಸಾಂಸ್ಕೃತಿಕ ಸಮ್ಮೇಲನವಾಗಿ ಬೆಳೆದು ಚಿಗಟೇರಿಯಲ್ಲಿ ಸಾಂಸ್ಕೃತಿಕ ವಾತಾವರಣ ಮೂಡಿಸಲು ಬಹಳಷ್ಟು ಕಾರಣವಾಯಿತು. ಅಂದಿನ ರಾತ್ರಿಯ ಶಾಸ್ತ್ರೀಯ–ಜಾನಪದ ಗಾಯಕರ ರಂಜನೀಯ ಸಂಗೀತ ಕಾರ್ಯಕ್ರಮ ಚಿಗಟೇರಿಯ ಸಹೃದಯರಿಗೆ ಸ್ಮರಣೀಯ ಅನುಭವ. ಇದೇ ಊರಿನ ಶ್ರೀ ಕೊಟ್ರಯ್ಯ ಗವಾಯಿಗಳವರು ಗದುಗಿನ ಶ್ರೀ ಪಂಚಾಕ್ಷರಿ ಗವಾಯಿಗಳವರ ಆಶ್ರಮದಲ್ಲಿ ಸಂಗೀತಾಭ್ಯಾಸ ಮುಗಿಸಿ ಊರಿಗೆ ಬಂದಾಗ ಅವರು ಅಪರಿಚಿತರಾಗಿಯೇ ಉಳಿಯಬೇಕಾಯಿತು. ಸಂಗಣ್ಣನವರು ಪುನಃ ಪುನಃ ಅವರ ಕಚೇರಿ ಏರ್ಪಡಿಸಿ ಜನರಿಗೆ ಸಂಗೀತದ ಗುಂಗು ಹಿಡಿಸಿದರು. ಮೊನ್ನೆ ಮೇ ತಿಂಗಳಲ್ಲಿ ತಮ್ಮ ಏಕಮಾತ್ರ ಪುತ್ರನ ಮದುವೆಯನ್ನು ಕೂಡ ಒಂದು ಚಿಕ್ಕ ಸಾಹಿತ್ಯ ಮೇಳದಂತೆಯೇ ನೆರವೇರಿಸಿದರು. ತಾವು ಸ್ವತಃ ಹಿಂದೂಸ್ತಾನಿ ಸಂಗೀತದ ಬಗ್ಗೆ ಅನುಭವ ಗಳಿಸಿಕೊಂಡರು. ತಂಬಾಕು ವ್ಯಾಪಾರದ ಮೂಲಕ ನಿಪ್ಪಾಣಿಯ ಸಂಪರ್ಕ ಹೆಚ್ಚಾದ ಮೇಲೆ ಅಲ್ಲಿ ಕೆಲವು ರಸಿಕ ಬುದ್ಧಿಜೀವಿ ಸ್ನೇಹಿತರನ್ನು ಗಳಿಸಿಕೊಂಡರು. ತನ್ಮೂಲಕ ಮರಾಠಿ ಸಾಹಿತ್ಯ ಸಂಗೀತಗಳ ಬಗ್ಗೆಯೂ ಸಾಕಷ್ಟು ಜ್ಞಾನ ಪಡೆದರು.




ಸಂಗಣ್ಣನವರಿಗೆ ಓದುವ ಹುಚ್ಚು ಇದ್ದಷ್ಟು ಬರೆಯುವ ರೂಢಿ ಇಲ್ಲ. ಇದೊಂದು ಅವರ ದೌರ್ಬಲ್ಯವೆಂದೇ ಹೇಳಬೇಕು. ತಮ್ಮ ತಾರುಣ್ಯದಲ್ಲಿ ಜಯಂತಿ, ಸ್ವತಂತ್ರ ಮುಂತಾದ ಪತ್ರಿಕೆಗಳ ಕಾಯಂ ಲೇಖಕರಾಗಿ ಕಥೆ, ಕವನ, ಲೇಖನಗಳನ್ನು ವಿಪುಲವಾಗಿ ಸೃಷ್ಟಿಸಿದರು. 'ಚೌತಿ ಚಂದ್ರ' ಎಂಬುದು ಸಂಗಣ್ಣನವರ ಪ್ರಗತಿಪರ ಧೋರಣೆಯ ನಾಟಕ. 'ಭಾರತದ ಪ್ರೇಮ ಕಥೆಗಳು' ಮತ್ತು 'ರವೀಂದ್ರರ ಕಥನ ಕವನಗಳು' ಇವು ಅವರ ಬಂಗಾಲಿ ಅನುವಾದಗಳು. ಊರಿನ ಯಾವುದೇ ನಾಟಕ ತಂಡ ಸಂದರ್ಭೋಚಿತ ಹಾಡುಗಳನ್ನು ಸಂಗಣ್ಣನವರಿಂದ ಬರೆಸಿಕೊಳ್ಳುವುದು ಸಾಮಾನ್ಯ. ಏಕೋ ಏನೋ ಅವರ ಬರ

ವಣಿಗೆ ಒಮ್ಮೆಲೇ ನಿಂತುಬಿಟ್ಟಿತು. ತಮ್ಮ ಓದಿನ ಆಳ ಅಗಲಗಳು ಹೆಚ್ಚಾದಂತೆಲ್ಲ 'ನಾನೆಷ್ಟರವ, ನನ್ನ ಸಾಹಿತ್ಯ ಎಂಥದು' ಎಂಬ ನಮ್ರತೆಯ ಜಡತೆ ಅವರಲ್ಲಿ ಮೂಡಿದಂತಿದೆ. ಬೆಟ್ಟದಷ್ಟು ಓದಿ ತಿಳಿದುಕೊಂಡದ್ದನ್ನು ಸಭೆ ಸಮಾರಂಭಗಳಲ್ಲಿ ಭರ್ಜರಿ ಭಾಷಣಗಳ ಮೂಲಕ ತೋರಿಸಿಕೊಳ್ಳುವ ಹಂಬಲ ಅವರಲ್ಲಿಲ್ಲ. ಅದಕ್ಕಾಗಿಯೇ ಅವರು ಸಭೆ ಸಮಾರಂಭಗಳ ಆಮಂತ್ರಣವನ್ನು ಒಪ್ಪಿಕೊಳ್ಳುವುದೂ ಇಲ್ಲ. ಸಂಗಣ್ಣನವರ ಈ ವಿನಯಪೂರ್ವಕ ನಿರಾಕರಣೆಯನ್ನು ಕೆಲವು 'ಪಂಡಿತರು' ಏನೂ ಅರಿಯದ 'ಪೆದ್ದು' ಎಂದು ತಿಳಿದುಕೊಂಡದ್ದೂ ಉಂಟು.

ಗ್ರಾಮೀಣ ಬದುಕಿನೊಂದಿಗೆ ಬೆಸೆದುಕೊಂಡಿರುವ ಸಂಗಣ್ಣನವರ ಜಾನಪದ ಪ್ರಜ್ಞೆ ಅಗಾಧವಾದುದು. ದಿನಗಟ್ಟಲೆ ಕೇಳಬಹುದಾದಷ್ಟು ವೈವಿಧ್ಯಮಯ ಜಾನಪದ ಹಾಡುಗಳನ್ನು ಟೇಪ್ ಮಾಡಿಟ್ಟುಕೊಂಡಿದ್ದಾರೆ. ಅವುಗಳ ಬಗ್ಗೆ ಬಹಳಷ್ಟು ಚಿಂತನ ನಡೆಸಿದುದರ ಪರಿಣಾಮವಾಗಿ ಸ್ವಾರಸ್ಯವಾಗಿ ವ್ಯಾಖ್ಯಾನಿಸುತ್ತಾರೆ. 'ನವಲುಕುಣದಾವ' ಮತ್ತು 'ಲಕ್ಷಾಪತಿ ರಾಜನ ಕಥೆ' ಇವೆರಡು ಅವರ ಸಂಗ್ರಹಗಳ ಒಂದೊಂದು ಬೊಗಸೆಗಳು ಮಾತ್ರ. ಇತ್ತೀಚೆಗೆ ವಿಶಿಷ್ಟ ಪ್ರಾದೇಶಿಕ ಶಬ್ದಗಳನ್ನು ಸಂಗ್ರಹಿಸುವ ಹುಚ್ಚು ಹಚ್ಚಿಕೊಂಡಿದ್ದಾರೆ. ತಮ್ಮ ಊರಿನ ಮತ್ತು ಅಕ್ಕಪಕ್ಕದ ಹಳ್ಳಿಗಳಲ್ಲಿ ಅವರು ಸಂಗ್ರಹಿಸಿರುವ ವಿವಿಧ ಜಾತಿ, ವೃತ್ತಿ, ಆಚರಣೆಗಳಿಗೆ ಸಂಬಂಧಿಸಿದ ಸಾವಿರಾರು ಶಬ್ದಗಳ ರಾಶಿ ದಂಗು ಬಡಿಸುವಂಥದು. ಅದು ವ್ಯವಸ್ಥಿತ ರೀತಿಯಲ್ಲಿ ಪ್ರಕಟಗೊಂಡರೆ ಖಂಡಿತವಾಗಿಯೂ ಕನ್ನಡ ಶಬ್ದ ಭಂಡಾರಕ್ಕೆ ಒಂದು ಅಪೂರ್ವ ಕೊಡುಗೆಯಾಗುವುದರಲ್ಲಿ ಸಂಶಯವಿಲ್ಲ. ಲೋಹಿಯಾ ಪ್ರೇಮಿ ಸಂಗಣ್ಣನವರು ರಾಜಕೀಯದಲ್ಲಿ ಎಡ ಪಂಥೀಯ ಒಲವು ಉಳ್ಳವರು. ೧೯೬೨ರಲ್ಲಿ ಪಿ. ಎಸ್. ಪಿ. ಅಭ್ಯರ್ಥಿಯಾಗಿ ವಿಧಾನಸಭಾ ಚುನಾವಣೆಗೆ ನಿಂತು ಸೋತರು. ಅದೇ ವರ್ಷ ತಾಲೂಕು ಬೋರ್ಡಿಗೆ ಆರಿಸಿ ಬಂದು ಸಾಕಷ್ಟು ಜನೋಪಯೋಗಿ ಕಾರ್ಯಗಳನ್ನು ಮಾಡಿದರು. ಬಿಗಟೇರಿಯ ಅಭಿವೃದ್ಧಿಯ ಹಿಂದೆ ಸಂಗಣ್ಣನವರ ಕ್ರಿಯಾಶೀಲತೆ, ಪ್ರಾಮಾಣಿಕ ಪ್ರಯತ್ನಗಳಿರುವುದನ್ನು ಮರೆಯುವಂತಿಲ್ಲ. ಅವರು ೧೯೫೭ರಲ್ಲಿ ಪಂಚಾಯತಿ ಚೇರ್ಮನ್ ಆಗಿದ್ದ ಅವಧಿಯಲ್ಲಿ ಊರು ಬಹಳಷ್ಟು ಹೊಸತನ ಕಂಡಿತು. ಕರ್ನಾಟಕ ಏಕೀಕರಣದ (ಅಕರಾನಿ) ಹೋರಾಟದ ಸಂದರ್ಭದಲ್ಲಿ ಚಳವಳಿ ಮಾಡಿ ಒಂದು ತಿಂಗಳು ಜೈಲು ಕಂಡು ಬಂದಿದ್ದಾರೆ. ಇಂದು ಸಂಗಣ್ಣನವರು ಪ್ರತ್ಯಕ್ಷವಾಗಿ ತಮ್ಮನ್ನು ಯಾವುದೇ ಸಂಘಟನೆ ಪಕ್ಷಗಳಿಗೆ ಅಂಟಿಸಿಕೊಂಡಿಲ್ಲ. ಎಂಥದೇ ಪ್ರಗತಿಪರ ಹೋರಾಟವಿರಲಿ. ಅದನ್ನು ಮನಸಾರೆ ಬೆಂಬಲಿಸುತ್ತಾರೆ. ಅದಕ್ಕೆ ಮನಸೋಕ್ತ ಸಹಾಯ ಮಾಡುತ್ತಾರೆ. ಅವರ ಅನೇಕ ಜನ ಆತ್ಮೀಯ ಸ್ನೇಹಿತರು ರಾಜಕೀಯದಲ್ಲಿ ಉನ್ನತ ಸ್ಥಾನದಲ್ಲಿದ್ದಾರೆ. ಆದರೆ ಸಂಗಣ್ಣನವರು ತನಗಾಗಿ ಯಾರಲ್ಲಿಯೂ ಏನನ್ನೂ ಬೇಡಿದವರಲ್ಲ.

ಆಗರ್ಭ ಶ್ರೀಮಂತರಾಗಿದ್ದರೂ ಮಕ್ಕಳಿಗೆ ಸರಳ ಜೀವನ ದೀಕ್ಷೆ. ಆಡಬರಕ್ಕೆ ಮುಜುಗರ ಪಟ್ಟುಕೊಳ್ಳುವ, ಹೊಗಳಿದರೆ ಸಿಡಿಮಿಡಿಗೊಳ್ಳುವ, ಸಂಕೋಚ ಸ್ವಭಾವದ, ಸ್ನೇಹಿತ–ಪುಸ್ತಕ ಪ್ರೇಮಿ, ಅಂತರ್ಮುಖಿ ಸಂಗಣ್ಣನವರ ಒಡನಾಟ ಮನಸ್ಸಿಗೆ ಮುದ ನೀಡುವಂಥದು, ಆಲೋಚನೆಗೆ ಪ್ರೇರೇಪಿಸುವಂಥದು, ಮತ್ತೆ ಮತ್ತೆ ಭೆಟ್ಟಿಯಾಗಬೇಕೆಂಬ ಆಸೆ ಚಿಗುರಿಸುವಂಥದು.

(ಸಂಗಣ್ಣನವರ ಫೋಟೋವನ್ನು ಉಡುಪಿಯ ಶ್ರೀ ಹರ್ಷವರ್ಧನ ಭಟ್ಟರು ಒದಗಿಸಿದಾರೆ.)

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಅಂತರಾಯ**
(ಅ) ಅಡ್ಡಿ (ಆ) ಒಳಗುಟ್ಟು (ಇ) ತಿರುಳು (ಈ) ಅಭಿಪ್ರಾಯ

೨. **ಅಂತಿಮ**
(ಅ) ಬೆಳಗಿನ (ಆ) ಕೊನೆಯ (ಇ) ಪ್ರಥಮ (ಈ) ಶುಭ

೩. **ಪ್ರಭೇದ**
(ಅ) ಬೆಳಕು (ಆ) ಮುಂಜಾನೆ (ಇ) ಒಳ ವಿಭಾಗ (ಈ) ಸಿದ್ಧವಾಗದ್ದು

೪. **ಪ್ರಬುದ್ಧ**
(ಅ) ಬುದ್ಧನ ಅವತಾರ (ಆ) ತುಂಬಾ (ಇ) ಹುಟ್ಟುವಿಕೆ (ಈ) ಎಚ್ಚೆತ್ತವ

೫. **ಪಟ್ಟಾಂಗ**
(ಅ) ನವಿರಾದ ಬಟ್ಟೆ (ಆ) ಪಟ್ಟ ಕಟ್ಟುವ ವಿಧಾನ (ಇ) ಹರಟೆ ಮಾತು (ಈ) ಒಳ ಉಡುಗೆ

೬. **ಪಡಕು**
(ಅ) ಕೊಳಕು (ಆ) ದೋಣಿ (ಇ) ಹೆಂಡ (ಈ) ಬಾಗಿಲಿನ ರೆಕ್ಕೆ

೭. **ತಕ್ಸೀರು**
(ಅ) ಅಪರಾಧ (ಆ) ಸರ್ಪದ ಹೆಡೆ (ಇ) ಬೇಗಬೇಗ (ಈ) ಪಟ್ಟಿ

೮. **ತಾಪಸ**
(ಅ) ಪತ್ತೇದಾರ (ಆ) ತಪಸ್ಸುಮಾಡು-ವವ (ಇ) ಕಮಲ (ಈ) ದುಷ್ಟ

೯. **ದಫನ**
(ಅ) ಸುಡುವುದು (ಆ) ಹೂಳುವುದು (ಇ) ಬೀಳುವಿಕೆ (ಈ) ಅಹಂಕಾರ

೧೦. **ಪಾಯಕ**
(ಅ) ಕಾಲಾಳು (ಆ) ಸಂಬಂಧಿಕ (ಇ) ಮಗು (ಈ) ಕುಡಿಯುವ ವಸ್ತು

೧೧. **ಚಾರ**
(ಅ) ನಾಲ್ಕನೇ (ಆ) ಕಳ್ಳ (ಇ) ಲಂಪಟ (ಈ) ಗುಟ್ಟಿನಲ್ಲಿ ಸುದ್ದಿ ಹೇಳುವವ

೧೨. **ಇಂಚರ**
(ಅ) ಅಂಗುಲ (ಆ) ದೇವತೆಗಳ ಅರಸು (ಇ) ಮಧುರ ಧ್ವನಿ (ಈ) ಜಿಗಳೆ



337-7

# 'ಶಬ್ದ ಭಂಡಾರ'ದ ಸರಿಯಾದ ಅರ್ಥಗಳು

೧. **ಅಂತರಾಯ** (ಅ) ತಡೆ, ತೊಡಕು, ಅಡ್ಡಿ. ಉದಾ:- ಅಂತರಾಯವಿಲ್ಲದೆ ಕಾರ್ಯ ಸಿದ್ಧಿಯಾಯಿತು. [ಸಂ.]

೨. **ಅಂತಿಮ** (ಅ) ಕೊನೆಯ, ಕಡೆಯ. ಉದಾ:- ಅಂತಿಮ ಪರಿಣಾಮ. [ಸಂ. ಅಂತ = ಕೊನೆ – ಯಿಂದ]

೩. **ಪ್ರಭೇದ** (ಇ) ಒಳ ವಿಭಾಗ; ವ್ಯತ್ಯಾಸ; ಪ್ರಕಾರ ರೀತಿ. ಉದಾ:- ಪಾಶುಪತವೆಂಬುದು ಶೈವಧರ್ಮದ ಒಂದು ಪ್ರಭೇದ. [ಸಂ. ಪ್ರ = ಮುಖ್ಯ + ಭೇದ]

೪. **ಪ್ರಬುದ್ಧ** (ಈ) ಎಚ್ಚರಗೊಂಡ, ಅರಿವು ಬಂದ; (ಆದ್ದರಿಂದ) ಜ್ಞಾನವುಳ್ಳ, ಪ್ರೌಢ. ಉದಾ:- ಪ್ರಬುದ್ಧ ವಯಸ್ಸು. [ಸಂ. ಪ್ರ = ಮುಂದಾಗಿ + ಬುಧ್ = ತಿಳಿ]

೫. **ಪಟ್ಟಾಂಗ** (ಇ) ಕೆಲಸಕ್ಕೆ ಬಾರದ ಹರಟೆ, ವ್ಯರ್ಥವಾದ ದೀರ್ಘ ಮಾತು. ಉದಾ:- ದಿನವಿಡೀ ಪಟ್ಟಾಂಗದಲ್ಲಿ ಕಳೆದೆ. [ಹಿಂದಿ – ಊಟ್ – ಪಟಾಂಗ್]

೬. **ಪಡಕು** (ಈ) ಕಿಡಿಕಿ ಅಥವಾ ಬಾಗಿಲಿನ ರೆಕ್ಕೆ, ಕದ, ಬಾಗಿಲಪಡಿ. ಉದಾ:- ಒಂದೇ ಪಡಕಿನ ಬಾಗಿಲು. [ದೇಶ್ಯ – ಪಡಿ – ಸಂ. ಪಟಲ]

೭. **ತಕ್ಸೀರು** (ಅ) ಅಪರಾಧ, ಗುನ್ಹೆ, ದೋಷ. ಉದಾ:- ಪೋಲೀಸರು ತಕ್ಸೀರು ದಾಖಲೆ ಮಾಡಿಕೊಂಡರು. [ಉರ್ದು – ಅರಬ್ಬಿ – ತಕಸೀರ್]

೮. **ತಾಪಸ** (ಅ) ತಪಸ್ಸು ಮಾಡುವವ, ಋಷಿ, ಮುನಿ. ಉದಾ:- ತಾಪಸರ ಆಶ್ರಮ. [ಸಂ. ತಪಸ್ – ಇಂದ]

೯. **ದಫನ** (ಅ) (ಹೆಣವನ್ನು) ಹೂಳುವುದು, ಹುಗಿಯುವುದು. ಉದಾ:- ಮುಸ್ಲಿಮರು ಶವದಫನ ಮಾಡುತ್ತಾರೆ. [ಉರ್ದು – ದಫನ್]

೧೦. **ಪಾಯಕ** (ಅ) ಕಾಲಾಳು, ನೆಲದ ಮೇಲೆ ನಿಂತು ಹೋರಾಡುವ ಸೈನಿಕ; ಪದಾತಿ. [ಪ್ರಾಕೃತ–ಪಾಯ = ಪಾದ + ಕ; ಫಾರಸಿ – ಪಾಯಿಕ್]

೧೧. **ಚಾರ** (ಈ) ದೂತ; ನಡೆಯುವವ; ಗೂಢಚಾರ, ಗುಟ್ಟಿನಲ್ಲಿ ಸುದ್ದಿ ಸಂಗ್ರಹಿಸಿ ಅಧಿಕಾರಿಗಳಿಗೆ ಕೊಡುವವನು, ಬೇಹುಗಾರ. ಉದಾ:- ರಾಜರಿಗೆ ಚಾರರೇ ಕಣ್ಣುಗಳು. [ಸಂ.]

೧೨. **ಇಂಚರ** (ಇ) ಮಧುರವಾದ ಧ್ವನಿ, ಇನಿ ದನಿ. ಉದಾ:- ಇಂಚರದಿಂದ ಹಾಡುತ್ತಿದ್ದಳು. [ದೇಶ್ಯ. ಇನಿದು = ಸವಿಯಾದ + ಸಂ ಸ್ವರದ ತದ್ಭವ]

## ನಿಮ್ಮ ಶಬ್ದಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | | |
|---|---|---|---|
| ೬–೮ | ಸರಿಯಿದ್ದರೆ | ... | ಸಾಧಾರಣ |
| ೯–೧೦ | ,, | ... | ಉತ್ತಮ |
| ೧೧–೧೨ | ,, | ... | ಅತ್ಯುತ್ತಮ |

ಮಲಯಾಳಂ ಕಥೆ

# ಮುಕುಂದರಾಜನ ರಾತ್ರಿಗಳು

**ಮೂಲ: ಡಾ. ಪುನತ್ತಿಲ್ ಕುಂಇಬ್ದುಲ್ಲ**
**ಕನ್ನಡಕ್ಕೆ: ಶಶಿ ಭಾಟಿಯಾ**

ನನ್ನ ಊರಿನಲ್ಲಿ ಪತಿವ್ರತೆಯೂ ಸುಸ್ವಭಾವಿಯೂ ಆದ ಒಬ್ಬ ಯುವತಿ ಇದ್ದಾಳೆ. ಅವಳನ್ನು ಲಕ್ಷ್ಮಿಕುಟ್ಟಿ ಎಂಬುದಾಗಿ ಕರೆಯೋಣ. ಅವಳ ನಿಜವಾದ ಹೆಸರು ಅದಲ್ಲ. ನಾನದನ್ನು ಮುಂದೆ ವ್ಯಕ್ತಪಡಿಸುವೆ. ಏನನ್ನಾದರೂ ಅಡಗಿಸಿಡುವುದು ನನ್ನ ಸ್ವಭಾವವೆ ಆಗಿದೆಯಲ್ಲ. ದಯುಮಾಡಿ ತಪ್ಪು ತಿಳಿಯದಿರಿ.

ನಮ್ಮ ಲಕ್ಷ್ಮಿಕುಟ್ಟಿಯ ದಿನ ಹೇಗೆ ಕಳೆದು ಹೋಗುತ್ತದೆ ಎಂಬುದನ್ನು ಮಾತ್ರ ನಾನು ಇಲ್ಲಿ ಬಹಳ ಚುಟುಕಾಗಿ ವಿವರಿಸುವೆ.

ಆರೋಗ್ಯವಂತ ಮನಸ್ಸುಳ್ಳ ಎಲ್ಲರ ಹಾಗೆ ಲಕ್ಷ್ಮಿಕುಟ್ಟಿಯ ದಿನ ಆರಂಭವಾಗುವುದು ಪ್ರಭಾತದ ಮೊಟ್ಟೆಯೊಡೆಯುವುದರಿಂದಲೇ. ಕರಾರುವಾಕ್ಕಾಗಿ ಅವಳ ಅಲಾರಂ ಐದು ಗಂಟೆಗೆ ಬಾರಿಸುವುದು. ಕೂಡಲೇ ಅವಳು ಗಡಿಬಿಡಿಸಿ ಎಚ್ಚರಗೊಳ್ಳುತ್ತಾಳೆ.

ದಿನ ಆರಂಭವಾಗುವುದು.

ಎದ್ದ ಕೂಡಲೇ ಲಕ್ಷ್ಮಿಕುಟ್ಟಿ ಸ್ವಿಚ್ ಹಾಕಿದಳು. ಹತ್ತಿರದ ಮಂಚದಲ್ಲಿ ಅವಳ ಗಂಡ ಮುಕುಂದರಾಜ ಮಲಗಿ ನಿದ್ರಿಸುತ್ತಿದ್ದಾನೆ. ಅಲರಾಂ ಶಬ್ದ ಕೇಳಿ ಮುಕುಂದರಾಜನಿಗೆ ಎಚ್ಚರವಾಗಲಿಲ್ಲ. ಅವನ ಶ್ರವಣ ಶಕ್ತಿ ನಷ್ಟ ಹೊಂದಿದೆ.

ಕಿವಿ ಮಾತ್ರವಲ್ಲ. ಮುಕುಂದರಾಜನಿಗೆ ದೇಹದ ಬಲಭಾಗವನ್ನು ಪಕ್ಷಪಾತ ಆಕ್ರಮಿಸಿದೆ. ಎಡಗೈ ಎಡಗಾಲನ್ನು ಅಲುಗಾಡಿಸಬಹುದು. ಆದರೆ ಬಲಹೆಬ್ಬೆರಳು ಸಹ ಅಲುಗಾಡಲಾರದು. ಅದರೊಂದಿಗೆ ಕಿವಿಯೂ ಹೋಯಿತು. ಆದರೂ ಒಂದು ಲಾಭವಿದೆ. ಆತನಿಗೆ ಕಾಣುವುದೆಲ್ಲ ಎರಡಾಗಿ ಕಾಣಿಸುತ್ತದೆ. ವೈದ್ಯರು ಅವನ್ನು ಡಿಪ್ಲೋಪಿಯಾ ಎಂಬ ಮುದ್ದಾದ ಹೆಸರಿನಿಂದ ಕರೆದರು.

ಮುಕುಂದರಾಜ ಹೊದ್ದು ಮಲಗಿದ್ದಾನೆ. ಲಕ್ಷ್ಮಿಕುಟ್ಟಿ ಕೋಣೆಗೆ ಕಾಲಿರಿಸಿದಾಗ ಮೂತ್ರದ ದುರ್ವಾಸನೆ ಆಕ್ರಮಿಸಿತು. ಹಾಸಿಗೆ ಒದ್ದೆಯಾಗಿದೆ.

ಮುಕುಂದರಾಜ ಕಣ್ಣು ತೆರೆದು ಲಕ್ಷ್ಮಿಕುಟ್ಟಿಯನ್ನು ನೋಡಿದ. ಬಹುಶಃ ಆತ ಇಬ್ಬರು ಲಕ್ಷ್ಮಿಕುಟ್ಟಿಯರನ್ನು ಕಾಣುತ್ತಿರಬಹುದು. ಲಕ್ಷ್ಮಿಕುಟ್ಟಿ ಎಂದಿನಂತೆ ಆತನನ್ನು ನೋಡಿ ಮುಗುಳ್ನಕ್ಕಳು. ಅವನೂ ಮುಗುಳ್ನಗಲು ಪ್ರಯತ್ನಿಸಿದ. ತುಟಿಗಳು ಒಂದು ಭಾಗಕ್ಕೆ ವಾಲಿ ನಿಂತವು. ಮುಖ ವಿಕೃತಗೊಂಡಿತು.

ಬೇಸಿನ್ನಿನ ನೀರಿನಲ್ಲಿ ಕೈ ನೆನೆಸಿ ಲಕ್ಷ್ಮಿಕುಟ್ಟಿ ಆತನ ಬಾಯಿ ಮತ್ತು ಮುಖವನ್ನು ಶುಚಿಗೊಳಿಸಿದಳು. ಒಂದು ಭಾಗಕ್ಕೆ ಸರಿಸಿ ಮಲಗಿಸಿ ಹಾಸು ಬಟ್ಟೆಯನ್ನು ಬದಲಾಯಿಸಿದಳು. ಬೇರೆ ವಸ್ತ್ರವನ್ನು ಉಡಿಸಿದಳು. ನೆಲಕ್ಕೂ ಹಾಸಿಗೆಗೂ ಪೌಡರ್ ಸಿಂಪಡಿಸಿದಾಗ ಸುಗಂಧ ಹರಡಿತು.

ಅಲ್ಲಿಂದ ಲಕ್ಷ್ಮಿಕುಟ್ಟಿ ಅಡಿಗೆಮನೆ ಸೇರಿ ಸ್ಟವ್ ಹೊತ್ತಿಸಿದಳು. ಬಿಸಿ ಮಾಡಿದ ಹಾಲಿನಿಂದ ಕಾಫಿ ತಯಾರಿಸಿ ಕೋಣೆಗೆ ಬಂದಳು. ಮುಕುಂದರಾಜನನ್ನು ಮಂಚದಲ್ಲಿ ಹಿಡಿದು ಕುಳ್ಳಿರಿಸಿ ಕಾಫಿ ಕುಡಿಸಿದಳು. ಉದ್ದ ಗಡ್ಡಕ್ಕೆ ಅಂಟಿದ ಕಾಫಿಯನ್ನು ಕೈವಸ್ತ್ರದಿಂದ ಒರೆಸಿದಳು.

ಬೆಳಗಾಯಿತು. ಪಕ್ಷಿಗಳು ಕೂಗುತ್ತಾ ಹಾರಾಡಿದವು. ನೆರೆಮನೆಯ ಎಮ್ಮೆಗಳು ಕೂಗತೊಡಗಿದವು. ಹಾಲು ಕರೆಯುವವನು ಬಂದಿರಬೇಕು.

ಲಕ್ಷ್ಮಿಕುಟ್ಟಿ ಬಾಗಿಲು ತೆರೆದು ಹೊರಬಂದು ಚಾವಡಿ ಮತ್ತು ಅಂಗಳವನ್ನು ಗುಡಿಸಿ ಸಾರಿಸಿದಳು. ಗುಲಾಬಿ ಗಿಡಗಳಿಗೆ ನೀರುಣಿಸಿದಳು. ಪೂರ್ತಿ ಅರಳಿದ ಒಂದು ಗುಲಾಬಿಯನ್ನು ನೇವರಿಸಿ ಕೆಂಪಾದ ಅದರ ಎಸಳನ್ನು ಬಾಗಿ ಚುಂಬಿಸಿದಳು.

ಹೊತ್ತು ಏರತೊಡಗಿತು.

ಲಕ್ಷ್ಮಿಕುಟ್ಟಿಯ ಒಲೆಯಲ್ಲಿ ಅನ್ನವೂ ಫಲಾಹಾರವೂ ಬೇಯುತ್ತಿವೆ.

ಮುಕುಂದರಾಜನ ಊಟವನ್ನು ಪಾತ್ರೆಯಲ್ಲಿ ಹಾಕಿ ಕೋಣೆಯಲ್ಲಿರಿಸಿದಳು. ಮಧ್ಯಾಹ್ನ ರಾಮನ್ ನಾಯರ್ ಬರುತ್ತಾನೆ. ರಾಮನ್ ನಾಯರ್ ಹತ್ತಿರದ ಎಲ್. ಪಿ. ಶಾಲೆಯಲ್ಲಿ ಪೇದೆಯಾಗಿದ್ದಾನೆ. ಮಧ್ಯಾಹ್ನದ ಆಹಾರವನ್ನು ರಾಮನ್ ಮುಕುಂದರಾಜನಿಗೆ ಕೊಡುತ್ತಾನೆ. ಔಷಧಿ ಕುಡಿಸುತ್ತಾನೆ. ಲಕ್ಷ್ಮಿಕುಟ್ಟಿ ಆಫೀಸಿನಿಂದ ಬರುವವರೆಗೆ ಚಹ ಕುಡಿಯುತ್ತಾ, ಒಂದೊಂದೇ ಕಡಲೆಕಾಳುಗಳನ್ನು ಕುರುಕುತ್ತಾ ಮುಕುಂದರಾಜನಿಗೆ ಕಾವಲಿರುತ್ತಾನೆ.

ಮುಕುಂದರಾಜನ ಸ್ವಾಭಾವಿಕವಾದ ಕೂಗನ್ನು ಕೇಳಿ ಲಕ್ಷ್ಮಿಕುಟ್ಟಿ ಕೋಣೆಗೆ ನಡೆದಳು. ಎಡಗೈಯನ್ನು ಎತ್ತಿ ಆತ ರೇಡಿಯೋ ಕಡೆ ಬೊಟ್ಟು ಮಾಡಿದ. ಕೇಳಿಸಲಾರದಾದರೂ ರೇಡಿಯೋವನ್ನು ಬೆಳಿಗ್ಗೆ ಯಾವಾಗಲೂ ಆನ್ ಮಾಡಿಕೊಡಬೇಕು. ರೇಡಿಯೋ ಬಿತ್ತರಿಸುವ ವಾರ್ತೆಗಳು, ಗಾಯನಗಳು ಆತನನ್ನು ಹಿಡಿದಿಡುವುದಿಲ್ಲ. ಆತನನ್ನು ಕೌತುಕಪಡಿಸುವ ಒಂದು ವಸ್ತುವೆಂದರೆ ರೇಡಿಯೋದಲ್ಲಿದೆ. ಅದೆಂದರೆ ಆನ್ ಮಾಡಿದಾಗ ಹೊತ್ತುವ ಹಸಿರು ಬಲ್ಬು.

ಲಕ್ಷ್ಮಿಕುಟ್ಟಿ ರೇಡಿಯೋವಿನ ಸ್ವಿಚ್ ಒತ್ತಿದಳು. ಡಯಲಿನ ಹಸಿರು ಬೆಳಕು ಕಂಡಾಗ ಮುಕುಂದರಾಜನ ತುಟಿಯಲ್ಲಿ ನಗು ಮಿಂಚಿತು. ಎಡಕ್ಕೆ ವಾಲಿದ ನಗು.

ಲಕ್ಷ್ಮಿಕುಟ್ಟಿ ಒಂದು ಬಾಟಲು ತೆರೆದು ಎರಡು ಮಾತ್ರೆಗಳನ್ನು ತನ್ನ ಅಂಗೈಗೆ ಹಾಕಿದಳು. ಆಗ ಮುಕುಂದರಾಜನ ಮಂದಹಾಸ ನಿಂತಿತು. ತೆರೆದ ಬಾಯಿಯಲ್ಲಿ ಮಾತ್ರೆಗಳು ನಂತರ ನೀರೂ ತುಂಬಿತು. ಗಳುಂ ಗುಳುಂ ಶಬ್ದದೊಡನೆ ಅದು ನಿಧಾನವಾಗಿ ಹೊಟ್ಟೆಗಿಳಿಯಿತು.

ಕನ್ನಡಿ ನೋಡಿ ಕೂದಲಲ್ಲಿ ಮತ್ತೊಮ್ಮೆ ಕೈಯಾಡಿಸಿ ಲಕ್ಷ್ಮಿಕುಟ್ಟಿ ಬ್ಯಾಗು ಕೊಡೆಗಳನ್ನು ತೆಗೆದುಕೊಂಡು ಹೊರಟಳು. ಭದ್ರವಾಗಿ ಹಿಡಿದ ಬ್ಯಾಗಿನಲ್ಲಿ ಟಿಫಿನ್ ಡಬ್ಬವೂ ಬಾಟಲಿ ತುಂಬ ಮಜ್ಜಿಗೆಯೂ ಇದೆ.

ಮನೆಯ ಬಾಗಿಲಿಗೆ ಹೊರಗಿನಿಂದ ಲಾಕ್ ಮಾಡಿದಳು. ಅದರ ಒಂದು ಕೀ ರಾಮನ್ ನಾಯರ್ ಬಳಿಯಿದೆ.

ಎರಡು ಬಸ್ಸುಗಳನ್ನು ಹತ್ತಿ ಆಫೀಸನ್ನು ತಲ

ಪಿದಾಗ ಗಂಟೆ ಹತ್ತಾಗಿತ್ತು. ಖಾಸಗಿ ಆಫೀಸು, ಒಂದು ದೊಡ್ಡ ಬಟ್ಟೆ ಕಂಪೆನಿಯ ಆಫೀಸು. ಮ್ಯಾನೇಜರರಿಗೆ ಬರುವ ಪತ್ರಗಳಿಗೆ ಉತ್ತರ ಬರೆಯುವುದು ಲಕ್ಷ್ಮಿಕುಟ್ಟಿಯ ಕೆಲಸ.

ಎಂದಿನಂತೆ ಲಕ್ಷ್ಮಿಕುಟ್ಟಿಯನ್ನು ಮ್ಯಾನೇಜರ್ ಕೋಣೆಗೆ ಕರೆದರು.

ಮುಖಕ್ಕೆ ಒಂದಿಷ್ಟೂ ಒಪ್ಪದ ದೊಡ್ಡ ಪೋಲೀಸ್ ಮೀಸೆಯ ಮ್ಯಾನೇಜರ್ ದಪ್ಪ ಶರೀರದ ಕುಳ್ಳಗಾದ ಮನುಷ್ಯ. ವಿಶಾಲವಾದ ಮೇಜಿನ ಮೇಲೆ ಫೈಲುಗಳೂ, ಒಂದು ಪ್ಲಾಸ್ಟಿಕ್ ಪಾತ್ರೆಯಲ್ಲಿ ಬೇರೆ ಬೇರೆ ತರದ ಪೆನ್ನುಗಳು ಅಲ್ಲಿವೆ. ಏನನ್ನಾದರೂ ಬರೆಯ ಬೇಕಾಗಿ ಬಂದರೆ ನಾಲ್ಕೈದು ಪೆನ್ನುಗಳಿಂದಾದರೂ ಬರೆದು ಪರೀಕ್ಷಿಸುವುದು ಅವರ ರೂಢಿ. ದಪ್ಪ ಬಟ್ಟೆಗಳನ್ನು ಧರಿಸುವ ಆತನ ಎದೆಯಲ್ಲೂ ಮುಂಗೈಯಲ್ಲೂ ಕೋತಿಗಳ ಮೈ ಮೇಲೆ ಇರುವಂತಹ ರೋಮಗಳನ್ನು ಕಾಣಬಹುದು.

ಎಂದಿನಂತೆ ಮ್ಯಾನೇಜರ್ ನಗು ಬೀರಿದ.

"ಲಕ್ಷ್ಮಿ, ಬಾ, ಕುಳಿತುಕೋ," ತನ್ನ ಹತ್ತಿರದ ಸ್ಟೂಲು ತೋರಿಸಿ ಆಹ್ವಾನಿಸಿದ.

ದಿನದಂತೆ ಲಕ್ಷ್ಮಿ ಹೇಳಿದಳು, "ಬೇಡ ಸರ್, ನಾನು ನಿಂತುಕೊಳ್ಳುವೆ."

"ಹಾಗಾದರೆ ನಿಂತುಕೊಳ್ಳು. ನಿಂತುಕೊಳ್ಳುವುದು ನನಗೂ ಇಷ್ಟವೇ," ಮ್ಯಾನೇಜರ್ ಸಂತೃಪ್ತಿಯಿಂದ ಹೇಳಿದ.

ನಂತರ ಡಿಕ್ಟೇಶನ್ ನಡೆಯಿತು.

ಹತ್ತು ಹದಿನೈದು ಕಾಗದಗಳು

ಡಿಕ್ಟೇಶನ್ ಮುಗಿದ ಮೇಲೆ ಮ್ಯಾನೇಜರ್ ಒಂದು ಚುಟ್ಟಾ ಹೊತ್ತಿಸುತ್ತಾ ಕೇಳಿದ: "ನಿನಗೂ ಬೇಕಾ ?"

ಲಕ್ಷ್ಮಿಯ ಕಣ್ಣುಗಳು ಪ್ರಶ್ನಾರ್ಥಕವಾಗಿ ನೋಡಿದಾಗ ಆತ ಹೇಳಿದ, "ಆಯಾಂ ಸೋರಿ. ನೀವೊಬ್ಬರು ಸ್ತ್ರೀ ಅಲ್ಲವೆ? ಅದೂ ಸುಂದರಿ– ವೆರಿ ಸೋರಿ; ರಿಯಲಿ ಆಯಾಂ ಸೋರಿ."



ಬಾಯಲ್ಲಿ ತುಂಬಿದ ಹೊಗೆಯನ್ನು ಹೊರಚೆಲ್ಲಿ ಕೇಳಿದ, "ಬೈದ ಬೈ ಹೌ ಈಸ್ ಯುವರ್ ಹಸ್?"

"ಹೀ ಈಸ್ ಆಲ್‌ರೈಟ್," ಲಕ್ಷ್ಮಿ ಉತ್ತರಿಸಿದಳು.

"ಹ್ಯಾಸ್ ಹಿ ಸ್ಟಾರ್ಟೆಡ್ ಮೂವಿಂಗ್ ಹೀಸ್ ಲಿಂಬ್ಸ್?"

ಉತ್ತರವಾಗಿ ಲಕ್ಷ್ಮಿ ತಲೆ ತಗ್ಗಿಸಿದಳು.

ಮ್ಯಾನೇಜರ್ ಸಹಾನುಭೂತಿಯೂ ಪರಿಹಾಸವೂ ಬೆರೆತ ಭಾವದಲ್ಲಿ ನಗು ಹೊರಚೆಲ್ಲಿದ.

ಚುಟ್ಟದ ದುರ್ಗಂಧ ಕೋಣೆಯಲ್ಲಿ ತುಂಬಿತು.

"ಲಕ್ಷ್ಮಿ ನೀವು ಹೋಗಬಹುದು," ಮ್ಯಾನೇಜರ್ ಹೇಳಿದ. ಆದರೆ ಹೊರಡುವ ಮೊದಲು "ನೀವು ಇಚ್ಛಿಸುವುದಾದರೆ. ಈ ಸ್ಟೂಲಿನಲ್ಲಿ ಕುಳಿತುಕೊಳ್ಳಬಹುದು" ಎಂದ.

"ಅಯಾಂ ಸೋರಿ ಸರ್." ಹೊರಗೆ ನಡೆಯುತ್ತಾ ಲಕ್ಷ್ಮಿ ಹೇಳಿದಳು.

ಮ್ಯಾನೇಜರ್ ಆ್ಯಶ್‌ಟ್ರೇಯಲ್ಲಿ ಚುಟ್ಟವನ್ನು ಒತ್ತಿ ಹುಡಿಮಾಡಿದ.

ಸಂಜೆ ಲಕ್ಷ್ಮಿ ಮನೆ ಸೇರಿದಾಗ ತುಂಬಾ ತಡವಾಗಿತ್ತು. ಮನೆಯ ಚಾವಡಿಗೆ ಹತ್ತಿದಾಗ ಅವಳಿಗೆ ಅಳು ಬಂತು. ಬೀಗ ಹಾಕಿದ ಹಾಗೇ ಇದೆ.

ರಾಮನ್ ನಾಯರ್ ಬಂದಿರಲಿಲ್ಲ.

ಲಕ್ಷ್ಮಿ ಬಾಗಿಲು ತೆರೆದಳು.

ಮುಕುಂದರಾಜ ಆಯಾಸದಿಂದ ಮಲಗಿದ್ದಾನೆ. ಲಕ್ಷ್ಮಿಯ ಕೈ ತಾಗಿದಾಗ ಎಡಕ್ಕೆ ವಾಲುವ ನಗು ಅರಳಿತು.

ರಾಮನ್ ನಾಯರ್ ಬಂದಿರದ ಕಾರಣ ಬೆಡ್ ಫ್ಯಾನ್ ಹಾಕಿರಲಿಲ್ಲ. ಕೋಣೆ ಪೂರ್ತಿ ವಾಸನೆ ಬರುತ್ತಿದೆ.

ಲೋಶನ್ ಪೌಡರ್ ಉಪಯೋಗಿಸಿ ಎಲ್ಲವನ್ನೂ ಲಕ್ಷ್ಮಿಕುಟ್ಟಿ ಶುಚಿಗೊಳಿಸಿದಳು. ಪುನಃ ಸುಗಂಧ ಗಮಗಮಿಸಿತು.

ಲಕ್ಷ್ಮಿಕುಟ್ಟಿ ಅನ್ನದ ಬಟ್ಟಲು ಎತ್ತಿಕೊಂಡು ಮುಕುಂದರಾಜನ ಹತ್ತಿರ ಕುಳಿತಳು. ರುಚಿಕಟ್ಟಾದ ಮಜ್ಜಿಗೆ ಪದಾರ್ಥಗಳನ್ನೂ ಅನ್ನದೊಂದಿಗೆ ಕಲಸಿದ ಒಂದೊಂದೆ ತುತ್ತನ್ನೂ ಮುಕುಂದರಾಜ ನುಂಗಿದ. ಆ ಕಣ್ಣುಗಳಲ್ಲಿ ಸಂತೃಪ್ತಿಯ ನಕ್ಷತ್ರಗಳು ಹೊಳೆದುವು.

ಇರುಳು ಕಪ್ಪು ಛಾಯೆಯೊಂದಿಗೆ ಹರಡಿತು.

ಲಕ್ಷ್ಮಿಕುಟ್ಟಿ ಅಡುಗೆಮನೆ ಸೇರಿ ಊಟದ ತಯಾರಿ ನಡೆಸಿದಳು. ಟೊಮೆಟೊ ಸಾರು, ಕುಟ್ಟಿದ ಅಕ್ಕಿಯ ಅನ್ನ, ಅವಿಲ್, ಹುಳಿಬಾರದ ಮೊಸರು, ಗುಳ್ಳೆ ಮೀನಿನ ಫ್ರೈ ಇವಿಷ್ಟನ್ನು ಪಾತ್ರೆಗಳಲ್ಲಿ ಬಡಿಸಿದಳು.

ರಾತ್ರಿ ಬೇರಾರೂ ಊಟಕ್ಕಿಲ್ಲದಿದ್ದರೂ ಲಕ್ಷ್ಮಿ ಭಕ್ಷ್ಯ ಪದಾರ್ಥಗಳನ್ನು ಊಟದ ಮೇಜಿನ ಮೇಲೆ ಹರಡುತ್ತಾಳೆ. ನಂತರ ಕುಳಿತು ಸ್ವಲ್ಪ ಊಟಮಾಡುತ್ತಾಳೆ.

ಮುಕುಂದರಾಜನಿಗೆ ರಾತ್ರಿ ಹಾಲು, ಗಂಜಿ. ಅವನ್ನು ಸೇವಿಸಿದಾಗ ಆತನಿಗೆ ತೃಪ್ತಿಯಾಯಿತು. ರಾತ್ರಿ ತೆಗೆದುಕೊಳ್ಳಬೇಕಾದ ಔಷಧಿ ಸಹ ದೊರೆತಾಗ ಮುಕುಂದರಾಜ ರೇಡಿಯೋ ನೋಡುತ್ತಾ ಮಲಗಿದ.

ನಂತರ ಲಕ್ಷ್ಮಿಕುಟ್ಟಿ ಉಟ್ಟ ವಸ್ತ್ರಗಳನ್ನೆಲ್ಲ ಬಿಚ್ಚಿ ತೆಳುವಾದ ನಿಲುವಂಗಿಯನ್ನು ಧರಿಸಿದಳು. ಅಂದು ಕೊಂಡುಕೊಂಡ ವಾರಪತ್ರಿಕೆಗಳನ್ನು ತಿರುವಿದಳು. ಎಲ್ಲವೂ ಕೊಟ್ಟಾಯಂದಿಂದ ಬಂದವುಗಳಾಗಿದ್ದವು.

ಸನಿಹದ ಬೆಂಚಿನಲ್ಲಿ ಲಕ್ಷ್ಮಿಕುಟ್ಟಿ ಒರಗಿದಳು.

ಮುಕುಂದರಾಜ ತಲೆ ಓರೆ ಮಾಡಿ ಹಸಿರು ಬೆಳಕನ್ನು ನೋಡುತ್ತಿದ್ದಾನೆ. ಹಾಗೇ ಆತನ ಕಣ್ಣುಗಳು ಮಿಣಿಮಿಣಿಯಾದುವು. ನಂತರ ನಿಧಾನವಾಗಿ ಮುಚ್ಚಿದವು.

ಲಕ್ಷ್ಮಿಕುಟ್ಟಿ ಎದ್ದು. ಹೊದಿಕೆ ಎಳೆದು, ಕೊಡವಿ, ಮುಕುಂದರಾಜನ ಕತ್ತಿನವರೆಗೆ ಹೊದಿಸಿದಳು.

ರೇಡಿಯೋದಲ್ಲಿ ದೂರದೇಶದಿಂದ ಒಂದು ಹಳೆಯ ಹಿಂದಿ ಹಾಡು ಕೇಳಿಬರುತ್ತಿತ್ತು.

ಲಕ್ಷ್ಮಿ ವಾರಪತ್ರಿಕೆಯ ಪುಟಗಳನ್ನು ಮುಗುಚಿದಳು.

ಹೊರಗೆ ಗಾಳಿ ಬೀಸಿತು. ಕಿಟಕಿಯ ಮೂಲಕ

ತಣ್ಣನೆಯ ಗಾಳಿಯು ಒಂದು ಸೋಂಕು ಕೋಣೆ ಪ್ರವೇಶಿಸಿತು. ಮುಕುಂದರಾಜನ ತಲೆ ಹೊದಿಕೆ ಅಲುಗಾಡಿತು. ಆದರೆ ಆತನಿಗೆ ತಿಳಿಯಲಿಲ್ಲ. ಮಗುವಿನ ಹಾಗೆ ಮುಗ್ಧವಾಗಿ ಆಳ ಮಲಗಿದ್ದಾನೆ.

ಗ್ರಿಲ್ಸ್ ಮೂಲಕ ಲಕ್ಷ್ಮಿ ಹೊರಗೆ ನೋಡಿದಳು. ಆಕಾಶ ಕಪ್ಪಡರುತ್ತಿದೆ. ಕಪ್ಪು ಪಡೆಗಳು ಆಕಾಶವನ್ನು ಆಕ್ರಮಿಸಿ ಕೋಲಾಹಲ ಎಬ್ಬಿಸಿದವು. ಆ ಹೊತ್ತಿನಲ್ಲಿ ಕಾರ್ಮೋಡವನ್ನು ಸೀಳಿಕೊಂಡು ಹಾರುವ ಒಂದು ವಿಮಾನದ ಕೆಂಪು ಕಣ್ಣುಗಳು ಅರಬ್ಬಿ ಸಮುದ್ರದ ಆಚೆ ಲಕ್ಷ್ಯವಿಟ್ಟುಕೊಂಡು ಸಾಗುತ್ತಿತ್ತು. ವಿಮಾನದ ಶಬ್ದ ಮಾಯವಾಗುವ ವರೆಗೆ ಲಕ್ಷ್ಮಿಕುಟ್ಟಿ ಕಿವಿ ತೆರೆದು ಮಲಗಿದಳು.

ಲಕ್ಷ್ಮಿಕುಟ್ಟಿಗೆ ಏನೋ ಇಲ್ಲವಾದ ಭಾವ.

ಹೀಗೆಲ್ಲ ನಡೆಯುತ್ತಿರುವಾಗ, ಲಕ್ಷ್ಮಿಕುಟ್ಟಿಯ ಮನೆಯನ್ನು ಗುರಿಯಾಗಿಟ್ಟುಕೊಂಡು, ಕಾಲು ದಾರಿಗಳನ್ನು ಅರ್ಧದಲ್ಲಿ ತಡಕಾಡುತ್ತಾ, ಹೊದಿಕೆ ಮುಚ್ಚಿದ ಒಂದು ರೂಪ ನಡೆಯುತ್ತಿತ್ತು.

ವಿಮಾನದ ಸದ್ದು ಕೇಳಿದಾಗ ಲಕ್ಷ್ಮಿಕುಟ್ಟಿಯ ಗೇಟಿನ ಲಾಕ್ ತೆಗೆದ ಶಬ್ದ ಕೇಳಿಸಿತು.

ಲಕ್ಷ್ಮಿಕುಟ್ಟಿ ಸಾವಧಾನವಾಗಿ ಎದ್ದು ರೇಡಿಯೋ ನಿಲ್ಲಿಸಿದಳು. ಹಸಿರು ಬೆಳಕು ನಂದಿತು. ಕೋಣೆ ಪೂರ್ತಿ ಅಂಧಕಾರ ಹರಡಿತು. ಮುಕುಂದರಾಜನ ಬಲಹೀನವಾದ ಶ್ವಾಸೋಚ್ಛ್ವಾಸ ಮಾತ್ರ ಕೋಣೆಯಲ್ಲಿ ನಿಧಾನವಾಗಿ ತಾಳ ಹಾಕುತ್ತಿತ್ತು.

ರೂಪ ಲಕ್ಷ್ಮಿಕುಟ್ಟಿಯ ಚಾವಡಿಗೆ ಹತ್ತಿತು.

ಆತ ದೊಡ್ಡದಾಗಿ ಉಸಿರು ಬಿಡುತ್ತಿದ್ದ.

ಗಂಡಿನ ಉಸಿರಿನ ಶಬ್ದ ಚಾವಡಿಯ ನಿಶ್ಶಬ್ದವನ್ನು ಅಲುಗಾಡಿಸಿತು.

ಲಕ್ಷ್ಮಿಕುಟ್ಟಿಯ ಮನೆಯ ಬಾಗಿಲು ತೆರೆಯಿತು. ಆ ರೂಪ ಕತ್ತಲೆಯ ಕೋಣೆಯನ್ನು ಪ್ರವೇಶಿಸಿತು.

ಅವರ ತುಟಿಯ ಅಂಚಿನ ಕ್ಷೀಣವಾದ ಮಾತುಗಳು ಗಾಳಿರೂಪದಲ್ಲಿ ಹೊರಬಂತು.

ಲಕ್ಷ್ಮಿಕುಟ್ಟಿ ಕೇಳಿದಳು: "ಏನು ತಡ ಮಾಡಿದೆ.?"

"ದಾರಿ ತಪ್ಪಿಹೋಯಿತು," ಒಳ ಸೇರಿದ ಗಂಡು ಹೇಳಿದ.

"ದಾರಿ ತಪ್ಪಿತು ಎಂದೋ? ಇಷ್ಟು ಕಾಲವೂ ದಾರಿ ತಪ್ಪಿಲ್ಲವಲ್ಲ," ಆಶ್ಚರ್ಯದಿಂದ ಲಕ್ಷ್ಮಿಕುಟ್ಟಿ ಹೇಳಿದಳು.

"ಹೌದು, ಕೆಲವೊಮ್ಮೆ ನಾವು ತಿಳಿಯದೆ ತಪ್ಪಾದ ದಾರಿಯಲ್ಲಿ ಹೋಗುತ್ತೇವೆ."

ಲಕ್ಷ್ಮಿಕುಟ್ಟಿ ಅವನ ಕೈಹಿಡಿದು ಇನ್ನೊಂದು ಕೋಣೆ ಸೇರಿ ಬಾಗಿಲು ಓರೆ ಮಾಡಿದಳು.

ಇಬ್ಬರೂ ಕುಳಿತುಕೊಂಡರು.

ಉಸಿರು ಒಳಸೇರಿ ಬೆರೆಯಿತು.




"ಅಜ್ಜಿ ಕತೆಗಳು ಬೇಕಂತ ಜಾಹೀರಾತು ಕೊಟ್ಟಿದ್ರಿಂದ ಬಂದಿದ್ದೀನಿ...ನಂಗೆ ಬರೆಯೋಕೆ ಬರೋಲ್ಲ...ಹೇಳ್ತೀನಿ ಮತ್ತೆ..."

ಮುಕುಂದರಾಜನ ಬಲಹೀನವಾದ ಶ್ವಾಸಕೋಶದಿಂದ ಹೊರಟ ಉಸಿರಿನ ಅಲೆಗಳು ಆತ ಜೀವಿಸಿದ್ದಾನೆ ಎಂದು ತಿಳಿಸುತ್ತಾ, ಓರೆಮಾಡಿದ ಬಾಗಿಲಿನ ಮೂಲಕ ಕೋಣೆಗೆ ಕೇಳಿಬರುತ್ತಿದ್ದವು.

"ಬಾಗಿಲು ಸರಿಯಾಗಿ ಮುಚ್ಚು," ಆ ಗಂಡು ಹೇಳಿದ.

ಲಕ್ಷ್ಮಿಕುಟ್ಟಿ ಬಾಗಿಲು ಮುಚ್ಚಿದಳು.

"ಮಂಚದಲ್ಲಿ ಇಬ್ಬರೂ ಅಲುಗಾಡದೆ ಮಲಗಿದ್ದಾರೆ. ಹೊರಗೆ ಆಗಲೂ ಕಪ್ಪು ಮೋಡಗಳು ಆಕಾಶವನ್ನು ಆಕ್ರಮಿಸಿ ಮುಚ್ಚಿ ಹಿಡಿದಿದ್ದುವು.

ವಿಶಾಲವಾಗಿ ಹರಡಿದ ಮರಗಳ ಎಲೆಗಳಿಂದ ಬೀಳುವ ಮಂಜಿನ ಹನಿಗಳ ಸದ್ದೂ ಏಕಾಂಗಿಯಾದ ಒಂದು ರಾಗವೂ ವಾತಾವರಣವನ್ನು ಜೀವಂತಗೊಳಿಸಿತು.

ಲಕ್ಷ್ಮಿಕುಟ್ಟಿ ಕೇಳಿದಳು: "ನೀವು ಏನನ್ನು ಆಲೋಚಿಸುತ್ತಿರುವುದು?"

"ಏನೂ ಇಲ್ಲ," ಆ ಗಂಡು ಹೇಳಿದ.

ಲಕ್ಷ್ಮಿಕುಟ್ಟಿಯ ತೆಳು ನಿಲುವಂಗಿ ಅವಳನ್ನು ಅಸ್ಪಷ್ಟಗೊಳಿಸುತ್ತಿತ್ತು. ಸಹನೆ ಕಳೆದುಕೊಂಡ ಲಕ್ಷ್ಮಿಕುಟ್ಟಿ ಹೇಳಿದಳು. "ನನಗೆ ಸಾಧ್ಯವಿಲ್ಲ. ಏನಾದರೂ ಮಾಡಿ ಬೇಗ..."

ಆತ ತನ್ನ ಕೈ ಎತ್ತಿ ನಿಲುವಂಗಿಯ ಬಟನ್‌ಗಳನ್ನು ಒಂದೊಂದಾಗಿ ಬಿಚ್ಚಿದ.

ಲಕ್ಷ್ಮಿಕುಟ್ಟಿಯ ದೇಹದ ಮೇಲೆಲ್ಲ ಆತನ ಕೈಗಳು ಹರಿಯುತ್ತಿದ್ದಂತೆ ಅವಳು ಕೇಳಿದಳು, "ನಿಮ್ಮ ಕೈಯ ಬಿಸುಪು ಎಲ್ಲಿ ಹೋಯಿತು.?"

"ಏನು?" ಗಂಡು ಕೇಳಿದ.

"ಕೈ ತಣ್ಣಗಾಗಿದೆ ಲಕ್ಷ್ಮಿ ಹೇಳಿದಳು.

"ಕೈ ಮಾತ್ರವಲ್ಲ. ನಾನೇ ತಣ್ಣಗಾಗಿದ್ದೇನೆ" ಗಂಡು ಹೇಳಿದ.

ಕೆಲವು ನಿಮಿಷಗಳ ವರೆಗೆ ಯಾರೂ ಏನನ್ನೂ ಹೇಳಲಿಲ್ಲ. ಅರ್ಧರಾತ್ರಿಯ ಕತ್ತಲೆಗೆ ಎಂದಿನಂತೆ ಕಾಲಮಂಜ ಕೂಗಲುತೊಡಗಿತು.

ಕಾಲಮಂಜದ ಪರಾಕ್ರಮ ಹಾಗೆ ಅವಸಾನ ಹೊಂದಿದಾಗ ಲಕ್ಷ್ಮಿ ಕೇಳಿದಳು: "ಆಲೋಚಿಸುವುದೇನನ್ನು?"

ಗಂಡು ಹೇಳಿತು: "ಕಳೆದ ವರ್ಷ ಇದೇ ದಿನ ಹೆಂಡತಿ ತೀರಿಹೋದಳು."

"ಏನು?" ಲಕ್ಷ್ಮಿಕುಟ್ಟಿ ಅಲ್ಪ ಅತಿಶಯದಿಂದ ಕೇಳಿದಳು.

"ಹೌದು. ಇದೇ ದಿನ ಅವಳು ನನ್ನಿಂದ ಬೀಳ್ಕೊಂಡಳು," ಲಕ್ಷ್ಮಿಕುಟ್ಟಿಯ ಒಳಗೆ ಯಾರೋ ಹತ್ತಿ ಅವಳನ್ನು ಅಲುಗಾಡಿಸಿದಂತೆ ತೋರಿತು.

ಕೂಡಲೇ ಅವಳು ಕೇಳಿದಳು, "ಮತ್ತೆ ಯಾಕೆ ಇಂದು ಬಂದೆ?"

"ನಾನು ಬಹಳ ಬೇಸರಪಡುತ್ತಿದ್ದೇನೆ... ನನಗೀಗ ನೆನಪಿಗೆ ಬಂತಷ್ಟೆ," ದಯನೀಯ ಸ್ವರದಲ್ಲಿ ಗಂಡು ಹೇಳಿತು.

"ಆಗಲೇ ನೆನಪು ಬಂದಿರುತ್ತಿದ್ದರೆ?" ಲಕ್ಷ್ಮಿಕುಟ್ಟಿ ಸಂಶಯದಿಂದ ಕೇಳಿದಳು.

"ನಾನು ಖಂಡಿತಾ ಬರುತ್ತಿರಲಿಲ್ಲ," ಗಂಡು ಹೇಳಿತು.

ಅವರಿಬ್ಬರೂ ಅಲುಗಾಡದೆ ಮಂಚದಲ್ಲಿ ಮಲಗಿದರು.

ಒಬ್ಬೊಬ್ಬರು, ಒಂದೊಂದು ಕಿಟಕಿಯ ಮೂಲಕ ಹೊರಗೆ ನೋಡಿದರು. ಹೊರಗೆ ದಟ್ಟವಾದ ಕತ್ತಲು ಆವರಿಸಿದೆ. ಗಾಳಿಯ ಸೂಚನೆಯೇ ಇಲ್ಲ. ಆಕಾಶದಲ್ಲಿ ಒಂದು ಬಯಕೆಯ ಚಿಹ್ನೆಯ ಬೆಳಕನ್ನು ಕೂಡ ಅವರು ಕಾಣಲಿಲ್ಲ.

ಎಷ್ಟು ಹೊತ್ತು ಮಲಗಿದರೋ ಅವರಿಗೇ ತಿಳಿಯಲಿಲ್ಲ.

ಲಕ್ಷ್ಮಿಕುಟ್ಟಿಗೆ ಎಚ್ಚರವಾದಾಗ ದೇವಸ್ಥಾನದ ಶಂಖನಾದ ಕೇಳಿಸುತ್ತಿತ್ತು.

ಮಂಚದ ಒಂದು ಭಾಗ ಖಾಲಿಯಾಗಿದೆ ಗಂಡು ಆಗಲೇ ಜಾಗ ಬಿಟ್ಟು ಹೊರಟು ಹೋಗಿದ್ದಾನೆ.

ಆಗಲೂ ಮುಕುಂದರಾಜನ ಕ್ಷೀಣವಾದ ಉಸಿರಿನ ಸದ್ದು ಲಕ್ಷ್ಮಿಕುಟ್ಟಿ ಮಲಗಿದ ಕೋಣೆಗೆ ಕೇಳಿಸಿತು.

# ನಾನು ಮತ್ತು ಮಹಾಭಾರತದ ಪಾಠ

ಡಿ. ಸುಮಿತ್ರ

ನಾನು ನಗರದ ಸರ್ಕಾರಿ ಬಾಲಕಿಯರ ಪ್ರೌಢಶಾಲೆಯೊಂದರಲ್ಲಿ ವಿಜ್ಞಾನದ ಉಪಾಧ್ಯಾಯಿನಿ. ವರ್ಷದ ಮಧ್ಯದಲ್ಲೂ ಅಧ್ಯಾಪಕರುಗಳ ವರ್ಗಗಳಾಗುತ್ತಿದ್ದವು. ಇಂತಹ ಒಂದು ಸಂದರ್ಭದಲ್ಲಿ ನಮ್ಮ ಶಾಲೆಯಲ್ಲಿದ್ದ ಕನ್ನಡ ಅಧ್ಯಾಪಕರೊಬ್ಬರಿಗೆ ವರ್ಗವಾದಾಗ ಅವರ ಸ್ಥಳಕ್ಕೆ ಬರಬೇಕಾದವರು ಬಹಳ ದಿನ ಬರಲಿಲ್ಲ. ಆಗ ಸಾಹಿತ್ಯದಲ್ಲಿ ಒಲವಿದ್ದ ನಾನು ಕನ್ನಡ ಬೋಧಿಸಲು ಒಪ್ಪಿಕೊಂಡೆ. ಒಂಭತ್ತನೆಯ ತರಗತಿಗೆ ಪಾಠ ಮಾಡುವ ಕೆಲಸ ನನ್ನ ಪಾಲಿಗೆ ಬಂತು.

ಈ ಕನ್ನಡ ಪಠ್ಯಪುಸ್ತಕದಲ್ಲಿ ಎ. ಆರ್. ಕೃಷ್ಣಶಾಸ್ತ್ರಿಗಳು ಬರೆದಿರುವ 'ವಚನ ಭಾರತ' ದಿಂದ ಆಯ್ದ 'ಧನುರ್ವಿದ್ಯಾಭ್ಯಾಸ' ಎಂಬ ಭಾಗವನ್ನು ಇಟ್ಟಿದೆ. ಈ ಪಾಠ ಪ್ರಾರಂಭಿಸಿದೆ:

"ಕೌರವರೂ ಪಾಂಡವರೂ ಶಸ್ತ್ರಾಸ್ತ್ರ ಪ್ರವೀಣರಾದ ಮೇಲೆ ದ್ರೋಣನು ಒಂದು ದಿನ ದೊರೆಯಾದ ಧೃತರಾಷ್ಟ್ರನನ್ನು ಕಂಡು ಕೃಪ, ಭೀಷ್ಮ, ವ್ಯಾಸ, ವಿದುರ ಮುಂತಾದವರ ಮುಂದೆ, 'ಮಹಾರಾಜ! ನಿನ್ನ ಮಕ್ಕಳು ಈಗ ಧನುರ್ವಿದ್ಯಾಪಾರಂಗತರಾಗಿದ್ದಾರೆ, ನಿನ್ನ ಅಪ್ಪಣೆಯಾದರೆ ತಮ್ಮ ವಿದ್ಯೆಯನ್ನು ತೋರಿಸಲು ಸಿದ್ಧರಾಗಿದ್ದಾರೆ' ಎಂದು ಹೇಳಿದನು. ಧೃತರಾಷ್ಟ್ರನು ಸಂತೋಷಪಟ್ಟು, 'ಆಚಾರ್ಯ, ನೀವು ಮಹತ್ತಾದ ಕಾರ್ಯವನ್ನು ಮಾಡಿದ್ದೀರಿ, ಯಾವಾಗ, ಎಲ್ಲಿ, ಹೇಗೆ ಪ್ರದರ್ಶನ ಮಾಡಿಸಬಹುದೆಂಬುದನ್ನು ನೀವೇ ನಿರ್ಧರಿಸಿ ಅವಕ್ಕೆ ಏರ್ಪಾಡು ಮಾಡಿ. ನನ್ನ ಮಕ್ಕಳ ಶಸ್ತ್ರಾಸ್ತ್ರ ಪ್ರವೀಣತೆಯನ್ನು ಕಣ್ಣಿಂದ ನೋಡಬಲ್ಲ ಪುಣ್ಯ ನನಗಿಲ್ಲವಲ್ಲಾ ಎಂಬುದೊಂದೇ ವ್ಯಥೆ!' ಎಂದನು."

ನಾನು ವಿವರಣೆ ಕೊಡುವುದಕ್ಕಿಂತ ಮುಂಚೆಯೆ ಮುಂದಿನ ಬೆಂಚಿನ ಹುಡುಗಿ, 'ಯಾಕೆ ಮೇಡಂ ಅವನಿಗೆ ಕಣ್ಣಿರಲಿಲ್ವಾ?' ಎಂದಳು.

'ಓ! ಹಾಗಾದರೆ ನಿನಗೆ ಮಹಾಭಾರತದ ಕತೆ ಗೊತ್ತಿಲ್ಲಾನ್ನ. ಧೃತರಾಷ್ಟ್ರ ಹುಟ್ಟುವಾಗಲೇ ಕುರುಡನಾಗಿದ್ದ.' ನಾನಂದೆ.

'ಯಾಕೆ, ಅವರ ಅಪ್ಪ, ಅಮ್ಮಂಗೆ ಕಣ್ಣಿರಲಿಲ್ವಾ ?'

'ಹಾಗೇನಿಲ್ಲ. ಅವರ ಅಪ್ಪ, ಅಮ್ಮ, ಅಜ್ಜಿ, ತಾತ ಎಲ್ಲರ ಕಣ್ಣುಗಳೂ ಚೆನ್ನಾಗಿದ್ದವು…' ನನ್ನ ಉತ್ತರವಿನ್ನೂ ಮುಗಿದಿರಲಿಲ್ಲ.

'ಮತ್ತೆ ಇವನಿಗೆ ಒಬ್ಬನಿಗೇ ಹೀಗಾಯ್ತೋ

ಅಥವಾ ಇವನ ಹಿಂದೆ ಮುಂದೆ ಹುಟ್ಟಿದವರಿಗೂ ಹೀಗೇ ಆಗಿತ್ತೋ ಟೀಚರ್?' ಹಿಂದಿನ ಬೆಂಚಿನ ಹುಡುಗಿ ಎದ್ದು ನಿಂತು ಕೇಳಿದಳು. ತಲೆಯೆತ್ತಿ ಅವಳ ಕಡೆ ನೋಡಿದೆ. ಅವಳಿಗೆ ಓರೆಚ ಗಣ್ಣುಗಳು (Squint eyes) ಇದ್ದವು.

ನನ್ನೆದುರಿಗೆ ಕೂತ ತರಗತಿಯ ಎಲ್ಲ ಮಕ್ಕಳನ್ನೂ ದಿಟ್ಟಿಸಿದೆ. ಹನ್ನೆರಡು ಹದಿಮೂರರ ಹಾಲುಗೆನ್ನೆಗಳ ಹಸುಳೆಗಳು. ವ್ಯಾಸ–ಅಂಬಿಕೆಯರ ಪ್ರಣಯ ಪ್ರಸಂಗವನ್ನು ಹೇಗೆ ಇವರೆದುರಿಗೆ ಹೇಳುವುದು? ನಿಧಾನವಾಗಿ...

'ಇಲ್ಲ ಮಗು, ಅವರೆಲ್ಲರಿಗೂ ಕಣ್ಣು ಚೆನ್ನಾಗಿತ್ತು...' ನನ್ನ ಮಾತುಗಳು ಮುಗಿಯುವ ಮುಂಚೆಯೇ ಮತ್ತೊಬ್ಬಳು ಪ್ರಶ್ನೆ ಕೇಳಿದವಳತ್ತ ತಿರುಗಿ, 'ಹೋಗಲಿ ಬಿಡೇ. ಅವನ ಹಣೇಬರಾ, ಅವನೊಬ್ಬನಿಗೇ ಹಾಗಾಗಬೇಕೂಂದ್ರೆ ಅದು ಅವನ ಕರ್ಮ ಅಷ್ಟೆ,' ಎಂದು ಜೋರಾಗಿ ಹೇಳಿ, 'ಮೇಡಂ, ಮುಂದೆ ಪಾಠ ಮಾಡಿ,'

ಎಂದಳು ಆಜ್ಞಾಪಿಸುವವಳಂತೆ. ಆ ಹುಡುಗಿ ಪೆಚ್ಚಾಗಿ ಕೂತಳು. ಅವಳನ್ನು ಕಂಡು ಅಯ್ಯೋ ಎನಿಸಿತು.

'ಮುಂದೆ ಪಾಠ ಮಾಡೋಣ. ತಾಳು ಸ್ವಲ್ಪ—,' ಎಂದವಳಿಗೆ ಹೇಳಿದೆ.

'ಹೌದು ಮಗು, ಕೆಲವೊಮ್ಮೆ ಹಾಗಾಗು ವುದೂ ಉಂಟು. ವಂಶದಲ್ಲಿ ಯಾರಿಗೂ ಯಾವ ತೊಂದರೆಯೂ ಇಲ್ಲದಿದ್ದರೂ, ಮಕ್ಕಳಿಗೆ ಹೀಗಾಗುವುದುಂಟು. ಅದನ್ನೇ ವಿಜ್ಞಾನದಲ್ಲಿ 'ಮ್ಯುಟೇಶನ್' ಎನ್ನುತ್ತಾರೆ. ತಾಯಿಯ ಹೊಟ್ಟೆ ಯಲ್ಲಿ ಮಗು ಬೆಳೆಯುವಾಗ ಏನೇನೋ ಬದ ಲಾವಣೆಗಳು ನಡೆಯುತ್ತವೆ. ಅವುಗಳಲ್ಲಿ ಏನಾ ದರೂ ದೋಷ ಉಂಟಾದರೆ ಇಂಥ ಮಗು ಹುಟ್ಟುತ್ತದೆ. ಹಾಗೇನಾದರೂ ಆಗಿರಬಹು ದೂಂತ ಕಾಣುತ್ತದೆ..."

ವಿಜ್ಞಾನ ನನ್ನ ನೆರವಿಗೆ ಬಂತು. ಮನಸ್ಸಿಗೇನೋ ತೃಪ್ತಿ ಇರಲಿಲ್ಲ. ಪ್ರಶ್ನೆ ಕೇಳಿದವಳಿಗೆ ಸಮಾ ಧಾನ ಉಂಟಾಗಿತ್ತು.

ಪಾಠ ಮುಂದುವರೆಸಿದೆ:

"ಗೊತ್ತಾದ ದಿವಸ ಧೃತರಾಷ್ಟ್ರ, ಭೀಷ್ಮ ಮುಂತಾದ ಗಂಡಸರೂ ಗಾಂಧಾರಿ, ಕುಂತಿ ಮುಂತಾದ ಹೆಂಗಸರೂ ಪುರಜನರೂ ಬಂದು ಕುಳಿತುಕೊಂಡರು.

"ಧೃತರಾಷ್ಟ್ರನ ಪಕ್ಕದಲ್ಲಿ ವಿದುರನೂ ಗಾಂಧಾರಿಯ ಪಕ್ಕದಲ್ಲಿ ಕುಂತಿಯೂ ಕುಳಿತು ಪ್ರದರ್ಶನದ ವಿವರಗಳೆಲ್ಲವನ್ನೂ ವರ್ಣಿಸಿ ತಿಳಿ ಸುತ್ತಿದ್ದರು..."

'ವಿದುರ ಯಾರು ಮೇಡಂ?'

ಉದ್ದ ಜಡೆಯ ಮುದ್ದು ಮುಖದ ಹುಡುಗಿ ಪ್ರಶ್ನಿಸಿದಳು.

'ವಿದುರ... ಧೃತರಾಷ್ಟ್ರನ ಆಸ್ಥಾನದಲ್ಲಿದ್ದ ಒಬ್ಬ ಪ್ರತಿಷ್ಠಿತ ವ್ಯಕ್ತಿ' ನನ್ನ ಮಾತುಗಳಿನ್ನೂ ಮುಗಿದಿರಲಿಲ್ಲ.

'ಅಲ್ಲ ಮೇಡಂ, ಅವನು ಧೃತರಾಷ್ಟ್ರನ ತಮ್ಮ.' ಪ್ರತಿಭಟಿಸುವವಳಂತೆ ನಿಂತು ಹೇಳಿದಳು ಎರಡನೆಯ ಸಾಲಿನಲ್ಲಿದ್ದ ಪುಟ್ಟ ಹುಡುಗಿ.

ನಾನು ನಗುತ್ತ, 'ನಿನಗೆ ಯಾರು ಹೇಳಿದರು ಮಗು?' ಎಂದೆ.

'ನಮ್ಮ ತಾತ ಮೇಡಂ. ಅವರು ಸಂಜೆ ಹೊತ್ತಿ ನಲ್ಲಿ ಆವಾಗಾವಾಗ ಭಾರತ ಪಾರಾಯಣ ಮಾಡ್ತಾರೆ; ಅರ್ಥ ವಿವರಿಸುತ್ತಾರೆ.'

'ಯಾರಿಗೆ ವಿವರಿಸಿ ಹೇಳ್ತಾರೆ?' ನನ್ನದು ಅಧಿಕ ಪ್ರಸಂಗಿಯ ಪ್ರಶ್ನೆಯಾದರೂ ಈ ಪುಟ್ಟ ಹುಡುಗಿಗೆ ಅದನ್ನೆಲ್ಲಾ ಹೇಗೆ ಹೇಳಿದರು? ಎಂಬ ಚಿಂತೆ ನನಗೆ.

'ನಮ್ಮ ಅಜ್ಜಿ ಮತ್ತು ನಮ್ಮ ತಾಯಿಗೆ.' ನಿಟ್ಟುಸಿರುಬಿಟ್ಟೆ.

'ವಿದುರನ್ನ ಯಾಕೆ ಮೇಡಂ ರಾಜನನ್ನಾಗಿ ಮಾಡಲಿಲ್ಲ? ಈ ಕುರುಡನ್ನ ಯಾಕೆ ರಾಜನಾಗಿ ಮಾಡಿದರು?' ಮತ್ತೊಬ್ಬಳ ಮುಗ್ಧ ಪ್ರಶ್ನೆ.

ಮೇಜಿನ ಮೇಲೆ ಪುಸ್ತಕ ಜೋರಲಾಗಿಟ್ಟೆ. ಪಾಠ ಮುಗಿಸುವುದಿರಲಿ, ಮುಂದುವರಿಯುವ ಮಾತೂ ಇಲ್ಲವಲ್ಲ! ಈ ಪ್ರಶ್ನೆಗೆ ಏನೆಂದು ಉತ್ತರಿಸಲಿ? ಹೀಗೆ ಹೇಳಿದೆ—

'ವಿದುರನಿಗೂ ಧೃತರಾಷ್ಟ್ರನಿಗೂ ಒಬ್ಬನೇ ತಂದೆ. ಆದರೆ ತಾಯಿಯರು ಬೇರೆ. ಧೃತರಾಷ್ಟ್ರ ರಾಣಿಯ ಮಗ. ಆದುದರಿಂದ ಅವನು ಕುರುಡ ನಾದರೂ ರಾಜನಾದ. ವಿದುರ ದಾಸಿಯ ಮಗ. ಅದ್ದರಿಂದ ರಾಜನಾಗಲಿಲ್ಲ. ಧೃತ ರಾಷ್ಟ್ರನಿಗೆ ರಾಜ್ಯಭಾರದಲ್ಲಿ ಸಹಾಯ ಮಾಡಿದ,' ಎಂದೆ.

ಸದ್ಯ, ರಾಣಿಗೂ ದಾಸಿಗೂ ಒಬ್ಬನೇ ಗಂಡನಾ ಮೇಡಂ? ಎಂದು ಯಾರೂ ಕೇಳಿರಲಿಲ್ಲ.

ಜೋರಾಗಿ ಗಂಟೆ ಬಡಿಯಿತು. 'ನಾಳೆ ಪಾಠ ಮುಂದುವರೆಸೋಣ,' ಎಂದೆಂದು ತರಗತಿಯಿಂದ ಹೊರಬಿದ್ದೆ.

ಮರುದಿನ ಪಾಠ ಮುಂದುವರೆಸಿದೆ:

"ದ್ರೋಣನು ಮುಂದೆ ಬಂದು ವಾದ್ಯಗಳನ್ನು ನಿಲ್ಲಿಸಿ ಘನ ಗಂಭೀರವಾದ ಧ್ವನಿಯಿಂದ, 'ಈಗ ನನ್ನ ಮಗನಿಗಿಂತ ಹೆಚ್ಚು ಪ್ರೀತಿಪಾತ್ರನೂ ಅಸ್ತ್ರವೇದಗಳಲ್ಲಿ ಅಗ್ರಗಣ್ಯನೂ ಇಂದ್ರ

ಪುತ್ರನೂ ಆದ ಅರ್ಜುನನ ಪ್ರದರ್ಶನ. ಅದನ್ನು ಎಲ್ಲರೂ ನೋಡಬೇಕು!' ಎಂದು ಕೂಗಿ ಹೇಳಿದನು.''

'ಅರ್ಜುನ ಪಾಂಡುರಾಜನ ಮಗ ಅಲ್ಲವಾ ಮೇಡಂ? ಇಂದ್ರಪುತ್ರ ಅಂತ ಯಾಕೆ ಕರೀತಾರೆ?' ಮೂರನೆಯ ಬೆಂಚಿನ ಬಟ್ಟಲುಗಣ್ಣುಗಳ ಹುಡುಗಿಯ ಪ್ರಶ್ನೆ.

ಇಂಥದ್ದನ್ನು ಈ ಎಳೆಯ ಮಕ್ಕಳಿಗೆ ಯಾಕಾದರೂ ಇಟ್ಟರೋ ಎನಿಸಿತು. ಪಾಂಡುವಿನ ನಿರ್ವೀರ್ಯತೆ, ಕುಂತಿಗಾದ ನಿಯೋಗಗಳನ್ನು ಕುರಿತು ಹೇಗೆ ಹೇಳಲಿ? ಎಂದು ಯೋಚಿಸಿದೆ.

'ಪಾಂಡುರಾಜ ಮತ್ತು ಕುಂತಿಗೆ ಮಕ್ಕಳಿರಲಿಲ್ಲ. ಆಗ ಇಂದ್ರನನ್ನು ಭಕ್ತಿಯಿಂದ ಪೂಜೆ ಮಾಡಿದರು. ನಿಮ್ಮ ಅಪ್ಪ-ಅಮ್ಮಂದಿರು ತಿರುಪತಿ ತಿಮ್ಮಪ್ಪನಿಗೋ, ಧರ್ಮಸ್ಥಳದ ಮಂಜುನಾಥನಿಗೋ ಹರಸಿಕೊಂಡು ನಿಮ್ಮನ್ನು ಪಡೆದದ್ದುಂಟು. ಹೋಗಿ ಕೇಳಿ, ತಿಳಿಯುತ್ತದೆ... ಆಗ ಕುಂತಿಗೆ ಹುಟ್ಟಿದವನೇ ಅರ್ಜುನ. ಅದ್ದರಿಂದ ಇವನಿಗೆ ಇಂದ್ರಪುತ್ರ ಅಂತ ಕರೀತಾರೆ ಅಷ್ಟೆ,' ಎಂದೆ. ಆ ಹುಡುಗಿಗೆ ಸಮಾಧಾನವಾಯಿತು.

ಪುಸ್ತಕ ಹಿಡಿದು ಮುಂದೆ ಓದುತ್ತ ಹೋದೆ:

"ಅರ್ಜುನನ ಪ್ರದರ್ಶನ ಕಾರ್ಯವು ಮುಗಿಯುತ್ತ ಬರಲು, ಜನರ ಸಂಭ್ರಮ ತಗ್ಗುತ್ತಿರಲು, ವಾದ್ಯ ಧ್ವನಿ ನಿಲ್ಲುತ್ತಿರಲು, ಬಾಗಿಲ ಹತ್ತಿರ ಹಠಾತ್ತಾಗಿ ಸಿಡಿಲಿನಂಥ ಭುಜಾಸ್ಫಾಲನವು ಕೇಳಿ ಬಂತು. ಇದೇನು! ಪರ್ವತ ಒಡೆಯಿತೋ ಭೂಮಿ ಸೀಳಿತೋ ಎಂದು ಎಲ್ಲರೂ ವಿಸ್ಮಿತರಾಗಿ ಬಾಗಿಲ ಕಡೆ ನೋಡಲು, ಸಹಜವಾದ ಕವಚ ಕುಂಡಲಗಳನ್ನು ಧರಿಸಿಕೊಂಡು ಕರ್ಣನು ಪಾದಚಾರಿಯಾದ ಪರ್ವತದಂತೆ ಆ ವಿಸ್ತಾರವಾದ ರಂಗಸ್ಥಳವನ್ನು ಪ್ರವೇಶ ಮಾಡಿದನು. ಅವನು ಕುಂತಿಯ ಮಗ; ಅವಳು ಇನ್ನೂ ಕನ್ಯೆಯಾಗಿದ್ದಾಗ ಸೂರ್ಯನ ಅಂಶದಿಂದ ಅವಳಲ್ಲಿ ಹುಟ್ಟಿದವನು. ಸಿಂಹದಂತೆ ಪರಾಕ್ರಮಶಾಲಿ; ಸೂರ್ಯನಂತೆ...''

'ಟೀಚರ್, ಕನ್ಯೆ ಎಂದರೇನು?' ಪುಟ್ಟ ಹುಡುಗಿಯೊಬ್ಬಳು ಕೇಳಿದಳು.

ನನಗೆ ನಗು ಬಂತು. 'ಕನ್ಯೆ ಎಂದರೇನೆಂದು ಗೊತ್ತಿಲ್ಲವೇನಮ್ಮಾ ನಿನಗೆ? ಕನ್ಯೆ ಎಂದರೆ ಚಿಕ್ಕ ಹುಡುಗಿ-ಅಂದರೆ ಮದುವೆಯಾಗದವಳು ಅಂತ.' 'ಮಗುವಿನಂತಿದ್ದ ಅವಳ ಮುಖ ನೋಡುತ್ತ ನೋಡುತ್ತ, 'ನೀನು ಕನ್ಯೆ,' ಅಂದೆ.

ಪಕ್ಕದಲ್ಲಿ ಕುಳಿತಿದ್ದ ಹುಡುಗಿ, 'ಮದುವೆಯಾದರೆ ಅಲ್ವಾ ಮೇಡಂ ಮಕ್ಕಳಾಗೋದು? ಮತ್ತೆ ಕನ್ಯೆ ಆಗಿದ್ದ ಕುಂತೀಗೆ ಹೇಗೆ ಮಗ ಹುಟ್ಟಿದ?' ಎಂದು ಕೇಳಿದಳು.

ನನಗೆ ಗೊಂದಲವಾಯಿತು. ಮಹಾಭಾರತದ ಸಿಕ್ಕನ್ನು ಈ ಮಕ್ಕಳಿಗೆ ಹೇಳುವುದು ಹೇಗೆ? ಹೇಳಿದರೂ ಎಷ್ಟು ಅರ್ಥವಾದೀತು? ಏನೆಂದು ಉತ್ತರಿಸಲಿ? ಹತ್ತಿರದಲ್ಲಿದ್ದ ಕುರ್ಚಿಯ ಮೇಲೆ ಕೂತೆ. ಪ್ರಶ್ನೆ ಕೇಳಿದ ಹುಡುಗಿ ನಿಂತೇ ಇದ್ದಾಳೆ. ಎಲ್ಲ ಮಕ್ಕಳೂ ನನ್ನ ಮುಖವನ್ನೇ ನೋಡುತ್ತಿವೆ.

'ಕುಂತಿ ಇನ್ನೂ ಚಿಕ್ಕವಳಿದ್ದು ಕನ್ಯೆಯಾಗಿದ್ದಾಗ ತಂದೆಯ ಮನೆಯಲ್ಲಿದ್ದಳು. ಒಂದು ಸಾರಿ ದೂರ್ವಾಸ ಋಷಿಗಳು ಅವರ ಮನೆಗೆ ಬಂದಿದ್ದರು. ಆಗ ಕುಂತಿ ಅವರನ್ನು ಚೆನ್ನಾಗಿ ನೋಡಿಕೊಂಡಳು. ಅದಕ್ಕೆ ಅವರನ್ನು ಸಂತೋಷದಿಂದ ಅವಳಿಗೆ ವರಗಳನ್ನು ಕೊಟ್ಟರು. ಅವರು ಅಲ್ಲಿಂದ ಹೋದ ಮರುದಿನ ಬೆಳಗ್ಗೆ ಕುಂತಿ ನದೀ ತೀರಕ್ಕೆ ಹೋದಾಗ ಆಗ ತಾನೇ ಹುಟ್ಟಿ ಬರುತ್ತಿದ್ದ ಕರುಬೂಜದ ಹೋಳಿನಂಥ ಸೂರ್ಯನನ್ನು ನೋಡಿ, ಎಷ್ಟು ಚೆನ್ನಾಗಿದ್ದಾನೆ ಎಂದುಕೊಂಡಳು. ಅವಳಿಗೆ ದೂರ್ವಾಸರು ಕೊಟ್ಟಿದ್ದ ವರಗಳ ನೆನಪು ಬಂದು ಸೂರ್ಯನಂತಹ ಮಗುವೊಂದು ಇದ್ದರೆ...ಎಂದುಕೊಂಡಳು. ದಿನವೂ ನದೀ ತೀರಕ್ಕೆ ಬಂದು ಸೂರ್ಯನನ್ನು ಕುರಿತು ಮಂತ್ರ ಹೇಳುತ್ತಿದ್ದಳು. ಸೂರ್ಯನ ಪ್ರಭಾವದಿಂದ ಅವಳಿಗೊಂದು ಮುದ್ದು ಮಗು ಹುಟ್ಟಿತು,' ವಿಜ್ಞಾನದ ಉಪಾಧ್ಯಾಯಿನಿಯಾದ ನಾನು ಹೀಗೆ ವಿವರಣೆ ಕೊಟ್ಟೆ!

'ಹಾಗಾದ್ರೆ ಸೂರ್ಯನ್ನ ನನಗೂ ಮಗು

ಕೊಡು ಅಂತ ಪ್ರಾರ್ಥನೆ ಮಾಡಿದ್ರೆ ನನಗೂ ಮಗು ಹುಟ್ಟುತ್ತಾ ಮೇಡಂ?' ಪುಟ್ಟ ಹುಡುಗಿಯೊಬ್ಬಳು ಕೇಳಿದಳು. ನಾನು ಜೋರಾಗಿ ನಕ್ಕೆ. ಇನ್ನೂ ಕೌಮಾರ್ಯಾವಸ್ಥೆಯನ್ನೇ ದಾಟದಿದ್ದ ಆ ಹುಡುಗಿಗೆ ಹೀಗೆಂದೆ:

'ಇಲ್ಲ ಮಗು. ನಿನಗೆ ದೂರ್ವಾಸರಂಥವರು ಯಾರೂ ವರ ಕೊಟ್ಟಿಲ್ಲವಲ್ಲ!' ಅವಳೂ ನಗುತ್ತ ಕೂತಳು.

'ಮತ್ತೆ, ಕುಂತಿ ಯಾಕೆ ಆ ಮುದ್ದು ಮಗೂನ್ನ ನೀರಿಗೆ ಹಾಕಿದ್ಲು? ಮನೆಗೆ ಯಾಕೆ ತೆಗೆದು ಕೊಂಡು ಹೋಗಲಿಲ್ಲ? ಹೀಗೆ ಮಾಡಿದೆ ಅಂತ ಅವರ ಅಪ್ಪ-ಅಮ್ಮನಿಗೆ ಹೇಳಬಹುದಾಗಿತ್ತು ಅಲ್ವಾ ಟೀಚರ್...' ನನ್ನೆದುರಿಗೆ ಕುಳಿತಿದ್ದ ಹುಡುಗಿ ಮೇಲೆದ್ದು ನಿಂತು ಕೇಳಿದಳು.

ನನಗೆ ತಲೆ ಚಚ್ಚಿಕೊಳ್ಳಬೇಕೆನಿಸಿತು. ಕುಂತಿಯ ಸಂಕಟ, ದುಃಖ ಹೇಗೆ ಹೇಳಲಿ ಇವರಿಗೆ?

ಈ ವಯಸ್ಸಿನಲ್ಲಿ ಮಕ್ಕಳಿಗೆ ಈ ಪಾಠ ಇಟ್ಟ ಶಿಕ್ಷಣವೇತ್ತರುಗಳ ಮೇಲೆ, ಪಾಠಮಾಡ ಬೇಕಾಗಿ ಬಂದ ನನ್ನ ಮೇಲೇ ನನಗೆ ಸಿಟ್ಟು ಬಂತು. ಅವೆಲ್ಲವನ್ನೂ ಅಸಹಾಯಕಳಾದ ಈ ಕುಂತಿಯ ಮೇಲೆ ಕಾರಿದೆ;

'ಹೌದು ಮಗು, ಕುಂತಿ ಹಾಗೆ ಮಾಡ ಬಾರದಿತ್ತು. ಅವಳು ಮಗುವನ್ನು ಮನೆಗೆ ತೆಗೆದುಕೊಂಡು ಹೋಗಿ ನೀನಂದ ಹಾಗೇ ಹೇಳ ಬಹುದಿತ್ತು. ಅವಳು ತಪ್ಪು ಮಾಡಿದಳು,' ಎಂದೆ. ಧ್ವನಿ ನನ್ನದಲ್ಲವೆನಿಸಿತು.

'ಆ ಮುದ್ದು ಕಂದಮ್ಮನ್ನ ಹೇಗೆ ಬಿಟ್ಟಳೋ ನೀರಿಗೆ? ಅಯ್ಯೋ ಪಾಪ...' ಎಂಬ ಉದ್ಗಾರ ಗಳು ಕೇಳಿಸಿದುವು.

ಪಾಠ ಮುಂದುವರಿಸಿದೆ. ವಿವರಣೆ ಕೊಡುತ್ತ, ಯಾವಾಗ ಎಂಥ ಪ್ರಶ್ನೆ ಬಂದೀತೋ ಎಂದು ನಿರೀಕ್ಷಿಸುತ್ತ ಮುಂದೆ ಸಾಗಿದೆ. ಪಾಠ ಮುಗಿ ಯುತ್ತಲಿತ್ತು. ಇನ್ನು ಕೇವಲ ಒಂದು ಪ್ಯಾರಾ ಮಾತ್ರ ಉಳಿದಿದೆ. ಸ್ವಲ್ಪ ಸಂತೋಷ ಎನಿಸಿತು.



"ದ್ರೋಣನು ಯುದ್ಧಕ್ಕೆ (ಕರ್ಣ ಮತ್ತು ಅರ್ಜುನರ ನಡುವೆ) ಸಮ್ಮತಿಸಿದನು. ಪಾಂಡವರು ಅರ್ಜುನನ್ನು ಆಲಂಗಿಸಿ ಕಳುಹಿಸಿಕೊಟ್ಟರು. ಅಷ್ಟು ಹೊತ್ತಿಗೆ ಆಕಾಶದಲ್ಲಿ ಮೋಡಗಳು ಕವಿದುಕೊಳ್ಳಲು, ಅರ್ಜುನನ ಮೇಲೆ ಸೂರ್ಯನ ಬೆಳಕು ಬಿದ್ದಿದ್ದುವು. ರಂಗವೆಲ್ಲವೂ ಅರ್ಜುನನ ಪಕ್ಷ ಒಂದು. ಕರ್ಣನ ಪಕ್ಷ ಒಂದು ಹೀಗೆ ಎರಡು ಪಕ್ಷಗಳಾಗಿ ಒಡೆಯಿತು ಕೌರವರೆಲ್ಲಾ ಕರ್ಣನ ಪಕ್ಷ; ಭೀಷ್ಮ, ದ್ರೋಣ. ಕೃಪರು ಅರ್ಜುನನ ಪಕ್ಷ. ಕುಂತಿಯು ಕರ್ಣಾರ್ಜುನರಿಗೆ ಕಾಳಗವಾಗುವುದೆಂದು ಕೇಳಿ ಮೂರ್ಛೆಹೋದಳು; ವಿದುರನು ಶೈತ್ಯೋಪಚಾರದಿಂದ ಅವಳನ್ನು ಎಚ್ಚರಗೊಳಿಸಿದನು..."

'ಅಯ್ಯೋ ಪಾಪ! ಈಗಲಾದರೂ ಅವಳು, 'ಕರ್ಣ ನನ್ನ ಮಗ ಅಂತ ಹೇಳಿದ್ದರೆ ಆಗಿತ್ತು ಅಲ್ವಾ ಮೇಡಂ?'

'ಹೌದು ಮಗು. ಹೇಳಿದ್ದರೇ ಚೆನ್ನಾಗಿತ್ತು ಅಂತ ನನಗೂ ಅನ್ನಿಸುತ್ತೆ,' ಅಂದೆ. ಕುಂತಿಯ ಸಂಕಟ, ಒಡಲುರಿ ಈ ಕಂದಮ್ಮಗಳಿಗೆ ಹೇಗೆ ಅರ್ಥವಾದೀತು ?

'ವಿದುರ ಒಳ್ಳೆಯವನು.' ಒಬ್ಬ ಹುಡುಗಿ ಅಂದಳು.

'ಅವರಮ್ಮನೂ ಕನ್ಯೆಯಾಗಿದ್ದಾಗಲೇ ಅವನು ಹುಟ್ಟಿದ್ದು ಅದಕ್ಕೇ ಇರಬೇಕು ಅವಳನ್ನು ಕಂಡರೆ ಅವನಿಗೆ ಕನಿಕರ,' ಮತ್ತೊಬ್ಬಳ ಉತ್ತರ.

ಪಾಠ ಮುಂದುವರಸಿದೆ:

"ಆಗ ದ್ವಂದ್ವಯುದ್ಧದ ಸಂಪ್ರದಾಯವನ್ನೆಲ್ಲ ಬಲ್ಲ ಕೃಪನು ಮುಂದೆ ಬಂದು, 'ಇಗೋ, ಈತ ಪೃಥೆಯು ಮತ್ತು ಪಾಂಡುವಿನ ಮಗನಾದ ಅರ್ಜುನ; ನೀನು ಯಾರು? ನಿನ್ನ ವಂಶ-ವಾವುದು? ತಾಯಿ ತಂದೆಗಳು ಯಾರು? ಇದನ್ನು ತಿಳಿದು ಅರ್ಜುನನು ನಿನ್ನೊಡನೆ ಯುದ್ಧ ಮಾಡಬೇಕೋ ಬೇಡವೋ ಎಂಬುದನ್ನು ನಿರ್ಧರಿಸುತ್ತಾನೆ,' ಎಂದು ಕರ್ಣನನ್ನು ಕುರಿತು ಹೇಳಲು ಅವನು ನಾಚಿಕೆಯಿಂದ ಮುಖ ತಗ್ಗಿಸಿದನು."

'ಅಯ್ಯೋ... ಕರ್ಣ, ಕುಂತಿ ಎಷ್ಟು ಕೆಟ್ಟವಳು! ಅವಳು ತಾಯೀನಾ ಮೇಡಂ? ಥೂ! ಅವಳೀಗಲಾದ್ರೂ ಹಿಂದಿಂದೆಲ್ಲಾ ಹೇಳಿದ್ದರೆ ಕರ್ಣನಿಗೆ ಎಷ್ಟು ಸಂತೋಷವಾಗ್ತಿತ್ತು! ತುಂಬ ಕೆಟ್ಟವಳು ಕುಂತಿ...' ನಾಲ್ಕಾರು ಕಂಠಗಳು ಗೊಣಗಿದುವು.

ಪಾಠದ ಅಂತ್ಯಕ್ಕೆ ಬಂದೆ. ದುರ್ಯೋಧನ ಕರ್ಣನಿಗೆ ಪಟ್ಟಾಭಿಷೇಕ ಮಾಡಿ ಅವನನ್ನು ರಾಜನನ್ನಾಗಿ ಮಾಡಿದನೆಂದು ಹೇಳಿದೆ.

'ದುರ್ಯೋಧನ ಎಷ್ಟು ಒಳ್ಳೆಯವನು! ಕುಂತಿ ಅವನಿಗೆ ಕೃತಜ್ಞಳಾಗಿರಬೇಕು.'

'ಅವನು ತುಂಬಾ ದೊಡ್ಡ ಮನುಷ್ಯ...' ಇನ್ನೂ ಏನೇನೋ ಮಾತುಗಳು ಕೇಳಿಬರುತ್ತಿದ್ದವು.

ಗಂಟೆ ಜೋರಾಗಿ ಒಡೆಯಿತು. 'ಇಲ್ಲಿಗೆ ಈ ಪಾಠ ಮುಗಿಯಿತು' ಎಂದು ಹೇಳಿ ತರಗತಿಯಿಂದ ಹೊರಟೆ.

---

ಮದ್ರಾಸ್ ಹೈಕೋರ್ಟಿನ ನ್ಯಾಯಾಧೀಶರು ಪ್ರಸಿದ್ಧ ವಕೀಲರೊಬ್ಬರನ್ನು ಜಡ್ಜರ ಹುದ್ದೆ ಸ್ವೀಕರಿಸಲು ಕೇಳಿಕೊಂಡರು.

ಆ ವಕೀಲರು ಜಡ್ಜರ ಹುದ್ದೆಯನ್ನು ಸ್ವೀಕರಿಸಲು ತಮ್ಮ ಅಸಮರ್ಥತೆಯನ್ನು ವ್ಯಕ್ತಪಡಿಸುತ್ತಾ, "ಜಡ್ಜ್ ಹುದ್ದೆ ಸ್ವೀಕರಿಸಿ ದಿನ ಪೂರ್ತಿ ಅವರಿವರ ವ್ಯರ್ಥ ಮಾತುಗಳನ್ನು ಕೇಳುವುದಕ್ಕೆ ಬದಲಾಗಿ, ನಾನು ದಿನದ ಕೆಲ ಹೊತ್ತು ಮಾತ್ರ ವ್ಯರ್ಥ ಮಾತುಗಳನ್ನಾಡಲು ಹೆಚ್ಚು ಇಚ್ಛೆ ಪಡುತ್ತೇನೆ," ಎಂದು ಬರೆದಿದ್ದರು.

ಈ ಪ್ರಖ್ಯಾತ ವಕೀಲರೇ ಶ್ರೀ ಸಿ. ಪಿ. ರಾಮಸ್ವಾಮಿ ಅಯ್ಯರ್‌ರವರು!

—ಎಸ್. ವಿಶ್ವನಾಥ

# ಕೆಲವು ವಸ್ತುಗಳು ನಮ್ಮ ಜೀವನದಲ್ಲಿ ಎಷ್ಟು ದೃಢವಾಗಿ ಉಳಿಯುತ್ತವೆಂದರೆ, ನೂರು ವರ್ಷಗಳು ಕಳೆದರೂ ಬಿಟ್ಟು ಹೋಗುವುದಿಲ್ಲ.




ನೂರು ವರ್ಷಗಳ ಹಿಂದೆ ಒಂದು ಸಂಪ್ರದಾಯ ಉದಯವಾಯಿತು. ಅದು, ಜಗತ್ತಿನಾದ್ಯಂತ ಹರಡಿ, ಮನೆ-ಮನೆಗಳನ್ನೂ ಬೆಳಗಿತು. ತಾಯಿಯಿಂದ ಮಗಳಿಗೆ ಅದು ಕುಲಧನವಾಗಿ ಬಂತು. ಅದನ್ನು ಸನ್‌ಲೈಟ್ ಎಂದು ಕರೆದರು. ಕಾಲ ಬದಲಾಯಿತು. ಆದರೆ, ಸನ್‌ಲೈಟ್ ಸಂಪ್ರದಾಯ ಬದಲಾಗಲಿಲ್ಲ. ಅದರ ಶುದ್ಧತೆ ಮತ್ತು ಸೌಮ್ಯತೆ ಅಂದಿನಂತೆ ಇಂದೂ ಇವೆ. ಈ ಸಂಪ್ರದಾಯವನ್ನು ಶತ-ಶತಮಾನಗಳಲ್ಲಿಯೂ ಹೀಗೆಯೇ ಉಳಿಸಿಕೊಳ್ಳಲು ನಾವು ಸಂಕಲ್ಪ ಬದ್ಧರಾಗಿದ್ದೇವೆ. !

## ಸನ್‌ಲೈಟ್ ಸಾಬೂನು 100 ವರ್ಷಗಳ ವಿಶ್ವಾಸಪೂರ್ಣ ಪರಂಪರೆ

ಬಂದಾಗ ಜಗತ್ತಿನ ಉದ್ಧಾರ ಹೇಗೆ ಸಾಧ್ಯ?

# ಇಂಥವರೂ ಇದ್ದಾರೆ

**ಡಾ. ಎ. ಚಂದ್ರಶೇಖರ ಉಡುಪ**

ನನ್ನ ಅಜ್ಜಿ ಹೇಳುತ್ತಿದ್ದ ಸ್ವಾರಸ್ಯಕರ ಕತೆ ಹೀಗಿದೆ: "ಒಂದೂರಿನಲ್ಲಿ ಒಬ್ಬ ರಾಜನಿಗೆ ಇಬ್ಬರು ಹೆಂಡಂದಿರು. ಒಬ್ಬಾಕೆ ಆತನಿಗಿಂತ ಹತ್ತು ವರ್ಷ ದೊಡ್ಡವಳಾದರೆ ಮತ್ತೊಬ್ಬಳು ಹತ್ತು ವರ್ಷ ಚಿಕ್ಕವಳು. ಮದುವೆಯಾದ ಕೆಲವೇ ವರ್ಷಗಳಲ್ಲಿ ರಾಜನ ತಲೆ ಬೋಳಾಗಿ ಹೋದುದು ವಿಚಿತ್ರವಾದರೂ ನಿಜ. ಒಳಗುಟ್ಟಿಷ್ಟೇ:- ಪ್ರಾಯದಲ್ಲಿ ದೊಡ್ಡವಳಾದ ಪತ್ನಿ ರಾಜನ ಕಪ್ಪು ತಲೆಗೂದಲನ್ನೆಲ್ಲ ರಾತ್ರಿ ವಿಲಾಸ ಶಯ್ಯೆಯಲ್ಲಿ ಮಲಗಿದಾಗ ಒಂದೊಂದಾಗಿ ಕಿತ್ತು ತೆಗೆಯುತ್ತಿದ್ದಳಂತೆ. ಕಿರಿಯ ಸತಿ ರಾಜನ ತಲೆಯಲ್ಲಿರುವ ಕೆಲವೇ ಕೆಲವು ಬಿಳಿಗೂದಲನ್ನು ಕಂಡು ರೋಷಗೊಂಡು ಅದೇ ರೀತಿಯಲ್ಲಿ ಒಂದೊಂದಾಗಿ ಕೀಳುತ್ತಿದ್ದಳಂತೆ."

ಇಲ್ಲಿ ಮನನ ಮಾಡಬೇಕಾದ ಮುಖ್ಯ ವಿಚಾರ ಹೀಗಿದೆ – ರಾಜನಿಗಿಂತ ವೃದ್ಧಳಾದ ರಾಣಿಗೆ ತನ್ನ ಪತಿ ಎಳಬನಾಗಿ ಕಾಣಬಾರದೆಂಬುದು ಆಸೆಯಾದರೆ, ರಾಜನಿಗಿಂತ ಕಿರಿಯಳಾದ ರಾಣಿಗೆ ಆತ ಹಳಬನಾಗಿ ಕಾಣಬಾರದೆಂಬ ಆಸೆ! ರಾಜನಿಗೋ ಇಬ್ಬರೂ ಬೇಕಾದವರು! ಹಾಗಾಗಿ ಯಾರನ್ನೂ ದೂರದೆ ತನ್ನ ರಾಜಾರೋಷಕ್ಕೆ ತಿಲಾಂಜಲಿ ಕೊಟ್ಟು ಇಬ್ಬರ ಕೆಲಸಕ್ಕೂ ತಲೆ ದೂಗದೆ ವಿಧಿಯಿರಲಿಲ್ಲ.

ಜೀವನದಲ್ಲಿ ಇಂಥ ಆಗು ಹೋಗುಗಳು ಸರ್ವೇಸಾಮಾನ್ಯ. ಒಬ್ಬನೇ ವ್ಯಕ್ತಿಯ ಆಚಾರ-ವಿಚಾರ, ರೀತಿ-ನೀತಿ, ವ್ಯವಹಾರ-ವ್ಯವಸ್ಥೆಗಳು ಬೇರೆ ಬೇರೆ ಸಂದರ್ಭಗಳಲ್ಲಿ, ಬೇರೆ ಬೇರೆ ಸನ್ನಿವೇಶಗಳಲ್ಲಿ ತೀರ ವ್ಯತಿರಿಕ್ತವಾಗಿರುವುದು ವಿಶೇಷವೇನಲ್ಲ. ಮನೆಯಲ್ಲಿ ಮಂಚದ ಮೇಲಿನ ದಪ್ಪ ಡನ್‌ಲಪ್ ಹಾಸಿಗೆಯಲ್ಲಿ ಮಲಗಿದಾಗ ಮಾತ್ರ ನಿದ್ರೆ ಬರುವ ವಿದ್ಯಾರ್ಥಿಯನ್ನು ಕಡ್ಡಾಯ ಎನ್.ಸಿ.ಸಿ. ಕ್ಯಾಂಪಿಗೆ ತಳ್ಳಲ್ಪಟ್ಟಾಗ, ಆತ ಬರಿಯ ನೆಲದಲ್ಲಿ ಹಾಸಿದ ಒರಟು ಬಟ್ಟೆಯ ಮೇಲೆಯೋ ನಿದ್ರಿಸಬೇಕಾಗುತ್ತದೆ. ಇದು ಸಣ್ಣ ವಿಚಾರವಾದರೆ, ವ್ಯಾವಹಾರಿಕ ಜಗತ್ತಿನ ಒಡನಾಟದಲ್ಲಿ ತಮ್ಮ ನಡೆ-ನುಡಿ, ನೀತಿ-ನಿಯಮ, ಧ್ಯೇಯೋದ್ದೇಶಗಳನ್ನು ಎಲ್ಲೆಂದರಲ್ಲಿ ಹೇಗೆಂದರೆ ಹಾಗೆ ಬದಲಿಸುವ ಜನರನ್ನು ಕಾಣುವುದು ಅಪರೂಪವೇನಲ್ಲ. ವೈಯಕ್ತಿಕ ಇಚ್ಛೆಗೆ ವಿರುದ್ಧವಾಗಿ, ಮೇಲಿನ ಕತೆಯಲ್ಲಿ ರಾಜನು ಪೌರುಷರಹಿತನಾಗಿ ತೆಪ್ಪಗಿದ್ದಂತೆ ಹಲವು ಬಾರಿ ಪರಿಸ್ಥಿತಿಯ ಕೈಗೊಂಬೆಯಾಗಿಯೋ ಇನ್ನಿತರ ಕಾರಣಗಳಿಂದಾಗಿಯೋ ಮಾನವ ತೀರ ವಿಲಕ್ಷಣವಾಗಿ ವರ್ತಿಸುವುದುಂಟು.

## ವ್ಯಾಪಾರಿ (ಕು)ತಂತ್ರ

ಸುಬ್ರಾಯ ನಮ್ಮೂರಿನ ಪ್ರಸಿದ್ಧ ಜವಳಿ

ವ್ಯಾಪಾರಿ. ಊರಿನ ಪ್ರಮುಖ ಮಾರುತಿ ದೇವಾಲಯದ ಬಳಿಯೇ ಅವನ ಅಂಗಡಿಯಿದೆ. ಮಾರುತಿ ದೇವರೆದುರು ಉರಿಯುವ ನಂದಾದೀಪಗಳ ಖರ್ಚನ್ನೆಲ್ಲ ಇವನ ಕುಟುಂಬದವರೆ ಬಹುಕಾಲದಿಂದಲೂ ವಹಿಸುತ್ತಿದ್ದಾರಂತೆ.ವರ್ಷಕ್ಕೆ ನಾಲ್ಕು ಬಾರಿ ಜವಳಿ ಖರೀದಿಯ ಬಗ್ಗೆ ಲಕ್ಕಿ ಡಿಪ್ ವ್ಯವಸ್ಥೆ ಅವನಲ್ಲಿದೆ. ರಿಬೇಟ್ ವರದ ಸೌಕರ್ಯವಂತೂ ಇದ್ದೇ ಇದೆ. ಅವನ ಮಗ ವಿವೇಕ ನನ್ನ ಬಾಲ್ಯ ಸ್ನೇಹಿತ. ತಂದೆಯ 'ಒಳ' ವ್ಯವಹಾರಗಳನ್ನೆಲ್ಲ ತನ್ನ ಚೂಟಿ ಬುದ್ಧಿಯಿಂದ ಚಿಕ್ಕಂದಿನಲ್ಲೆ ಅರಿತ ಇವನಿಗೆ ಅವು ಹಿಡಿಸುತ್ತಿರಲಿಲ್ಲ. ತಂದೆಗಿಂತಲೂ ಅವನಿಗೆ ನನ್ನ ಮೇಲೆ ಆತ್ಮೀಯತೆ ಜಾಸ್ತಿಯಾದುದು ನಿಜವಾಗಿಯೂ ವಿಚಿತ್ರವೆ! "ನಮ್ಮ ಅಂಗಡಿಗೆ ಚಿಕ್ಕ ಕರವಸ್ತ್ರಕ್ಕಾದರೂ ನೀನು ಬರಬೇಡ ಕಣೋ. ನಮ್ಮಪ್ಪನದ್ದು ಬರಿ ಮೋಸದ ವ್ಯವಹಾರ. ನಿನ್ನಂಥ ಸರಳತೆಯ ಸಾಚಾ ಆದರ್ಶದವರು, ಶತದಡ್ಡರಾಗಿ ಅವರಿಗೆ ಕಂಡುಬಂದು, ಸುಲಭದಲ್ಲಿ 'ಟೊಪ್ಪಿ' ಹಾಕುತ್ತಾರಯ್ಯಾ–ಜೋಕೆ!" ಎನ್ನುತ್ತಾನವನು! ಅವರೂ ಸ್ನೇಹಿತನ ಅಂಗಡಿಯೆಂಬ ಅಭಿಮಾನದಿಂದ ನನ್ನ ಸಂಬಂಧಿಕರನ್ನಲ್ಲಿಗೆ ಕರೆದೊಯ್ದು ಹಲವು ಬಾರಿ ನಾನು ಮೋಸ ಹೋದದ್ದುಂಟು. "ಲುಂಗಿ ಒಗೆಯುವುದೇನು ಬಂತು ಸಾರ್... ನೀರಿನಲ್ಲೇ ದಿನಗಟ್ಟಲೆ ಮುಳುಗಿಸಿಡಿ ಬೇಕಾದರೆ. ಸ್ವಲ್ಪವೂ ಬಣ್ಣ ಬಿಡೋಲ್ಲ," ಎಂದು ಹೇಳಿ ಪ್ರಥಮ ಬಾರಿಗೆ ನೀರು ಸೋಂಕಿದಾಗಲೆ ಬಣ್ಣ ಬಿಟ್ಟು ಚಿತ್ರ ವಿಚಿತ್ರವಾಗಿತ್ತು! "ಹೊಸ ಸೀರೆ! ಬನಾರಸ್ ರೇಶ್ಮೆ! ಈಗ ತಾನೇ ಪಾರ್ಸೆಲ್ಲಿನಿಂದ ಬಿಚ್ಚಿದ್ದು..." ಎಂಬುದು ಮನೆಗೆ ತಂದು ನೋಡಿದಾಗ, ನೂರಾರು ಚುಕ್ಕೆ ಚುಕ್ಕೆಗಳಾಗಿದ್ದು ನಕ್ಷತ್ರಗಳ ಡಿಸೈನ್ ತೋರಿಸುತ್ತಿತ್ತು. "ಮಧುರೈ ವೇಸ್ಟಿ, ಫೈನ್ ಕ್ವಾಲಿಟಿ. ಒಮ್ಮೆ ಒಗೆದೊಡನೆ ನಯ ಬರುತ್ತೆ... ಹಾಗಾಗಿ ಒಗೆದೇ ಉಡಿ ಸ್ವಾಮಿ," ಎಂದುದು ನೀರಿನಲ್ಲಿ ಅದ್ದಿ ಅಂಟಿಸಿದ ಹನುಮಂತನ ಚಿತ್ರವಿರುವ ಚೀಟಿಯನ್ನು ಹರಿದಾಗಲೆ ಅದರಡಿಯಿರುವ ಹರಕೊಂದನ್ನು ಕಂಡು ಗಾಬರಿಪಟ್ಟಿದ್ದೆವು! "ಏನು ಸಾಹುಕಾರ ಸುಬ್ರಾಯರೇ, ನೀವು ಇಂಥ ಕೆಳದರ್ಜೆಯ ಮಾಲನ್ನು ಮಾರಿ ಮೋಸ ಮಾಡಿಬಿಟ್ಟಿರಲ್ಲಾ..." ಎಂದು ನಮ್ರತೆಯಿಂದ ಕೇಳಿದಾಗ ಬಿರುಸು ದನಿಯಲ್ಲಿ ಆತ ಹೇಳುವುದಿಷ್ಟೆ: "ನೋಡಿ ಸರ್, ದಿನಕ್ಕೆ ನೂರಾರು ಜನ ನಮ್ಮಲ್ಲಿ ಬಟ್ಟೆ ಖರೀದಿಸುತ್ತಾರೆ. ಯಾರೂ ಈ ರೀತಿಯ ಅಸಂಬದ್ಧ ಪುಕಾರನ್ನು ಇಷ್ಟರವರೆಗೆ ಮಾಡಿದ್ದಿಲ್ಲ. ಅಂಥ ಮೋಸದ ದುಡ್ಡು ನನಗೆ ಬೇಡ. ಆ ಆಂಜನೇಯನಿಗೆ ಒಂದು ಡಜನ್ ನಂದಾದೀಪಗಳನ್ನು ಕಳೆದ ನೂರು ವರ್ಷಗಳಿಂದಲೂ ಹಚ್ಚುತ್ತಿರುವ ನಮ್ಮ ಕುಟುಂಬದವರು ಎಷ್ಟು ಸತ್ಯವಂತರೆಂಬುದು ಆ ದೇವರಿಗೇ ಗೊತ್ತು. ನೋಡಿ, ಕೈಮುಗಿದು ಕೇಳುತ್ತೇನೆ–ನೀವು ಇಂಥ ಅಪವಾದ ಹೊರಿಸುವುದಾದರೆ ನಮ್ಮಲ್ಲಿಗೆ ವ್ಯಾಪಾರಕ್ಕೆ ಇನ್ನು ಮುಂದೆ ಬರಬೇಡಿ!" ಎಂಬುದಾಗಿ!

ಈ ಬಗ್ಗೆ ಮಿತ್ರ ವಿವೇಕನಿಗೂ ಒಮ್ಮೆ ತುಂಬಾ ವ್ಯಥೆಯಾಗಿ ತನ್ನ ತಂದೆಯ ವ್ಯಾಪಾರಿ (ಕು)ತಂತ್ರಗಳೆಲ್ಲವನ್ನೂ ಹೇಳಿದ್ದ–"ಸಮಾಜದಲ್ಲಿ ಸಾಧು ಸ್ವಭಾವದ ಯಾರೇ ಅಂಗಡಿಗೆ ಬಂದರೂ ಇದೇ ರೀತಿ ಮೋಸದಿಂದಲೇ ತಂದೆ ವ್ಯವಹರಿಸುತ್ತಾರೆ. ಒಮ್ಮೆ ವ್ಯಾಪಾರ ಮಾಡಿದ ಮೇಲೆ ಮೋಸದ ಬಗ್ಗೆ ದೂರು ತಂದವರಿಗೆ ಇನ್ನು ಬರಬೇಡಿ ಎಂದು ಹೇಳುವುದರೊಂದಿಗೆ ಮಾರುತಿ ದೇವರಿಗೆ ಕೊಡುವ ಸೇವೆಯ ಬಗ್ಗೆ ಆತ್ಮಶ್ಲಾಘನೆ ಮಾಡಿಕೊಳ್ಳುವುದೇ ಅವರ ಸಂಪ್ರದಾಯ. ಅಂಗಡಿಯ ಎದುರಿರುವ ಬೋರ್ಡಿನಲ್ಲಿದ್ದಂತೆ ಶೇಕಡಾ ೭೫ ರಿಯಾಯಿತಿ ವ್ಯಾಪಾರ ಆದರೆ ಶೇಕಡಾ ೧೫೦ ರಷ್ಟು ಬೆಲೆ ಏರಿಸಿಕೊಂಡು, ಶೇಕಡಾ ೭೫ರಷ್ಟು ರಿಯಾಯಿತಿ ಕೊಡುವುದರಲ್ಲಿ ವಿಶೇಷವೇನಿದೆ ಹೇಳು?

"ಜನ ನೋಡಿ ನನ್ನ ತಂದೆ ಇನ್ನಷ್ಟು ರಿಯಾಯಿತಿ ಕೊಡುವುದೂ ಇದೆ! ರಿಬೇಟ್ ವ್ಯಾಪಾರ. ಇಂದು ಕಡೇ ದಿನ–ಗಮನಿಸಿ, ಎಂಬ ಬೋರ್ಡು ವಿಚಲಿತವಾಗದೆ ವರ್ಷಪೂರ್ತಿ ಅಲ್ಲಿಯೆ ಇರುವುದು ಮತ್ತೊಂದು

ಗುಟ್ಟು. ಹೊರ ಊರಿನಿಂದ ಅಥವಾ ಆಸುಪಾಸಿನ ಹಳ್ಳಿಗಳಿಂದ ಬಂದವರಿಗೆ ಇಂದಿನ ಕೊನೆಯ ಸದವಕಾಶವನ್ನು ಕಳೆದುಕೊಳ್ಳಬಾರದೆಂಬ ಆಸೆ ಹುಟ್ಟಿ ವ್ಯಾಪಾರಕ್ಕೆ ಬಂದೇ ಬರುತ್ತಾರೆ. ನಾವು ಹೋಲ್‌ಸೇಲ್ ಖರೀದಿಸುವಾಗ ಬಟ್ಟೆಯ ಕಂತೆಯೊಟ್ಟಿಗೆ ಬಂದ ಹರಿದ ಬಟ್ಟೆಗಳನ್ನು ದಾಟಿಸುವ ಅಪ್ಪನ ಕ್ರಮ ಮಾತ್ರ ವಿಶಿಷ್ಟವಾದದ್ದು—ಹೀರ ಮಾರುತಿಯ ಪಾಕೆಟ್ ಡೈರಿ ಗಾತ್ರದ ಸುಂದರ ಚಿತ್ರದ ಮೇಲೆ ಮಳಿಗೆಯ ಹೆಸರನ್ನು ಮುದ್ರಿಸಿ, ಹರಿದ ಜಾಗದಲ್ಲಿ ಗಟ್ಟಿ ಅಂಟಿನಿಂದ ತಮ್ಮ ಕೈಯ್ಯಾರೆ ಅಂಟಿಸಿಡುತ್ತಾರೆ. 'ಈ ಬಟ್ಟೆಯು ಒಗೆದ ಮೇಲೆಯೇ ನಯವಾಗುವುದು, ಹಾಗಾಗಿ ಒಗೆಯದೆ ಖಂಡಿತ ಉಪಯೋಗಿಸಬೇಡಿ," ಎಂಬ ಸೂಚನೆಯನ್ನೂ ಒತ್ತಿ ಒತ್ತಿ ಹೇಳುತ್ತಾರೆ. ಆ ಚೀಟಿಯನ್ನು ನೀರಿನಲ್ಲಿ ನೆನೆಸದೆ ಹರಿಯುವುದು ಅಸಾಧ್ಯವೆನ್ನು. ನೀನೋ ಒಗೆಯಲು ಹೋಗಿ, ಈ ಚೀಟಿಯನ್ನು ನೆನೆಸಿ ಹರಿದಾಗಲೇ ಗೊತ್ತಾಗುವುದು—ಅಡಿಯಲ್ಲಿ ಬಟ್ಟೆಯಲ್ಲಿ ದೊಡ್ಡ ತೂತಿರುವ ವಿಚಾರ. ಆಗ ದೂರನ್ನು ನೀನು ಅಪ್ಪನಲ್ಲಿಗೆ ತಂದರೆ 'ಒಮ್ಮೆ ನೀರಿಗೆ ಹಾಕಿದ ಬಟ್ಟೆಯನ್ನು ಬದಲಿಸುವುದು ಹೇಗೆ ಸ್ವಾಮಿ ಸಾಧ್ಯ?' ಎಂಬ ಚಾಲಾಕು ಉತ್ತರ ಅವರ ಬಳಿ ಸದಾ ಸಿದ್ಧವಾಗಿರುತ್ತೆ! ನನಗೆ ಈ ವ್ಯಾಪಾರವೆಂದರೆ ರೋಸಿಹೋಗಿದೆ. ನೋಡು. ಈ ಮೋಸದಿಂದಾಗಿ ಮನೆ ಮಂದಿಗೆಲ್ಲ ಒಂದಲ್ಲ ಒಂದು ಕಾಯಿಲೆ ದಿನಂಪ್ರತಿ ತಪ್ಪಿದಲ್ಲ. ದೇವರಿಗೆ ಎಣ್ಣೆ ಹಾಕುವ ಮೊದಲು ಅಪ್ಪ ಬೇಡುವುದು 'ತಿಳಿದೋ ತಿಳಿಯದೆಯೋ ಮಾಡಿದ ಸರ್ವಾಪರಾಧಗಳನ್ನು ಮನ್ನಿಸು' ಎಂಬುದಾಗಿಯೇ! ಮೋಸ ಮಾಡಿ ಪಡೆದ ಲಾಭಾಂಶದ ನೂರರಲ್ಲಿ ಒಂದಂಶ ದೇವರಿಗೆ ದೀಪ ಹಚ್ಚಲು ವ್ಯಯವಾಗುತ್ತದಷ್ಟೆ! ಜನತೆ ಈ ಧರ್ಮಕಾರ್ಯ ಮಾಡುವ ತಾನು ಎಂದಾದರೂ ಮೋಸ ಮಾಡಿಯೇನೇ ಎಂಬರ್ಥ ಬರುವ ಜಾಣ್ಮೆಯ ಧಾಟಿಯಲ್ಲಿನ ಅಪ್ಪನ ಮಾತಿನ ಮೋಡಿಗೆ ಎಂಥವರೂ ವಶವಾಗಲೇಬೇಕು." ಎಂದು.

## ದೇವರು, ಧರ್ಮದ ಹೆಸರಲ್ಲಿ ಮೋಸ

ಹೌದು, ಮನುಷ್ಯ ಅನ್ಯಾಯ, ಸುಳ್ಳು, ಮೋಸದ ದಾರಿಯಲ್ಲಿ ಜೀವಿಸಿ, ಬಂದ ಸಂಪಾದನೆಯ ಒಂದಂಶವನ್ನು ದೇವರಿಗರ್ಪಿಸಿ ತನ್ನ 'ಪಾಪ'ದಿಂದ ವಿಮುಕ್ತಿ ಪಡೆದೆನೆಂದು ಭಾವಿಸುವುದು ಕೇವಲ ಭ್ರಮೆಯೇ ಸರಿ! ತಾನು ನಂಬಿದ ದೇವಿಗೊಂದು ಗುಡಿ ಕಟ್ಟಿಸಿ, ಗರ್ಭಗುಡಿಯ ನಾಲ್ಕು ಗೋಡೆಗಳ ಮಧ್ಯೆ ಕೈದಿಯಾಗಿ ದೇವರನ್ನು ಬಂಧಿಸಿ, ಆ ಕಲ್ಲು ದೇವರಿಗೆ ಹೂ ಹಣ್ಣುಗಳನ್ನರ್ಪಿಸಿ, ಧೂಪ ದೀಪದ ಆರತಿ ಬೆಳಗಿದಲ್ಲಿ ತಾನು ಪುಣ್ಯ ಪಡೆಯುವೆನೆಂದು ತಿಳಿಯುವುದು ಮೂಢತನವಲ್ಲದೆ ಮತ್ತೇನು? ವಿಭೂತಿಯನ್ನೋ ಗೋಪೀಚಂದನವನ್ನೋ ಕುಂಕುಮದ ನಾಮವನ್ನೋ ಹಣೆಯಲ್ಲಿ ಹಾಕಿಕೊಂಡು, ಇಷ್ಟ ದೇವರ ಉಂಗುರವನ್ನೋ ತಾಳಿಯನ್ನೋ ಸರವನ್ನೋ ಧರಿಸಿಕೊಂಡನೆಂದಾದರೆ ಅವನ ವ್ಯವಹಾರವೆಲ್ಲವೂ ಸಾಚಾ ಎಂದು ಎಂದಿಗೂ ನಂಬಬೇಡಿ. ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಅನಾದಿ ಕಾಲದಿಂದಲೂ ಮೋಸ ನಡೆಯುತ್ತಿರುವುದು ಅಪ್ರಿಯವಾದ ಸತ್ಯ. ಇಂಥವರು ದೇವರನ್ನು ಕುರುಡನೆಂದೇ ಭಾವಿಸಿ ತಮ್ಮ ದೈನಂದಿನ ಮೋಸದ ವ್ಯವಹಾರದಲ್ಲಿ ಸ್ವಲ್ಪವೂ ಅಂಜದೆ ಮೈಮರೆಯುತ್ತಾರೆ.

## ಪ್ರಾಮಾಣಿಕತೆ ಶಾಪವಾದಾಗ

ಬಗ್ಗಿದವರಿಗೆ ಗುದ್ದು ಜಾಸ್ತಿ ಎಂಬಂತೆ ಈ ಕಲಿಯುಗದಲ್ಲಿ ವಿಧೇಯತೆ ತೋರಿಸಿದವನಿಗೆ ಶಿಕ್ಷೆಯೂ ಜಾಸ್ತಿಯಾಗುತ್ತೆ. ಸಂತೋಷ ನಮ್ಮೂರಿನ ಗ್ರಾಮ ಲೆಕ್ಕಿಗ. ಕಂದಾಯ ಇಲಾಖೆಯಲ್ಲಿ ಕಳೆದ ಇಪ್ಪತ್ತು ವರ್ಷಗಳಿಂದ ಪ್ರಾಮಾಣಿಕ ಸೇವೆ ಸಲ್ಲಿಸುತ್ತಿದ್ದಾನೆ. ಲಂಚದ ಆಮಿಷಕ್ಕೊಳಗಾಗದೆ ಕರ್ತವ್ಯಶೀಲನಾಗಿ ದುಡಿದು ಬಡತನದ ಬೇಗೆಯಲ್ಲಿಯೇ ನೆಮ್ಮದಿಯನ್ನು ಕಂಡವನು ಅವನ ಮೇಲಧಿಕಾರಿಗಳಿಗೆ ಅವನೆಂದರೆ ಅಷ್ಟಕ್ಕಷ್ಟೆ. ಕಾರಣವಿಷ್ಟೆ: ಈತ ಲಂಚವನ್ನು

ಪಡೆದು ಅವರಿಗೂ ಒಂದು ಪಾಲನ್ನು ಸಲ್ಲಿಸಬೇಕೆಂಬ ಅವರ ಇರಾದೆಯನ್ನು ಎಷ್ಟೋ ಬಾರಿ ಈತನಲ್ಲಿ ವ್ಯಕ್ತಪಡಿಸಿದ್ದರು. ಜಾಗದ ಅಳತೆ ಮಾಡಿಸಿಕೊಳ್ಳಲು, ಸ್ಥಳದ ನಕ್ಷೆ ಪಡೆಯಲು, ಸೀಮೆ ಎಣ್ಣೆ ಪರ್ಮಿಟ್ ಪಡೆಯಲು, ಕಟ್ಟಡ ಮುಂತಾದವುಗಳಿಗೆ ಲೈಸೆನ್ಸ್ ಪಡೆಯಲು, ವಾರ್ಷಿಕ ಆದಾಯದ ಮುಂತಾದ ಸರ್ಟಿಫಿಕೇಟ್‌ಗಳನ್ನು ಪಡೆಯಲು ಹೀಗೆ ಹಲವು ಸಂದರ್ಭಗಳಲ್ಲಿ ಲಂಚದ ಆಮಿಷ ತೋರಿಸುವ ಜನರೇ ಆತನ ಬಳಿ ಬರುವುದು. ಕೆಲವರಂತೂ ತಮ್ಮ ಅನುಕೂಲಕ್ಕೆ ತಕ್ಕಂತೆ ಸತ್ಯವನ್ನು ವಿಕೃತಗೊಳಿಸಿ ಕೊಡಬೇಕೆಂಬ ಶರ್ತದೊಂದಿಗೆ ಸಾವಿರಾರು ರೂಪಾಯಿ ಲಂಚ ನೀಡಲೂ ಹಿಂಜರಿಯುವುದಿಲ್ಲ. ಹಾಗಿದ್ದರೂ ಆತನು ಸತ್ಯ ಹಾಗೂ ನ್ಯಾಯದ ಪಥದಿಂದ ಈ ವರೆಗೆ ವಿಚಲಿತನಾಗಿಲ್ಲ. ತಮ್ಮ ಬೇಳೆ ಇವನಲ್ಲಿ ಬೇಯುವುದಿಲ್ಲವೆಂದು ತಿಳಿದು ಜನರು ಇಲ್ಲದ ಸಲ್ಲದ ಆಪಾದನೆ ಹೊರೆಸಿ ಮೇಲಧಿಕಾರಿಗಳಿಗೆ ಅರ್ಜಿ ಬರೆಯಿಸಿ, ಅವರೊಡನೆ ತಮ್ಮ ದೂರನ್ನು ಸಲ್ಲಿಸಿದ್ದು ಅದೆಷ್ಟೋ ಬಾರಿ! ಆದರೆ ತನಿಖೆಗಳಿಂದ ಈತನ ಪ್ರಾಮಾಣಿಕತೆ ಹಾಗೂ ಸತ್ಯಸಂಧತೆ ಮತ್ತಷ್ಟು ಬೆಳಕಿಗೆ ಬಂದಂತಾಯಿತಷ್ಟೆ. ಆದರೇನು? ತನ್ನ ಒಳ್ಳೆಯತನವನ್ನು ಅರಿಯದ ಜನಸಾಮಾನ್ಯರ ವರ್ತನೆಯಿಂದ ದಿನನಿತ್ಯವೂ ಸಂತೋಷನಿಗೆ ಅಸಂತೋಷ ತಪ್ಪಿದ್ದಲ್ಲ. ಮೇಲಧಿಕಾರಿಯೊಬ್ಬರು ಹಿತೈಷಿಯಾ ಆವನಿಗೆ ಹೇಳಿದ ಕಿವಿಮಾತಿದು : "ಯಾಕಯ್ಯಾ ನ್ಯಾಯ, ಸತ್ಯ, ಕರ್ತವ್ಯ ಎಂದು ಈ ಕಾಲದಲ್ಲಿ ಒದ್ದಾಡಿ ಸಾಯುವಿ? ಜನರಿಗೆ ನಿನ್ನಿಂದ ಕೆಲಸ ಆಗಲೇ ಬೇಕೆಂದಾಗ ಎಷ್ಟು ಲಂಚವನ್ನು ಕೊಡಲಿಕ್ಕೂ ಸಿದ್ಧರಿದ್ದಾರೆ. ಸರಕಾರಕ್ಕೆ ಮೋಸ ಮಾಡಿದರೂ ಸರಿ, ಹಣವನ್ನು ಜನರಿಂದ ಬಡಿದು ವಸೂಲ ಮಾಡಬೇಕಪ್ಪಾ, ಸಿಕ್ಕಿದ ಅವಕಾಶವನ್ನೆಂದಿಗೂ ಕಳೆದುಕೊಳ್ಳಬೇಡ. ಅವರವರಿಗೆ ಕೊಡಬೇಕೆಂದೇ ಲಂಚ ಗಿಟ್ಟಿಸಿಕೋ. ನನಗಾಗಿ ಎಂದು ಹೇಳಲೇಬೇಡ. ಪಡೆದ ಹಣದ ಒಂದಂಶವನ್ನು ನಮಗೂ ಹಂಚಪ್ಪಾ... ಆಗ ಆ ಪಾಪದಿಂದ ಸುಲಭದಲ್ಲಿ ನೀನು ಮುಕ್ತಿ ಹೊಂದುವೆ"' ಎಂದು.

ಹೌದು! ಸಾರ್ವಜನಿಕ ಕ್ಷೇತ್ರದಲ್ಲಿ ಪ್ರಾಮಾಣಿಕನಾದ ಇಂಥ ವ್ಯಕ್ತಿಯನ್ನು ಜನಸಾಮಾನ್ಯರು 'ದುಡ್ಡು ಮಾಡಲು ತಿಳಿಯದ ಪೆದ್ದ'ನೆಂದೋ, 'ಒರಟ ಸ್ವಭಾವದ ಗೊಡ್ಡೆ'ಂದೊ 'ಶಿಸ್ತಿನ ದೊಡ್ಡ ಸಿಪಾಯಿ'ಯೆಂದೋ, 'ಸತ್ಯಹರಿಶ್ಚಂದ್ರನ ತಾತ'ನೆಂದೋ...ಬಿರುದು ಬಾವಲಿಗಳನ್ನಿತ್ತು ಪುರಸ್ಕರಿಸಿದ್ದಾರೆ. ಭ್ರಷ್ಟಾಚಾರ, ಲಂಚಗುಳಿತನಗಳು ತಾಂಡವವಾಡುತ್ತಿರುವ ಈ ಕಾಲದಲ್ಲಿ ಲಂಚ ಮುಟ್ಟದ ಅಧಿಕಾರಿಯಿದ್ದಾರೆಂಬುದು ನಂಬಲೂ ಕಷ್ಟವಾದ ಸಂಗತಿ ನಿಜ. ಆದರೆ ಅಂಥವರನ್ನು ಪುರಸ್ಕರಿಸಿ, ಅವರ ಆದರ್ಶಕ್ಕೆ ಬೆಲೆ ಕೊಟ್ಟು ಜನರ ನಡತೆಯನ್ನು ತಿದ್ದುವಲ್ಲಿ ಅಂಥವರ ಮಾರ್ಗದರ್ಶನವನ್ನು ಪಡೆಯುವುದನ್ನು ಬಿಟ್ಟು, ಮಂದಿಯೊಳಗೊಂದಾಗಿ ಮೆರೆಯುವಂತೆ ಪುಸಲಾಯಿಸುವವರೇ ಸಮಾಜದ ಎಲ್ಲ ಕ್ಷೇತ್ರದಲ್ಲಿ ತುಂಬಿರುವುದು ನಾಗರಿಕ ಸಮಾಜದ ಅವನತಿಯ ಲಕ್ಷಣವಲ್ಲದೆ ಮತ್ತೇನು?

## ಜಾತಿ ಬೇಡ, ಸವಲತ್ತು ಬೇಕು!

ನಮ್ಮದು ಜಾತ್ಯತೀತ ರಾಷ್ಟ್ರ. ಆದರೆ ಶಾಲಾ ಕಾಲೇಜುಗಳ ಸೇರ್ಪಡೆಯ ಅಥವಾ ಯಾವುದೋ ಉದ್ಯೋಗ ಸೇರುವ ಅರ್ಜಿಗಳಲ್ಲಿ ಜಾತಿಯ ಬಗ್ಗೆ ಮೊದಲು ಪ್ರಸ್ತಾಪ ಬರುತ್ತದೆ! ಹರಿಜನರ ಉದ್ಧಾರ ಮಾತ್ರದಿಂದಲೆ ದೇಶದ ಉದ್ಧಾರ ಸಾಧ್ಯ ಎಂದು ತಿಳಿದವರ ಅಂಬೋಣ. ನಮ್ಮೂರಿನ ಪಂಚಾತಿಯು ಹರಿಜನ ಕಾಲೊನಿಗಾಗಿ ರಸ್ತೆಯೊಂದನ್ನು ಮಾಡಿಸಿ ಅವರು ವಾರಕ್ಕೊಂದು ದಿನ ಮರದಡಿಯಲ್ಲಿ ಕುಳಿತು ಭಜನೆ ಮಾಡುವುದನ್ನು ಕಂಡು ವ್ಯಥೆಪಟ್ಟು ಅವರಿಗಾಗಿ ಹತ್ತು ಸಾವಿರ ರೂಪಾಯಿಗಳನ್ನು ಖರ್ಚು ಮಾಡಿ ಭಜನಾ ಮಂದಿರವೊಂದನ್ನು ಕಟ್ಟಿಸಿಕೊಟ್ಟಿತ್ತು. ಆದರ ಉದ್ಘಾಟನೆ ನಡೆದು ಎರಡು ವರ್ಷಗಳೇ ಕಳೆದಿದ್ದರೂ. ಅಸ್ಪೃಶ್ಯತೆಯ ಉದ್ಘಾಟನಾ ಫಲಕ ಅಲ್ಲಿದ್ದುದ್ದು ಕೇವಲ ಆರು ತಿಂಗಳು ಮಾತ್ರವೆ. 'ಹರಿಜನ ಭಜನಾ ಮಂದಿರ' ಎಂಬ ಈ ಹೆಸರಿ

ವಿಂದಾಗಿ ಸಿಟ್ಟುಗೊಂಡ ಹರಿಜನರೇ ಒಂದು ರಾತ್ರಿ ಒಟ್ಟಾಗಿ ಕಲೆತು ಆ ಫಲಕವನ್ನು ಗೋಡೆಯಿಂದ ಕಿತ್ತು, ಚೂರು ಚೂರು ಮಾಡಿ, ಗೋಣಿಯೊಂದರಲ್ಲಿ ತುಂಬಿ ಪಂಚಾಯತಿಯ ಕಟ್ಟಡದ ಮುಂದೆ ಪ್ಯಾಕ್ ಮಾಡಿ ಇಟ್ಟಿದ್ದರಂತೆ! ಪಂಚಾಯತಿಯ ಅಧ್ಯಕ್ಷರಿಗೆ ಮರುದಿನ ಬಂದ ಪತ್ರದಿಂದ ತಿಳಿದ ವಿಚಾರವಿಷ್ಟು: 'ನಾವು ಗಾಂಧೀ ಪುತ್ರರು; ಹರಿಜನರಲ್ಲ. ನೀವು ಹರಿಜನ ಭಜನಾ ಮಂದಿರವೆಂದು ಹೆಸರಿಸಿ ನಮಗೆ ಅವಮಾನ ಮಾಡಿದ್ದೀರಿ. ಆ ಬೋರ್ಡನ್ನಿಲ್ಲಿ ಹಿಂದಿರುಗಿಸಿದ್ದೇವೆ. ಇನ್ನು ಮುಂದೆ ನಮ್ಮನ್ನು ಹರಿಜನರೆಂದು ಕರೆದಿರೋ ಎ...ಚ್ಚ...ರಿ...ಕೆ!'

## ಸುಳ್ಳಿನ ಸರಮಾಲೆ

ಸರಕಾರ ನೀಡುವ ವೃದ್ಧಾಪ್ಯವೇತನ ಮಕ್ಕಳಿಲ್ಲದ ೬೫ ವರ್ಷ ಮೀರಿದ ಬಡ ಜನರಿಗಾಗಿದ್ದರೂ, ಸ್ವಂತ ಮಕ್ಕಳಿದ್ದುಕೊಂಡು, ಸುಳ್ಳು ಹೇಳಿ, ತಾವು ನಿರ್ಗತಿಕರೆಂದು ಸಾಧಿಸಿ ಸಂಬಂಧಿತ ಅಧಿಕಾರಿಗಳಿಗೆ ಲಂಚವನ್ನಾದರೂ ಕೊಟ್ಟು ಸುಳ್ಳು ಸರ್ಟಿಫಿಕೇಟು ಮಾಡಿಸಿ, ಸರಕಾರಕ್ಕೆ ಮೋಸಮಾಡಿ ಹಣ ಪಡೆಯುವ ಹಲವಾರು ಮಂದಿ ನಮ್ಮಲ್ಲಿದ್ದಾರೆ. ಅದೇ ರೀತಿ, ಮಕ್ಕಳಿದ್ದೂ 'ಇಲ್ಲ' ಎಂಬ ಹೇಳಿಕೆ ಕೊಟ್ಟು ವಿಧವಾ ಭತ್ತೆಯನ್ನು ಪಡೆಯುವವರಿದ್ದಾರೆ! ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೆರೆಮನೆ ವಾಸ ಅನುಭವಿಸಿದ ಬಗ್ಗೆ (ಸುಳ್ಳು) ಸಾಕ್ಷ್ಯಾಧಾರಗಳನ್ನು ತಯಾರಿಸಲು ನನ್ನ ಅಧ್ಯಾಪಕ(!)ರೊಬ್ಬರಿಗೆ ಒಂದು ಸಾವಿರರೂಪಾಯಿ ಖರ್ಚಾಯಿತಂತೆ! ಈಗ ಮಾಸಿಕ ಪರಿಹಾರವನ್ನು ತಮ್ಮ ಪೆನ್‌ಶನ್ನಿನೊಂದಿಗೆ ಖುಷಿಯಿಂದ ಪಡೆಯುತ್ತಿದ್ದಾರೆ. ಬೆಂಗಳೂರಿನಲ್ಲಿ ಏಳು ಹೋಟೆಲುಗಳ ಯಜಮಾನರ ಮಗನೊಬ್ಬನಿಗೆ ಆರ್ಥಿಕವಾಗಿ ಹಿಂದುಳಿದ ವರ್ಗಕ್ಕೆ ಮೀಸಲಾದ ವೈದ್ಯಕೀಯ ಸೀಟು ಸುಲಭದಲ್ಲಿ ಸಿಕ್ಕಿಬಿಟ್ಟಿತ್ತು!

## ಇಬ್ಬಗೆಯ ವ್ಯಕ್ತಿತ್ವ

'ಹೇಳುವುದು ಶಾಸ್ತ್ರ, ಹಾಕುವುದು ಗಾಳ,' ಎಂಬ ಗಾದೆ ಈ ಶತಮಾನದ ಆಗುಹೋಗುಗಳಿಗೆ ಕೈಗನ್ನಡಿಯಂತಿದೆ. ದೇವರ ಬಗ್ಗೆ ಬಾಯ್ತುಂಬ ಬೈಯುವ ವೃದ್ಧ ವಿಚಾರವಾದಿಯೊಬ್ಬರ ಪರಿಚಯ ನನಗಿದೆ. ಅವರ ಮನೆಯಲ್ಲಿ ನಾನಾ ಮತಗಳ ನಾನಾ ದೇವರ ಚಿತ್ರಪಟಗಳನ್ನು ಕಂಡು ಮೂಕವಿಸ್ಮಿತನಾಗಿ, "ಹೀಗೇಕೆ?" ಎಂದು ಕೇಳಲಾಗಿ ಅವರ ಉತ್ತರವಿದು— "ನೋಡಿ ಡಾಕ್ಟ್ರೇ, ಸಮಾಜದಲ್ಲಿ ನೆಮ್ಮದಿಯಿಂದ ಬದುಕಬೇಕಾದ್ರೆ ಗೆದ್ದ ಎತ್ತಿನ ಬಾಲ ಹಿಡಿಯುವ ಕ್ರಮ ಕಲಿಯಲೇಬೇಕು. ಜನಬಲ ನನಗೆ ಸಿಗಬೇಕೆಂದು ಆ ರೀತಿ ಬೈದೆ ನಿಜ. ಆದರೆ ನನ್ನ ಮನ ಬಲಕ್ಕಾಗಿ, ಆಂತರಿಕ ನೆಮ್ಮದಿಗಾಗಿ, ನಾನಿಲ್ಲಿ ಕಾಣದ ದೇವರಿಗೆ ನಮಿಸುತ್ತಿರುವೆ."

## ಅನ್ಯಾಯಕ್ಕೆಂದು ಮಿತಿಯುಂಟೆ?

ಸರಕಾರದ ಕೆಲಸ ದೇವರ ಕೆಲಸ ಎಂಬ ಹಿರಿಯ ಆದರ್ಶವನ್ನು ಸರಕಾರಿ ಅಧಿಕಾರಿಗಳೆಲ್ಲರೂ ತತ್ವಶಃ ಪಾಲಿಸಿದಲ್ಲಿ ಆಡಳಿತ ಎಷ್ಟೊಂದು ಸುಧಾರಿಸಲಿಕ್ಕಿಲ್ಲ! ದೇವರಿಗೇ ದ್ರೋಹ ಬಗೆಯುವವರು ಸರ್ಕಾರಕ್ಕೆ ಹೆದರಿಯಾರೇ? ಸರಕಾರಿ ಬಸ್ಸಿನ ಕಂಡಕ್ಟರನೊಬ್ಬನು ಕೇವಲ ಐದು ವರ್ಷದ ತನ್ನ ಉದ್ಯೋಗದ ಆದಾಯದಿಂದ ಒಂದು ಲಕ್ಷದ ಮನೆಯನ್ನೇ ಕಟ್ಟಿಸಿಬಿಟ್ಟ!

ವಿದ್ಯಾರ್ಥಿಗಳು ಶಾಲೆಗೆ ತಡವಾಗಿ ಬಂದಾಗ ಹಾಜರಿ ಕೊಡದ ಅಧ್ಯಾಪಕರು ತಾವು ಒಂದು ದಿನ ಗೈರು ಹಾಜರಾದರೂ ಮರುದಿನ ಬಂದು ತಮ್ಮ ನಿನ್ನೆಯ ಹಾಜರಿ ಭರ್ತಿ ಮಾಡುವ ಅನೇಕ ಪ್ರಸಂಗಗಳಿವೆ. ಏಕೋಪಾಧ್ಯಾಯ ಶಾಲೆಗಳಲ್ಲಂತೂ ಇಂಥ ಅನ್ಯಾಯ ಬಹಳಷ್ಟು ನಡೆಯುತ್ತದೆ. ಮಕ್ಕಳಲ್ಲಿ ಶಿಸ್ತು, ಸಂಯಮ, ವಿಧೇಯತೆಯನ್ನು ಬೋಧಿಸುವ ಶಿಕ್ಷಕರೇ ಕೋಪತಾಪದ ವರ್ತನೆಯ ರೂವಾರಿಗಳಾಗಿ, ಬರೀ ಶಿಕ್ಷೆ ಕೊಡುವವರಾಗಿರುವುದೂ ಸಂಬಳಕ್ಕಾಗಿ ದುಡಿಯುವ ಧೋರಣೆ ತೋರಿಸುವುದೂ ಇಂದು ಸರ್ವೇಸಾಮಾನ್ಯ.

ವಿದ್ಯಾರ್ಥಿವೃಂದದಲ್ಲೂ ಓದಿನಲ್ಲಿ ಶ್ರದ್ಧೆ ದಿನೇ ದಿನೇ ಕುಸಿಯುತ್ತಿದೆ. ಬಾಲವಾಡಿಯ

ಮಕ್ಕಳಿಂದಲೇ ಹೊರಗಿನ ವೇಷ ಭೂಷಣ, ಅಲಂಕಾರ, ವ್ಯವಹಾರಗಳತ್ತ ವ್ಯಾಸಂಗಕ್ಕಿಂತ ಹೆಚ್ಚಿನ ಒಲವು ಈಗೀಗ ಮೂಡಿ ಬರುತ್ತಿದೆ. ಪಾಸಾಗಲು ಬೇಕಾದಷ್ಟು ಅಭ್ಯಾಸ ಮಾಡಿದರೆ ಸಾಕೆಂಬ 'ಸರಳ ತತ್ವ'ವೂ ಈಗ ಸರ್ವತ್ರ ಹಬ್ಬಿದೆ. ಪರೀಕ್ಷೆಯನ್ನು ಧೈರ್ಯದಿಂದೆದುರಿಸುವ ನೈತಿಕ ಧೈರ್ಯವೇ ಹೆಚ್ಚಿನವರಲ್ಲಿ ಇಲ್ಲವಾಗಿದೆ. ಈ ವರ್ಷದ ಪಿ. ಯು. ಸಿ. ಗಣಿತ ಪರೀಕ್ಷೆ ಎರಡು ಬಾರಿ ಮುಂದೂಡಲ್ಪಟ್ಟಿರುವುದೇ ಇದಕ್ಕೆ ಸಾಕ್ಷಿ.

ನಾನು ಮೈಸೂರಿನಲ್ಲಿ ಓದುತ್ತಿರುವಾಗ ಪ್ರಥಮ ಬಿ.ಎಸ್‌ಸಿ.ಯ ಸಸ್ಯಶಾಸ್ತ್ರದ ಮೊದಲ ಪಾಠಕ್ಕೆ ಬಂದ ಪ್ರಾಧ್ಯಾಪಕರು ಪ್ರಾರಂಭದಲ್ಲೇ, "ನೋಡಿ, ಮನೆಯ ಪಾಠ ಅಂದರೆ ಸಿಹಿ ಚಾಕಲೇಟು (ಅಷ್ಟು ಮಧುರ), ಕಾಲೇಜಿನ ಪಾಠ ಅಂದರೆ ಸಿಗರೇಟಿನ ಘಾಟು (ಅಷ್ಟು ಕಠಿಣ). ಹಾಗಾಗಿ ನಿಮ್ಮಲ್ಲಿ ಹೆಚ್ಚಿನವರು ನನ್ನ ಮನೆಯ ಪಾಠ (ಟ್ಯೂಶನ್) ಸೇರಿಕೊಂಡು ವಾರ್ಷಿಕ ಪರೀಕ್ಷೆಯಲ್ಲಿ ಸುಲಭದಿಂದ ಪಾಸಾಗಬೇಕೆಂಬುದೇ ನನ್ನ ಆಶೆ," ಎಂಬುದಾಗಿ ಸಂಕೋಚವಿಲ್ಲದೆ ಹೇಳಿದ್ದರು!

ವಿದ್ಯಾರ್ಥಿಯ ಬುದ್ಧಿಮತ್ತೆಯನ್ನಳೆಯುವ ಪರೀಕ್ಷೆಗಳಿಂದು ಮೋಸದ ತಾಣವಾಗಿವೆ. ಮೌಲ್ಯಮಾಪನ ಕ್ರಮವೂ ಅಸಮರ್ಪಕವಾಗಿದೆ ಎಂಬುದಕ್ಕೆ ಈ ಬಾರಿಯ ಹತ್ತನೆಯ ತರಗತಿಯ ಮೌಲ್ಯಮಾಪನಕ್ಕೆ ಹೋದ ನನ್ನ ಸಂಬಂಧಿಕರೊಬ್ಬರು ಮುಖ್ಯಸ್ಥರ ಒತ್ತಾಯಕ್ಕೆ ಕಟ್ಟುಬಿದ್ದು ತಮಗರ್ಥವಾಗದ ಮರಾಠಿ ಉತ್ತರ ಪತ್ರಿಕೆಗಳನ್ನು ತಿದ್ದಿ ಬಂದುದೇ ಸಾಕ್ಷಿ!

'ವಿದ್ಯಾ ದದಾತಿ ವಿನಯಂ'–ವಿದ್ಯೆ ವಿನಯವನ್ನು ತರುತ್ತದೆ ಎಂದು ಸುಭಾಷಿತ ಹೇಳಿದರೆ ಇಂದು ವಿದ್ಯೆ ಅಹಂಕಾರವನ್ನು ತರುತ್ತಿದೆ. ತನ್ನ ಸೂಟ್ ಕೇಸನ್ನು ತಾನು ಕೊಂಡೊಯ್ಯುವುದು ಅಪಮಾನಕರ ಎಂಬ ಭಾವನೆ ಆಧುನಿಕರಲ್ಲಿದೆ. ಕೈಗೊಂದು ಆಳು, ಕಾಲಿಗೊಂದು ಆಳು ಇಂದಿನ ಫ್ಯಾಷನ್ ಆಗಿದೆ.

ಗೌರವ, ಭಯ, ಭಕ್ತಿಗಳೆಲ್ಲ ಈಗೀಗ ಕಣ್ಮರೆಯಾಗುತ್ತಿವೆ. ರಾಮಯ್ಯ ಆಟೋ ರಿಕ್ಷಾ ಇಟ್ಟುಕೊಂಡು ಕಳೆದ ೪೦ ವರ್ಷಗಳಿಂದ ಬೆಂಗಳೂರಿನಲ್ಲಿದ್ದಾನೆ. ಬೆಳಿಗ್ಗೆ ನಾಲ್ಕು ಗಂಟೆಯಿಂದ ರಾತ್ರಿ ಗಂಟೆ ೧೦ರ ತನಕ ಆಟೋ ಓಡಿಸಿ ದಣಿಯುತ್ತಾನೆ. ಸ್ವಂತ ಸಂಪಾದನೆಯಲ್ಲಿ ಮನೆಸಾಮಾನನ್ನೆಲ್ಲ ಮಾಡಿಕೊಂಡು, ಇಬ್ಬರು ಮಕ್ಕಳಿಗೂ ತಾಂತ್ರಿಕ ಶಿಕ್ಷಣ ಒದಗಿಸಿ ಅವರಿಬ್ಬರೂ ಈಗ ಕೈತುಂಬ ಸಂಬಳ ಪಡೆಯುತ್ತಿದ್ದಾರೆ. ಆದರೆ ಖಾಕಿ ಡ್ರೆಸ್ ತೊಟ್ಟ ರಾಮಯ್ಯನನ್ನು ತನ್ನ ಗಂಡ ಎಂದೆನ್ನಲೂ ಅವನ ಪತ್ನಿಗೆ ನಾಚಿಕೆ, ಮಕ್ಕಳಿಗೂ ತಮ್ಮ ತಂದೆ ಡ್ರೈವರ್ ಎಂದು ಹೇಳಲೂ ತಾತ್ಸಾರ!

## ಸಾಲದ ಶೂಲ

ಸಾಲ ಕೇಳುವುದೂ ಒಂದು ಕಲೆ. ಹಣ ಗಿಟ್ಟಿಸುವ ತಂತ್ರ ಎಲ್ಲರಿಂದ ಸಾಧ್ಯವಿಲ್ಲ. ಅಪರಿಚಿತ ವ್ಯಕ್ತಿ ನೀವು ಬಸ್ ಸ್ಟಾಪಿನಲ್ಲಿ ನಿಂತುಕೊಂಡಿದ್ದಾಗ ಅಥವಾ ಸಿನಿಮಾ ಟಿಕೆಟ ಕ್ಯೂನಲ್ಲಿ ನಿಂತಿರುವಾಗ ಅಥವಾ ಸಂಜೆಯ ವೇಳೆ ಪಾರ್ಕಿನಲ್ಲಿ ಹಾಯಾಗಿ ಕುಳಿತಿರುವಾಗ, ತಲೆ ಕೆರೆಯುತ್ತ ಬಂದು, ನಗುಮುಖದಿಂದ ನಮಿಸಿ, 'ಪರ್ಸ್ ಮರೆತು ಬಂದೆ... ಸರ್' ಎಂದೋ ಸಂಬಳವಿಲ್ಲದೆ ನಾಲ್ಕು ತಿಂಗಳಾಯ್ತೆಂದೋ ಹೆಂಡತಿ ಆಸ್ಪತ್ರೆಯಲ್ಲಿ ಹಡೆದು ಸೀರಿಯಸ್ಸಾಗಿದ್ದಾ'ಳೆಂದೋ ಊಟ ಮಾಡದೆ ಒಂದುವಾರವಾಯ್ತೆಂದೋ, ಚೆಕ್ ಇದೆ ವಟಾಯಿಸಲು ಇಂದು ಬ್ಯಾಂಕ್ ರಜ'ವೆಂದೋ, 'ಚಿಲ್ಲರೆ ಇಲ್ಲ ಸರ್.... ಹಾಗಾಗಿ ಕೇಳಿದೆ' ಎಂದೋ ಹಲವು ರೀತಿಯಲ್ಲಿ ನಿಮ್ಮನ್ನು ಸಾಲಕ್ಕಾಗಿ ಪೀಡಿಸಬಹುದು ಎಚ್ಚರಿಕೆ!

ಶಾಂತಕುಮಾರ ನನ್ನ ಕಡು ಬಡವ ಮಿತ್ರನೊಬ್ಬನ ಮಗ. ನಾನು ಅವನ ಓದಿಗೆ ಆರ್ಥಿಕ ಸಹಾಯ ಮಾಡಿ, ಆತ ಮೇಷ್ಟ್ರಾಗಿ ಸ್ವಂತ ದುಡಿಮೆಯಿಂದ ಸಂಸಾರ ನಿಭಾಯಿಸುವಂತೆ ಬಹಳ ನೆರವಾಗಿದ್ದೆ. ಕಳೆದ ಹತ್ತು ವರ್ಷಗಳಿಂದ ಸಾವಿರಾರು ರೂಪಾಯಿಗಳ ಸಹಾಯವನ್ನಿತ್ತು. 'ಮನುಷ್ಯ'ನನ್ನಾಗಿ ಅವನನ್ನು ಮಾಡಿದ ತೃಪ್ತಿ ನನಗಿದೆ. ಸಾಲದ ಮರು ಪಾವತಿ

ಬಗ್ಗೆ ಎಂದೂ ಆತ ಬಾಯ್ಬಿಟ್ಟಿರಲಿಲ್ಲ. ಹೈಸ್ಕೂಲು ಅಧ್ಯಾಪಕನಾಗಿ ಮೂರು ವರ್ಷಗಳಾದ ಬಳಿಕ ನಾನೇ ಒಂದು ದಿನ, "ತಿಂಗಳ ಕಂತಿನಂತಾದರೂ ಕೊಟ್ಟು ನನ್ನ ಸಾಲ ತೀರಿಸೋ ಕುಮಾರ," ಎಂದೆ ಮೆಲ್ಲನೆ. ತಕ್ಷಣ ರೇಗಿದ ಆತನು, "ಏನು ಸರ್... ಇನ್ನೂ ನನ್ನೊಡನೆ ಹಣ ಕೇಳುತ್ತೀರಲ್ಲಾ... ಮರ್ಯಾದೆ ಏನಾದ್ರೂ ಇದೆಯೊ ನಿಮಗೆ? ನಿಮಗೀಗ ಹಣದ ಅವಶ್ಯಕತೆಯಾದ್ರೂ ಏನಿದೆ? ನಾಚಿಕೆ ಬಿಟ್ಟು ನನ್ನೊಡನೆ ಸಾಲದ ಹಣ ಕೇಳಲು ನೋಡುತ್ತೀರಲ್ಲ... ಥೂ... ಹೋಗಿ ಆಚೆ..." ಎಂದು ಛೀಮಾರಿ ಹಾಕಿ ಬಿಟ್ಟ! ಸ್ವರ್ಗದಲ್ಲಿದ್ದ ನನ್ನ ಮಿತ್ರ ಈ ಸಂಭಾಷಣೆಯನ್ನು ಕೇಳಿ ಮೂರ್ಛೆ ಹೋದಾನು ಎಂಬ ನಂಬಿಕೆಯೊಂದಿಗೆ ಹಿಂದಿರುಗಿದ ನಾನು ಮತ್ತಾತನ ಭೇಟಿಯಾಗಿಲ್ಲ.

## ಜಿಪುಣರ ಜಾಣ್ಮೆ

ಲಾಭಯ್ಯ ನಮ್ಮೂರಿನ ಪ್ರಸಿದ್ಧ ವರ್ತಕ. ಜಿಪುಣಾಗ್ರೇಸರ. ಊರಿನ ಆಸುಪಾಸು ಬಯಲಾಟವಾದರೆ, ಸಹಾಯಾರ್ಥ ಮನೋರಂಜನಾ ಪ್ರದರ್ಶನವಾದರೆ, ಪ್ರಥಮ ಶ್ರೇಣಿಯ ಟಿಕೆಟನ್ನು ಅವರಿಗೆ ಕೊಡುವುದು ರೂಢಿ. ಅವರು ರಾಗವಾಡಿ, "ಮಗಾ, ದುಡ್ಡು ಮಾತ್ರ ನಾಳೆ ಕೊಡುವೆ ಆಗದೇ?" ಎಂದು ಹೇಳುತ್ತಿದ್ದರು. ಬಯಲಾಟದ ದಿನ ಆ ಜಾಗಕ್ಕೆ ಹೊತ್ತಿಗೆ ಮೊದಲೇ ಬಂದು ತನಗೆ ತಲೆನೋವೆಂದೋ ಸುಸ್ತಾಗಿದೆಯೆಂದೋ ಸುಳ್ಳು ನೆಪ ಹೇಳಿ ಆ ಟಿಕೆಟ್ಟನ್ನೇ ಯಾರಿಗಾದರೂ ಮಾರಾಟ ಮಾಡಿ, ಮನೆಯಲ್ಲಿ ನಿದ್ರಿಸುತ್ತಿದ್ದರು. ಮಾರುದಿನ ಹಣ ಪಡೆಯಲು ಮಾಡಿದಾಗ, "ಮಗಾ, ಇನ್ನೊಂದ್ಸಾರಿ ಒಟ್ಟಿಗೆ ಹಣ ಕೊಡ್ತೇನೆ, ಆಗ್ದಾ... ನನ್ನ ಮೈಗೆ ಹುಶಾರಿರಲಿಲ್ಲ" ಎಂದಿಷ್ಟೇ ಹೇಳಿ ನುಣುಚಿಕೊಳ್ಳುತ್ತಿದ್ದರು. ಹೀಗೆ ಪುಕ್ಕಟೆಯಾಗಿ ಟಿಕೆಟ್ಟು ಪಡೆದು ಅದನ್ನು ಹಣಕ್ಕೆ ಮಾರಿ ಹೆಸರಿಗೆ ತಕ್ಕಂತೆ ಲಾಭ ಗಳಿಸುತ್ತಿದ್ದ ಅವರು ಆಗರ್ಭ ಶ್ರೀಮಂತರಾಗಿದ್ದರು!

ಜಿಪುಣತನ ತೋರಿಸುವವರ ವರ್ತನೆ ಹಲವು ವಿಧ. ಊಟ ತಿಂಡಿಯ ಹೊತ್ತಿಗೇ ನೆರೆಹೊರೆಯವರ ಮನೆಗೆ ಹೋಗುವವರಿದ್ದಾರೆ. ಆಗ ಹೇಗಿದ್ದರೂ ಒತ್ತಾಯ ಮಾಡಿಯೇ ಮಾಡುತ್ತಾರೆ, ಹೊಟ್ಟೆ ತುಂಬಿಸಿಕೊಳ್ಳಬಹುದು ಎಂಬ ಇಂಗಿತ ಇಂಥವರದ್ದು. ದಿನಪತ್ರಿಕೆ ವಾರಪತ್ರಿಕೆ ಅಥವಾ ಕಥೆ ಕಾದಂಬರಿಗಳನ್ನು ಓದಲು ಕೊಂಡೊಯ್ಯುವವರು ಹಲವರು. ಪತ್ರಿಕೆಯನ್ನು ಹಣ ಕೊಟ್ಟು ತರಿಸುವವರಿಗಿಂತ ಮುಂದಾಗಿ ಈ ಬಿಟ್ಟಿ ಓದುಗರಿಗೆ ಅವು ಸಿಗಬೇಕೆಂಬ ಇರಾದೆ ಬೇರೆ. ಟಿ. ವಿ. ನೋಡುವ ನೆಪದಲ್ಲಿ, ರೇಡಿಯೋ ಕೇಳುವ ನೆಪದಲ್ಲಿ ಬಂದು ಕುಳಿತು ಊಟ ತಿಂಡಿ ಮುಗಿಸುವವರೂ ಇದ್ದಾರೆ. ಮಾರ್ಕೆಟ್ಟಿನಲ್ಲಿ ದ್ರಾಕ್ಷಿ ಹಣ್ಣು ಹುಳಿಯಾಗಿದೆಯೇ ಎಂದು ನೋಡುವಾಗ ಒಂದು ಗೊಲ್ಲೆಯಷ್ಟನ್ನೂ ಜಾಣ್ಮೆಯಿಂದ ಕಬಳಿಸಿ ೫೦ ಗ್ರಾಮ್ ಹಣ್ಣನ್ನು ಖರೀದಿಸುವ ಬುದ್ಧಿವಂತರೂ ಇದ್ದಾರೆ! ಸ್ನೇಹಿತನಂತೆ ಒತ್ತಾಯಿಸಿ ಹೋಟೆಲಿಗೆ ಕರೆಯುದೊಯ್ದು ಬೇಕೆಂಬಷ್ಟು ತಿಂದು, ಹೋಟೆಲ್ ಮಾಣಿ ಬಿಲ್ ತರುವುದನ್ನೇ ನೋಡಿಕೊಂಡು ಕೈ ತೊಳೆಯುವ ನೆಪದಲ್ಲಿ ಎದ್ದು ಹೋಗಿ ತಮ್ಮ ಹಣ ಉಳಿಸಿಕೊಳ್ಳುವವರೂ ಇದ್ದಾರೆ. ಅಥವಾ ತಿಂಡಿಯ ದೊಡ್ಡ ಮೊತ್ತದ ಹಣವನ್ನು ಪಾವತಿಸುವುದನ್ನು ತಪ್ಪಿಸಿಕೊಂಡು, ಒನ್ ಬೈಟು ಕಾಫಿ ಅಥವಾ ಜ್ಯೂಸ್‌ನ ಖರ್ಚನ್ನು ವಹಿಸಿಕೊಂಡು ನೆಮ್ಮದಿಪಡುವವರೂ ಇದ್ದಾರೆ.

## ಶುಚಿತ್ವದ ಮಾದರಿ

ಚೊಕ್ಕಟತನದ ಬಗ್ಗೆ ಉಪದೇಶ ಕೊಡುವವರು ಬಹಳ. ಆದರೆ ಆಚರಣೆಯಲ್ಲಿ ತರುವವರು ಅತಿ ವಿರಳ. ಮೈಸೂರು, ಬೆಂಗಳೂರು ಮುಂತಾದ ನಗರಗಳಲ್ಲಿ ಮನೆಯೊಳಗಿನ ಕಸವನ್ನು ಸಮೀಪದ ಕಸದ ತೊಟ್ಟಿಗೆ ಹಾಕುವ ಬದಲು ಮನೆಯ ಇದುರಿನ ಬೀದಿಗೇನೇ ಎಸೆಯುವವರು ಹೆಚ್ಚು ಮಂದಿ! ಮನೆಯಲ್ಲಿ ಕಕ್ಕಸು ಇದ್ದಾಗ್ಯೂ ಬೀದಿಯ ಬದಿಯಲ್ಲೆ ಮಕ್ಕಳನ್ನು ಮಲವಿಸರ್ಜನೆಗೆ ಕೂರಿಸುತ್ತಾರೆ. ಸಾರ್ವಜನಿಕ ಮೂತ್ರಿಯ ದುರವಸ್ಥೆಯನ್ನು

ಹೇಳಿ ಪೂರೈಸುವುದೇ ಅಲ್ಲ. ಸಾರ್ವಜನಿಕ ನೀರಿನ ಪೈಪ್ ಅಥವಾ ಬಾವಿಯ ಅವಸ್ಥೆಯೂ ಅಂತೇನೇ.

ಚೊಕ್ಕಟತನದ ಬಗ್ಗೆ ಅತ್ಯಾಸಕ್ತರೊಬ್ಬರ ಪರಿಚಯ ನನಗಿದೆ. ಬೇಡದ ಕಾಗದ ಹಾಗೂ ವಸ್ತುಗಳನ್ನು ಅವರು ಕ್ರಮಬದ್ಧವಾಗಿ ಜೋಡಿಸಿಯೇ ಕಸದ ಬುಟ್ಟಿಗೆ ಎಸೆಯು ತ್ತಾರೆ! ನೆಂಟರಿಷ್ಟರಲ್ಲಿಗೆ ಹೋದಾಗಲೆಲ್ಲ ಅಲ್ಲಿನ ಕಸದ ಬುಟ್ಟಿಯೊಳಗಿನ ಕಸಗಳನ್ನು ಒಪ್ಪ ಓರಣ ಮಾಡಿ ನೈರ್ಮಲ್ಯ ರಕ್ಷಿಸುವು ದರಲ್ಲಿ ಅವರಿಗೆ ಅತ್ಯಾಸಕ್ತಿ ಬೇರೆ!

## ದಳ್ಳಾಳಿಯ ದುರುಳುತನ

ಗಂಗಾಧರ ನಮ್ಮೂರಿನಲ್ಲಿ ಪ್ರಮುಖ ಮದು ವೆಯ ದಳ್ಳಾಳಿ. ಒಂದು ಮದುವೆ ಮಾಡಿಸುವ ಮೊದಲು ಸಹಸ್ರ ಸುಳ್ಳನ್ನಾದರೂ ಆತ ಹೇಳದೇ ಇಲ್ಲ, ಜಾತಕವನ್ನೇ ಬೇಕಾದಂತೆ ತಿದ್ದುವುದು, ಇಲ್ಲದ ಪದವಿಯನ್ನೂ ನೌಕರಿಯನ್ನೂ ವರನಿಗೆ ಕೊಡಿಸುವುದು, ವರದಕ್ಷಿಣೆಯ ಒಂದು ಪಾಲನ್ನು ಸದ್ದಿಲ್ಲದೆ ಗುಳುಂ ಮಾಡುವುದು... ಇವೆಲ್ಲ ಆತನಿಗೆ ಕಲಿತಲಾಮುಕ. ದಂಪತಿಗಳು ಅನ್ಯೋನ್ಯ ವಾಗಿದ್ದು ಅವರ ಬದುಕು ಹಸನಾದರೆ ವರ್ಷ ಕ್ಕೊಮ್ಮೆಯಾದರೂ ಅವರಲ್ಲಿಗೆ ಹೋಗಿ ಹಣ, ಬಟ್ಟೆ ಮುಂತಾದ ಕಾಣಿಕೆಯನ್ನು ಒತ್ತಾಯ ದಿಂದ ಪಡೆಯುವುದು; ಅವರ ಸಂಸಾರ ದಲ್ಲಿ ಅನಾಹುತವೇನಾದರೂ ಸಂಭವಿಸಿದರೆ 'ಗ್ರಹಗತಿ ನೆಟ್ಟಗಿಲ್ಲ,' 'ಹಣೆ ಬರಹವನ್ನು ಬ್ರಹ್ಮನೂ ಬದಲಿಸಲಾರ', 'ಪಾಲಿಗೆ ಬಂದದ್ದು ಪಂಚಾಮೃತ', 'ವಿಧಿಯ ವಿಪರ್ಯಾಯಸ–ಏನು ಮಾಡಲಿ ಹೇಳಿ' ಎಂಬಿತ್ಯಾದಿ ಹಿತ ವಚನಗಳಿಂದ ಸಂತೈಸುವುದೂ ಆತನಿಗೆ ಅಭ್ಯಾಸವಾಗಿ ಬಿಟ್ಟಿದೆ.

## ಚಿಕಿತ್ಸಾ ರಂಗದ ಅವಿಸ್ಮರಣೀಯರು

ಹಳ್ಳಿಗರಿಗೆ ವೈದ್ಯನ ಮೇಲಿರುವ ವಿಶ್ವಾಸ ಅಪಾರ. ನಾನು ಮಂಡ್ಯ ಜಿಲ್ಲೆಯ ಹಳ್ಳಿ ಯೊಂದರಲ್ಲಿ ಸೇವೆ ಸಲ್ಲಿಸುತ್ತಿರುವಾಗ ಅಲ್ಲಿಯ ಜನ ರೋಗಿಗಳನ್ನು ಕರೆತರುವಾಗ 'ಈ ಕಾಯಿಲೆಯನ್ನು ಗುಣಪಡಿಸಲು ಎಷ್ಟು ರೂಪಾಯಿ ತೆಗೆದು ಕೊಳ್ಳುತ್ತೀರಿ ಬುದ್ಧೀ? ಎನ್ನುತ್ತಿದ್ದರು. ಅವರದ್ದು ಕಂಟ್ರಾಕ್ಟು ವ್ಯವಹಾರ. ಟೆಂಡರ್ ಕರೆದು ಕಡಿಮೆ ಖರ್ಚಿ ನಲ್ಲಿ ಒಪ್ಪಿದವರೊಡನೆ ವ್ಯವಹರಿಸುವಂತೆ ಅಕ್ಕ ಪಕ್ಕದ ಹತ್ತಾರು ವೈದ್ಯರನ್ನು ಕೇಳಿ ಅತಿ ಕಡಿಮೆಗೆ ಒಪ್ಪಿದವರಲ್ಲಿ ರೋಗಿಯನ್ನು ಬಿಡುತ್ತಿದ್ದರು! ಒಮ್ಮೆ ಟೈಫೈಡ್ ಕಾಯಿಲೆ ಗುಣಪಡಿಸಿದರೂ ಎರಡು ಸಾವಿರ ಪಡೆದ ಒಬ್ಬ ವೈದ್ಯರೂ ಇದ್ದರು! "ಬುದ್ಧೀ, ಬೆಳಿಗ್ಗೆಯಿಂದ ಹತ್ತು ಬಾರಿ ಭೇದಿಯಾಯ್ತು. ರಾತ್ರಿಗೆ ಕೋಳಿ ಪಲಾವ್ ತಿನ್ನಬೇಕು. ನಾಲ್ಕು ಸೂಜಿ (ಇಂಜೆಕ್ಷನ್) ಕೊಟ್ಟರೂ ಚಿಂತಿಲ್ಲ. ಟಪ್ ಎಂದು ಭೇಧಿ ನಿಲ್ಲಿಸಿ" ಎಂದು ಹೊಟ್ಟೆ, ಕೆಟ್ಟಿದ್ದರೂ ನಾಲಿಗೆ ಚಪಲ ಹೆಚ್ಚಾದವರು



ಬಹಳ ಮಂದಿಯಿದ್ದರು! "ಹೊಟ್ಟೆ ಉರೀತದೆ. ಹುಣ್ಣಾಗಿದೆ ಅಂತಾರೆ ಬೇರೆ ಡಾಕ್ಟ್ರು. ಬೀಡಿ ಮತ್ತು ಸರಾಯಿ ಸತ್ತರೂ ಬಿಡೋಕಾಗೋಲ್ಲ. ವಾಸಿ ಮಾಡ್ತೀರಾ ಇಲ್ಲಾ ಬೇರೆ ಕಡೆ ಹೋಗಲೆ?" ಎಂದು ಬರುವಾಗಲೆ ದರ್ಪ ತೋರಿಸುವವರೂ ಇದ್ದರು!

"ದೇಹ ಸೋತಿದೆ ತುಂಬಾ. ನೂರು ರೂಪಾಯಿ ಬೆಲೆಬಾಳುವ ಟಾನಿಕ್ ಬಾಟ್ಲಿಯನ್ನಾದರೂ ಬರೀರಿ ಬುದ್ಧೀ... ಒಮ್ಮೆ ತೆಗೆದುಕೊಂಡರೆ ಮತ್ತೆ ಯಾವ ರೋಗವೂ ಹತ್ತಿರ ಸುಳೀಬಾರದ್ದು..." ಎಂಬ ಗೌಡರಂತೂ ಅಲ್ಲಿ ಸರ್ವೇಸಾಮಾನ್ಯ.

ಲಕ್ಕಣ್ಣ ಈ ಊರಿನ ದೊಡ್ಡ ಜಮೀನುದಾರ. ಒಂದುವಾರದ ತಲೆ ನೋವಿನಿಂದ ನರಳಿ ಅನೇಕ ಕಡೆಗಳಲ್ಲಿ ಚಿಕಿತ್ಸೆ ವಿಫಲಗೊಂಡು ನನ್ನ ಬಳಿ ಬಂದಿದ್ದ. ಪರೀಕ್ಷಿಸಲಾಗಿ ಸಾಮಾನ್ಯ ತೊಂದರೆಯೆಂದು ಗೊತ್ತಾಗಿ ಕೇವಲ ಎರಡು ರೂಪಾಯಿ ವೆಚ್ಚದ ಮಾತ್ರೆಗಳಿಂದಲೇ ಅವನ ತಲೆನೋವು ಸಂಪೂರ್ಣ ವಾಸಿಯಾಯಿತು. ಮತ್ತೊಂದು ವಾರದ ವರೆಗೆ ನೋವು ಬರಲೂ ಇಲ್ಲ. ತನ್ನ ಭಾರೀ ತಲೆ ನೋವು ಇಷ್ಟೊಂದು ಕಡಿಮೆ ಖರ್ಚಿನಲ್ಲಿ ಕಣ್ಮರೆಯಾದ ಬಗ್ಗೆ ಆತನಿಗೆ ಸಂಶಯ ಹಾಗೂ ಅಸಮಾಧಾನ ಬಹಳಷ್ಟಾಗಿತ್ತು. ಒಂದು ವಾರದ ನಂತರ ಮಂಗಳೂರಿನ ಪ್ರಸಿದ್ಧ ವೈದ್ಯರಲ್ಲಿಗೆ ಹೋಗಿ ಪುನಃ ತೋರಿಸಿದ. ಈಗಿಲ್ಲದ ತನ್ನ ತಲೆನೋವು ಇನ್ನು ಮುಂದೆ ಬಾರದಂತೆ ಮಾಡಬೇಕೆಂದೂ ಹಣ ಜಾಸ್ತಿ ಖರ್ಚಾದರೂ ಪರವಾಗಿಲ್ಲವೆಂದೂ ಒತ್ತಿ ಹೇಳಿದ ಅವರಿಗೆ. ಮತ್ತೆ ಐದು ರೀತಿಯ ಗುಳಿಗೆಗಳನ್ನವರು ಬರೆದುಕೊಟ್ಟರು. ಲಕ್ಕಣ್ಣ ಮಾತ್ರೆಗಳಿಗಾಗಿ ನೂರು ರೂಪಾಯಿ ಖರ್ಚು ಮಾಡಿ ಅವೆಲ್ಲವನ್ನೂ ತಂದು ನನಗೆ ತೋರಿಸಿ, 'ಇನ್ನೊಮ್ಮೆ ತಲೆ ನೋವು ಬಂದರೆ ಇವನ್ನು ಹೇಗೆ ತೆಗೆದುಕೊಳ್ಳಲಿ ಎಂದು ತಿಳಿಸುವಿರಾ?' ಎಂದು ಕೇಳಿದ!

## ಮಾನವನು ದಾನವನಾಗದಿರಲು

ಜೀವವಿಕಾಸ ಸೌಧದ ಉತ್ತುಂಗ ಶಿಖರವನ್ನೇರಿದ ಮಾನವನು ಆಧುನಿಕ ವಿಜ್ಞಾನ ಯುಗದ ಸುಖ ಸಂಪತ್ತಿನ ಸವಿಯುಂಡು ಆಂತರ್ಯದಲ್ಲಿ ಸೊರಗಿ ಬಾಳುವ ಪರಿಯು ಕೆಲವು ಪರಿಚಯವನ್ನಷ್ಟೆ ಇಲ್ಲಿ ಮಾಡಲಾಗಿದೆ. ವೈಜ್ಞಾನಿಕ ಅನ್ವೇಷಣೆಗಳಿಂದಾಗಿ ವ್ಯಾವಹಾರಿಕ ಜಗತ್ತಿಂದು ಚಿಕ್ಕದಾಗಿದೆ ನಿಜ. ಬೊಂಬಾಯಿಯಲ್ಲಿ ಬ್ರೇಕ್‌ಫಾಸ್ಟ್ ಮಾಡಿದ ಮನುಷ್ಯನಿಂದು ಲಂಡನ್ನಿನಲ್ಲಿ ಲಂಚ್ ಮುಗಿಸಿ, ಡೆನ್ಮಾರ್ಕಿನಲ್ಲಿ ಡಿನ್ನರ್ ಪೂರೈಸಿ, ಸಿಡ್ನಿಯಲ್ಲಿ ನಿದ್ದೆಯನ್ನು ಅನುಭವಿಸಬಹುದಾಗಿದೆ. ಹೊರಗಿನ ಸುಖ ಸೌಕರ್ಯಗಳು ಹೆಚ್ಚಿದಷ್ಟೂ ಆಂತರಿಕ ವ್ಯವಹಾರದಲ್ಲಿ, ಪರಸ್ಪರ ಪ್ರೀತಿ, ವಿಶ್ವಾಸ, ಸೌಹಾರ್ದಗಳನ್ನು ತೋರಿಸುವಲ್ಲಿ ಆತನಿಂದು ವಿಫಲನಾಗಿದ್ದಾನೆ. 'ಜೀವನ ನಶ್ವರ' ಎಂಬ ನಿತ್ಯ ಸತ್ಯವನ್ನರಿತೂ, 'ತಾನು, 'ತನ್ನದು' ಎಂಬ ಸ್ವಾರ್ಥ ಮನೋಭಾವದ ಮಹಾಪೂರದಲ್ಲಿ ಮುಳುಗಿದ ಆವನು ಪೂರ್ವಾಪರ ವಿವೇಚನಾ ಸಾಮರ್ಥ್ಯವನ್ನು ಕಳೆದುಕೊಂಡು ಸೇಚಗೆ ಸಿಲುಕಿದ್ದಾನೆ. ಈ ಲೇಖನದ ಆರಂಭದಲ್ಲಿ ಹೇಳಿದ ಶೂರ ರಾಜನು ಇಬ್ಬರು ಹೆಂಡಿರ ಸಹವಾಸದಿಂದ 'ತಲೆ' ಕಳೆದುಕೊಂಡಂತೆ, ಆಧುನಿಕ ಮಾನವನು ಸತ್ಸಂಗದಿಂದ ದೂರಾಗಿ ಕಲಿತ ದುರ್ಗುಣಗಳಿಂದಲೂ, ಮನದಲ್ಲಿ ಮಾಟದೇಳುವ ಬೆಂಬಿಡದ ಬಯಕೆಗಳ ಭದ್ರ ಕೋಟೆಯಿಂದಲೂ ತನ್ನನ್ನೇ ತಾನು ಬಂಧಿಸಿಕೊಂಡು 'ಬೆಲೆ' ಕಳೆದು ಕೊಂಡಿದ್ದಾನೆ. ವಿನಾಶದತ್ತ ತನಗರಿವಿಲ್ಲದಂತೆ ಪಯಣಿಸುತ್ತಿದ್ದಾನೆ. ನ್ಯಾಯ, ನೀತಿ, ಧರ್ಮದ ಚೌಕಟ್ಟಿನಲ್ಲಿ, ಸತ್ಯದ ಪಥದಲ್ಲಿ ಮುನ್ನಡಿಯಿಟ್ಟಿರುವ ಪ್ರಸುತ್ತ ಸಮಾಜದ ಬಂಧುಗಳಿಗ ಇಂಥವರೂ ಇದ್ದಾರೆ ಜಾಗ್ರತೆ' ಎನ್ನುವುದಕ್ಕಿಂತ 'ಇಂಥವರೇ ಇದ್ದಾರೆ' ಎಂದು ಎಚ್ಚರಿಕೆಯನ್ನ ನೀಡಿ, ಅವರು ನಿರ್ಭೀತರಾಗಿ, ಸುಲಭದಿಂದ ಸಾರ್ಥಕ ಬಾಳ್ವೆ ನಡೆಸುವಂತಾಗಬೇಕು ಎನ್ನುವುದೇ ಈ ಲೇಖನದ ಉದ್ದೇಶ.

# ಕರ್ನಾಟಕ ಕಾಲೇಜ್ ಸ್ಥಾಪನೆಯ ಹಿನ್ನೆಲೆ

ನಮ್ಮ ಜೂನ್ ಸಂಚಿಕೆಯಲ್ಲಿ ರೊದ್ದ ಶ್ರೀನಿವಾಸರಾಯರ ಚರಿತ್ರೆಯು ಸಂಗ್ರಹರೂಪದಲ್ಲಿ ಬಂದ ನಂತರ ಜುಲೈ ಸಂಚಿಕೆಯಲ್ಲಿ ಅದಕ್ಕೆ ಪೂರಕವೆಂಬಂತೆ ಶ್ರೀ ಸಂ. ಬ. ಸಾಸನೂರವರ ಲೇಖನ ಬಂತು ಈಗ ಶ್ರೀ ಮುದಗಲ್ಲರು ಆ ಕಾಲದ (ಕರ್ನಾಟಕ ಕಾಲೇಜಿನ ಸ್ಥಾಪನೆ ತೂಗುಯ್ಯಾಲೆಯಲ್ಲಿದ್ದ ಕಾಲದ) ಪತ್ರಿಕೆಯೊಂದರ ಎರಡು ಸಂಪಾದಕೀಯ ಅವತರಣಿಕೆಗಳನ್ನು ಇಲ್ಲಿ ಎತ್ತಿಕೊಟ್ಟಿದ್ದಾರೆ. ಇದರಲ್ಲಿ ವ್ಯಕ್ತವಾಗುವ ಅನೇಕ ಅಂಶಗಳು ಇತಿಹಾಸ ಕುತೂಹಲಿಗಳಿಗೆ ಇನ್ನಷ್ಟು ಆಹಾರ ಒದಗಿಸಬಲ್ಲವು.

ಪ್ರಲ್ಹಾದ ಮುದಗಲ್

ಕಸ್ತೂರಿ'ಯ ಜುಲೈ ೧೯೮೪ ರ ಸಂಚಿಕೆಯಲ್ಲಿ ಶ್ರೀ ಸಂ. ಬ. ಸಾಸನೂರು ಅವರು ಬರೆದ 'ಕರ್ನಾಟಕ ಕಾಲೇಜಿನ ಸೊಗ ಸೊತ್ತು ಜೋಡೆತ್ತು' ಲೇಖನ ಓದಿದೆ. ಉತ್ತಮವಾಗಿದೆ. ಶ್ರೀ ಸಾಸನೂರು ಅವರು ತಮ್ಮ ಈ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವ ಲೇಖನ ಬರೆಯುವ ಮೊದಲು ಆಗಿನ ಕಾಲದ ಕನ್ನಡ ಪತ್ರಿಕೆಗಳನ್ನು ಕೆಲವು ಮಟ್ಟಿಗೆ ಅಧ್ಯಯನ ಮಾಡಿ ಬರೆದಿದ್ದಾರೆ ಎಂದು ಕಲ್ಪಿಸುವೆ. ಆದರೆ 'ಸಚಿತ್ರ ಭಾರತ'ದ ಸಂಪಾದಕರಾಗಿದ್ದ ದಿ. ಕೆರೂರ ವಾಸುದೇವಾಚಾರ್ಯರು ಬರೆದ ಎರಡು ಲೇಖನಗಳು ಅವರಿಗೆ ನೋಡಲು ದೊರಕಿದಂತೆ ತೋರದು. ಒಂದು ವೇಳೆ ದೊರಕಿದ್ದರೂ ಅವರಿಗೆ ಅಷ್ಟು ಮಹತ್ವದ್ದೆಂದು ತೋರಿರಲಿಕ್ಕಿಲ್ಲ. ಏನೇ ಇರಲಿ, ಸಾಸನೂರು ಅವರ ಲೇಖನದಲ್ಲಿ 'ಸಚಿತ್ರ ಭಾರತ'ದ ಉಲ್ಲೇಖ ನನಗೆ ಕಾಣಲಿಲ್ಲ. 'ಸಚಿತ್ರ ಭಾರತ' ಎಂಬ ಕನ್ನಡ ಮಾಸಪತ್ರಿಕೆ ಈ ಶತಮಾನದ ಪೂರ್ವಾರ್ಧದಲ್ಲಿ ಸಾಕಷ್ಟು ಪ್ರಚಲಿತವಿತ್ತೆಂಬ ಸಂಗತಿಯನ್ನು ಕುರಿತು ಆಧುನಿಕ ಕನ್ನಡ ಸಂಶೋಧಕರಿಗೆ ಅರಿವು ಇದೆ

ಎಂದು ನಾನು ಭಾವಿಸುವೆ.

ಕೆರೂರ ವಾಸುದೇವಾಚಾರ್ಯರು 'ಸ್ಫುಟ ವಿಷಯ–ಕರ್ನಾಟಕ ಕಾಲೇಜ' ಮತ್ತು 'ಕರ್ನಾಟಕ ಕಾಲೇಜ' ಎಂಬ ಅಗ್ರಲೇಖಗಳನ್ನು ಕ್ರಮಶಃ 'ಸಚಿತ್ರ ಭಾರತ'ದ ಸಂಚಿಕೆ ೧೯೧೫-೭ ಮತ್ತು ೧೯೧೫-೮ ಗಳಲ್ಲಿ ಬರೆದಿದ್ದಾರೆ. ಇವರಲ್ಲಿ ಕೆಲವು ಅಣಿಮುತ್ತಿನಂತಹ ವಿಚಾರಗಳಿವೆ. ನನಗೆ ಮಹತ್ವವೆನಿಸಿದ ಅಂಶಗಳನ್ನು ಕೆಳಗೆ ತೋರಿಸಿದ್ದೇನೆ.

"ಹಿಂದುಸ್ಥಾನದಲ್ಲಿಯ ಎಲ್ಲ ಪ್ರಾಂತಗಳಲ್ಲಿಯೂ ಕಾಲೇಜಗಳಿದ್ದು ನಮ್ಮ ಕರ್ನಾಟಕದಲ್ಲಿ ಮಾತ್ರ ಅಂಥ ಸಂಸ್ಥೆಯಿಲ್ಲ. ಈ ಬಗ್ಗೆ ವಿಚಾರಶೀಲರಾದ ಕನ್ನಡಿಗರು ಸರಕಾರದೊಡನೆ ವಾದ ನಡೆಸಿ ಕರ್ನಾಟಕಕ್ಕೆ ಕಾಲೇಜವು ಬೇಕೇಬೇಕೆಂದು ಆಗ್ರಹತೊಟ್ಟ ಮೇರಿಗೆ ಕರ್ನಾಟಕಸ್ಥರು ಸರಕಾರಕ್ಕೆ ಎರಡು ಲಕ್ಷ ರೂಪಾಯಿಗಳನ್ನು ಕೂಡಿಸಿ ಕೊಟ್ಟರೆ ನಾವು ಧಾರವಾಡದಲ್ಲಿ ಒಂದು ಕಾಲೇಜವಿರುವಂತೆ ಮಾಡಿಕೊಡುತ್ತೇವೆಂದು ಮುಂಬಯಿಯ ಗವ್ಹರ್ನರರಾದ ಲಾರ್ಡ ಸಿಡೆನ್‌ಹ್ಯಾಮ ದೊರೆಗಳವರು ಅಭಿವಚನವನ್ನಿತ್ತರು.

"ಆ ಮೇರಿಗೆ ಮುಂಬಯಿ ಇಲಾಖೆಯಲ್ಲಿರುವಂಥ ಧನವಂತರಾದ ಸದ್ಗೃಹಸ್ಥರು, ಕರ್ನಾಟಕದ ಅಭಿಮಾನಿಗಳು ಹಣ ಕೂಡಿಸಲಾರಂಭಿಸಿದರು. ಆದರೆ ಈ ಕೆಲಸವು ಬಹಳೇ ಮಂದವಾಗಿ ನಡೆದಿರುವದರಿಂದ ಹೋದ ವರ್ಷವೇ ಸ್ಥಾಪಿತವಾಗತಕ್ಕ ಕಾಲೇಜದ ಕೆಲಸವು ಮುಂದೆ ಬಿದ್ದು ಹೋಗಿದೆ. ಆದರೂ ಸರಕಾರದವರ ವಿಚಾರದಲ್ಲಿ ವ್ಯತ್ಯಾಸವಾಗಿಲ್ಲ. ಕರ್ನಾಟಕದಲ್ಲಿ ಕಾಲೇಜದ ಸ್ಥಾಪನವು ಆವಶ್ಯವೋ ಇಲ್ಲವೋ ಎಂಬ ಬಗ್ಗೆ ಸರಕಾರದವರು ಮುಂಬಯಿ ಯುನಿವ್ಹರ್ಸಿಟಿಯವರ ಅಭಿಪ್ರಾಯವನ್ನು ಕೇಳಿದಲು ಆ ವಿಶ್ವವಿದ್ಯಾಲಯದ ಸಂಸ್ಥೆಯವರು ಕಾಲೇಜದ ಅವಶ್ಯಕತೆ ಇರುವದೆಂದು ಹೇಳಿರುತ್ತಾರೆ. ಕರ್ನಾಟಕದಲ್ಲಿ ಕಾಲೇಜವಿಲ್ಲದ್ದಕ್ಕಾಗಿ ನಮ್ಮಲ್ಲಿಯ ವಿದ್ಯಾರ್ಥಿಗಳು ಪುಣೆ, ಮುಂಬೈ, ಕೊಲ್ಲಾಪೂರ ಮುಂತಾದ ಪರಸ್ಥಳಕ್ಕೆ ಹೋಗಿ ಅನೇಕವಾದ ತೊಂದರೆಗಳನ್ನು ಅನುಭವಿಸಿದರು. ಮುಂಬೈ ಇಲಾಖೆಯಲ್ಲಿರುವ ಕಾಲೇಜಗಳಲ್ಲಿ ವಿದ್ಯಾರ್ಥಿಗಳ ಸಂದಟ್ಟಣವು ವಿಲಕ್ಷಣವಾಗಿದ್ದು ಸ್ಥಳದ ಅನನುಕೂಲತೆಯ ಮೂಲಕ ಪ್ರತಿ ವರ್ಷ ಮುನ್ನೂರು ನಾನೂರು ಜನ ವಿದ್ಯಾರ್ಥಿಗಳು ಶಿಕ್ಷಣವಿಲ್ಲದೆ ಮನೆಯಲ್ಲಿ ಉಳಿಯುತ್ತಾರೆ. ಪುಣೆ–ಮುಂಬೈಯಲ್ಲಿ ಕಲಿಯುತ್ತಿರುವ ಕರ್ನಾಟಕಸ್ಥರಾದ ವಿದ್ಯಾರ್ಥಿಗಳ ಸಂಖ್ಯೆಯು ೫೦೦ (ಐನೂರು)ಕ್ಕೆ ಹೆಚ್ಚಾಗಿರುವದು. ಬಡವರಾದವರು ದ್ರವ್ಯದ ಅನುಕೂಲತೆಯಿಲ್ಲದ ಮೂಲಕ ನಿರುಪಾಯವಾಗಿ ಮನೆಯಲ್ಲಿ ಕುಳಿತುಕೊಳ್ಳುತ್ತಾರೆ. ಅಂಥವರ ಸಂಖ್ಯೆಯಾದರೂ ದೊಡ್ಡದೇ ಆಗಿರುತ್ತದೆ.

"ಯುನಿವ್ಹರ್ಸಿಟಿ, ಕಾಲೇಜ, ಹಾಯಸ್ಕೂಲ ಮುಂತಾದ ವಿದ್ಯಾಮೃತವನ್ನೀಯುವ ಶಿಕ್ಷಣ ಸಂಸ್ಥೆಗಳ ಸೌಕರ್ಯವುಳ್ಳ ಪ್ರಾಂತದ ಜನರು ವಿದ್ವಾಂಸರೂ ಸುಸಂಸ್ಕೃತರಾದ ಆಚಾರವಿಚಾರಗಳುಳ್ಳವರೂ ದುರ್ಗುಣಗಳ ದ್ವೇಷಿಗಳೂ ಆಗಿದ್ದು ತಾವಿರುವ ಪ್ರಾಂತಗಳ ಉನ್ನತಿಯನ್ನು ಬಹುಪರಿಯಾಗಿ ಮಾಡುತ್ತಿರುವದನ್ನು ನಾವು ನೋಡಿರುವೆವಷ್ಟೆ? ಪುಣೆ, ಮುಂಬೈ, ಬಂಗಾಲ, ಅಲಹಾಬಾದ, ಮದರಾಸ ಮುಂತಾದ ಪ್ರಾಂತಗಳು ಉಳಿದ ಪ್ರಾಂತಗಳಿಗಿಂತ ಸುಧಾರಿಸಿ ಮೆರೆಯುತ್ತಿರುವದೇಕೆ? ಸ್ವದೇಶಾಭಿಮಾನಿಗಳ ಪುರಸ್ಕರ್ತರೆಂದರೆ ಅವೇ ಪ್ರಾಂತಗಳ ಜನರು. ಸರಕಾರದ ಆಧಾರಸ್ತಂಭರಾಗಿ ದೊಡ್ಡ ದೊಡ್ಡ ಅಧಿಕಾರಗಳನ್ನು ಪಡೆದವರೆಂದರೆ ಅಲ್ಲಿಯವರೇ. ಕಾಲೇಜಗಳಲ್ಲಿ ಪ್ರೊಫೇಸರರಾಗಿ ಲೋಕಶಿಕ್ಷಣದ ಕಾರ್ಯವನ್ನು ಕೈಕೊಂಡವರೆಂದರೆ ಆ ಪ್ರಾಂತಗಳ ನಿವಾಸಿಗಳೇ. ವರ್ತಮಾನಪತ್ರಗಳನ್ನು ತೆಗೆದು ಲೋಕದ ರಾಜಕೀಯ, ಸಾಮಾಜಿಕ, ಔದ್ಯೋಗಿಕ ಮುಂತಾದ ಉನ್ನತಿಗಳನ್ನು ಉಂಟುಮಾಡುವವರೆಂದರೆ ಆ ಸುಸಂಸ್ಕೃತರಾದ ಜನಾಂಗದವರೇ. ನಾವು ಮಾತ್ರ ಕೇವಲವಾದ ಹಿಮ್ಮೇಳದವರು!!!

"ಕಾಲೇಜದ ಮಹತ್ವವು ಇಷ್ಟು ಉತ್ಕೃಷ್ಟವಾಗಿದ್ದರೂ ಅಂಥ ಸಂಸ್ಥೆಗಳನ್ನು ನಮ್ಮಲ್ಲಿ

ತಂದುಕೊಳ್ಳುವ ಉದ್ಯೋಗವು ನಮ್ಮ ಕರ್ನಾಟಕಸ್ಥರಲ್ಲಿ ಚೆನ್ನಾಗಿ ಜಾಗೃತವಾಗಿಲ್ಲವೆಂಬುದನ್ನು ಕಂಡು ನಮಗೆ ವಿಷಾದವಾಗುತ್ತದೆ. ಮುಂಬಯಿ ಸರಕಾರದವರು ಕೃಪಾವಂತರಾಗಿ ನಿಮಗೆ ಕಾಲೇಜವನ್ನು ಕೊಡುತ್ತೇವೆಂದು ಹೇಳಿದರೂ ನಿದ್ರೆಯ ಸುಖನಿಂದ ಗ್ರಸ್ತರಾಗಿದ್ದ ಕನ್ನಡಿಗರು ಸಂಪೂರ್ಣವಾಗಿ ಎಚ್ಚರಗೊಳ್ಳದೆ ಅರೆಗಣ್ಣು ತೆರೆದು, ಏನು? ಕಾಲೇಜವೇ? ಅದೇಕೆ? ಎಂದು ಕೇಳುತ್ತಿರುವದನ್ನು ಕಂಡು ಯಾವ ವಿದ್ಯಾಭಿಮಾನಿಗೆ ವ್ಯಸನವಾಗಲಿಕ್ಕಿಲ್ಲ?

"ಕರ್ನಾಟಕದ ಜನರು ವಿದ್ಯೆಯಲ್ಲಿ ಹಿಂದುಳಿದವರೆಂದು ಯಾರಾದರೂ ಅಂದರೆ ಕಂಡದ್ದ ನಾಡಿದರೆ ಕೆಂಡದಂತಾಗುವದು ಎಂಬಂತೆ ನಮ್ಮ ಬಾಂಧವರು ಕಣ್ಣು ಕೆಂಪಗೆ ಮಾಡಿ, ತಾವು ಶಂಕರಾಚಾರ್ಯ, ಬಸವೇಶ್ವರ ಮುಂತಾದ ಮಹಾತ್ಮರ ಪಟ್ಟಶಿಷ್ಯರೆಂದೂ ವಿದ್ಯಾರಣ್ಯ, ಜಯತೀರ್ಥ ಮುಂತಾದ ಘನವಿದ್ವಾಂಸರ ದೇಶಬಾಂಧವರೆಂದೂ ನರಪತಿ, ಗಜಪತಿ ಮುಂತಾದ ಸಾರ್ವಭೌಮರಾದ ಕ್ಷತ್ರಿಯರ ಹಿರಿಚಿಗಪ್ಪನ ಮಕ್ಕಳೆಂದೂ ಹೇಳಿ ಕರ್ನಾಟಕದ ಮಹಾತ್ಮರಿಂದಲ್ಲದೆ ಭಾರತ ಖಂಡವು ಗ್ರಾಮ್ಯವಾದ ದಿಶೆಯಲ್ಲಿ ಇರುತ್ತಿತ್ತೆಂದು ಕೂಗಿಕೊಳ್ಳುತ್ತಾರೆ."

"ಬಂಧುಗಳೇ, ನಿಮ್ಮ ಪಿತ್ರಾರ್ಜಿತವಾದ ಬಹುಮಾನಗಳೆಲ್ಲ ಅನ್ಯಾಕ್ರಾಂತವಾಗಿ ಹೋಗಿವೆ. ನೀವಿನ್ನು ಬಹು ಪ್ರಯಾಸಪಟ್ಟು, ಘನವಾದ ವಿದ್ಯೆಯನ್ನು ಗಳಿಸಿಕೊಂಡು ನಿಮ್ಮ ಕೀರ್ತಿಧ್ವಜವನ್ನು ಮತ್ತೆ ಭರತ ಖಂಡದಲ್ಲೆಲ್ಲ ಮೆರಿಸಲು ಸಮರ್ಥರಾಗದಿದ್ದರೆ ನಿಮ್ಮ ಪೂರ್ವಿಕರ ಕೀರ್ತಿಯಿಂದ ನಿಮಗೆ ತಿಲಮಾತ್ರವಾದರೂ ಪ್ರಯೋಜನವಾಗಲರಿಯದು".

"ಇನ್ನಾದರೂ ನೀವು ನಿಮ್ಮ ಮೈಯನ್ನು ಉಣ್ಣುತ್ತಿರುವ ಜಾಡ್ಯವನ್ನು ಜಾಡಿಸಿ ತೆಗದು ವಿದ್ಯಾರ್ಜನೆದ ಕಡೆಗೆ ಲಕ್ಷ್ಯವನ್ನು ಕೊಡಿರಿ. ನೋಡಿರಿ, ನಿಮ್ಮಲ್ಲಿ ಪುರಸ್ಕೃತರೆಂದವರು ಕಹಳೆ, ತುತೂರಿ, ಡೊಳ್ಳು, ಧಿಮಿಕೆ, ಶಂಖವೇ ಮೊದಲಾದ ವಾದ್ಯಗಳ ನಿನಾದವನ್ನೆಬ್ಬಿಸಿ ನಿಮ್ಮನ್ನು ಸೋಮಾರಿತನ, ದುರ್ವಿಚಾರ ಅನಾಸ್ಥೆ ಮುಂತಾದ ನಿದ್ರಾಸ್ವಪ್ನಗಳಿಂದ ಎಚ್ಚರಿಸಲು ಪ್ರಯತ್ನಪಡುತ್ತಿರುವರು. ಏಳಿರಿ! ಫಲದ್ರೂಪವಾದ ಪ್ರಾಂತದಲ್ಲಿದ್ದುಕೊಂಡು ವ್ಯಾಪಾರ ಉದ್ದಿಮೆಗಳನ್ನು ಮಾಡಿ ನೀವು ಧನವನ್ನು ಕೇಳಿದರೆ ಇಲ್ಲವೆನ್ನಬೇಡರಿ, ಯಾರಾದರೂ ನಿಮಗೆ ಬಡವರೆಂದರೆ ನೀವು ಮೀಸೆಗೆ ಹುರಿಯಿಕ್ಕಿ, "ನಿನ್ನಂಥ ಹತ್ತು ಜನರನ್ನು ನಾನು ನನ್ನ ಮನೆಯಲ್ಲಿ ದುಡಿಯಲಿಕ್ಕೆ ಇಟ್ಟುಕೊಳ್ಳುವೆನು" ಎಂದು ಕುಪಿತರಾಗಿ ಹೇಳುವಿರಿ. ಕಾಲೇಜದ ಫಂಡಿಗೆ ಹಣ ಕೇಳಿದರೆ ನಿಮ್ಮ ಜಂಬವು ಅಡಗುವದದೇಕೆ?

"ಸರಕಾರದವರು ಬೇಡಿದ ಎರಡು ಲಕ್ಷ ರೂಪಾಯಿಗಳಲ್ಲಿ ರಾವಬಹಾದ್ದೂರ ರುದ್ರಗೌಡರು ನಮ್ಮ ಲಿಂಗವಂತ ಬಂಧುಗಳಿಂದ ಒಂದು ಲಕ್ಷ ರೂಪಾಯಿಗಳನ್ನು ಕೂಡಿಸಿ ಸಿದ್ಧ ಮಾಡಿಟ್ಟುಕೊಂಡಿರುವರಂತೆ. ಬೇರೆ ವರ್ಗದವರಿಂದ ಐವತ್ತೈದು ಸಾವಿರ ರೂಪಾಯಿಗಳನ್ನು ಕೂಡಿಸಿದ್ದಾಗಿ ತಿಳಿಯುತ್ತದೆ. ಇನ್ನುಳಿದವು ನಾಲ್ವತ್ತೈದು ಸಹಸ್ರರೂಪಾಯಿಗಳು ಮಾತ್ರ. ಇಷ್ಟು ಹಣವನ್ನು ಬೇಗನೆ ನಾವೆಲ್ಲರೂ ಕೂಡಿ ಕೊಡಬರಲಿಕ್ಕೆ ಏನಾಗಿದೆ?

"ಕರ್ನಾಟಕ ಕಾಲೇಜದ ಅಸೋಸಿಯೇಶನ್ನವರು ಈ ಮಾತಿಗಾಗಿ ಕರ್ನಾಟಕ ಬಾಂಧವರ ವಿಜ್ಞಾಪನೆಯನ್ನು ಮಾಡಿಕೊಂಡಿರುವರು. ಆ ವಿಜ್ಞಾಪನ ಪತ್ರಿಕೆಗಳು ಅನೇಕವಾದ ವರ್ತಮಾನಪತ್ರಗಳಲ್ಲಿ ಪ್ರಕಟವಾಗಿವೆ. ಅವುಗಳನ್ನು ಓದಿಕೊಂಡು ನಮ್ಮ ಬಾಂಧವರು ಬೇಗನೇ ನಾಲ್ವತ್ತೈದುಸಾವಿರ ರೂಪಾಯಿಗಳನ್ನು ಕೂಡಿಸಿ ತಮ್ಮ ಪ್ರಾಂತದಲ್ಲಿ ಕಾಲೇಜವನ್ನು ತಂದುಕೊಂಡು ತಮ್ಮ ಮಕ್ಕಳು ಮೊಮ್ಮಕ್ಕಳ ಹಿತವನ್ನು ಮಾಡಿ ಕರ್ತವ್ಯ ಋಣದಿಂದ ಮುಕ್ತರಾಗಬೇಕೆಂದು ನಾವು ಕೋರುತ್ತೇವೆ."

'ಕರ್ನಾಟಕ ಕಾಲೇಜ' ಎಂಬ ಅಗ್ರಲೇಖದಲ್ಲಿ ವಾಸುದೇವಾಚಾರ್ಯರು ಮೊದಲು ಪುಣೆ, ಮುಂಬೈಗಳಲ್ಲಿಯ ಕಾಲೇಜುಗಳಲ್ಲಿ ಪ್ರವೇಶ ಪಡೆಯುವದು ಎಷ್ಟು ಕಷ್ಟಕರವಾಗಿದೆ ಎಂಬು

ದನ್ನು ಹೇಳಿ, "ಕರ್ನಾಟವನ್ನುಳಿದು ಇತರ ಮೂರು ಭಾಗ(ಸಿಂಧ, ಗುಜರಾತ, ಮಹಾರಾಷ್ಟ್ರ)ಗಳಲ್ಲೆಲ್ಲ ಸರಕಾರದವರು ಕಾಲೇಜಗಳ ವ್ಯವಸ್ಥೆ ಮಾಡಿ ಹಳೆ ಮಾತಾಗಿದೆ. ಜನರಲ್ಲಿ ಶಿಕ್ಷಣವನ್ನು ಪ್ರಸಾರ ಮಾಡುವ ಕಾರ್ಯ ಭಾರವು ಸರಕಾರ ಹಾಗೂ ಪ್ರಜಾ ಈ ಉಭಯತರದೂ ಆಗಿರುತ್ತದೆ ಎಂಬ ಸಂಗತಿಯು ನಿಜವಾಗಿದ್ದರೂ ಜನರು ಅನುಕರಣ ಮಾಡಲು ಯೋಗ್ಯವಾದ ಶಿಕ್ಷಣ ಸಂಸ್ಥೆಗಳನ್ನು ಪ್ರತಿಯೊಂದು ಭಾಗದಲ್ಲಿ ಮಾದರಿಗಾಗಿ ಸ್ಥಾಪಿಸುವದು ಸರಕಾರದ ಕರ್ತವ್ಯವಾಗಿದೆಂದು ನಮ್ಮ ಮತವಿದೆ ಎಂದು ಹೇಳಿದ್ದಾರೆ. ಬ್ರಿಟಿಶ ಸರಕಾರವನ್ನು ಉದ್ದೇಶಿಸಿ ಈ ಬಗೆಯಾಗಿ ಬರೆದ ವಾಸುದೇವಾಚಾರ್ಯರು ಹೆಚ್ಚಿನ ಧೈರ್ಯ




"ಪೋಲಿಸರಿಂದ ಆದ ಅನುಭವವನ್ನು ಬರೆಯಲು ಸಾಧ್ಯವಿಲ್ಲ... ಬೇಕಿದ್ರೆ ನನ್ನ ಫೋಟೋ ತೆಗೆದುಕೊಳ್ಳಿ...."

ವಂತರೆ ಸರಿ. "ಧಾರವಾಡದಲ್ಲಿ ಕಾಲೇಜದ ಕಟ್ಟಡವು ಯಾವ ಸ್ಥಳದಲ್ಲಿ ಕಟ್ಟಲ್ಪಡಬೇಕೆಂಬ ವಿಷಯವಾಗಿ ಸರಕಾರದಲ್ಲಿ ವಿಚಾರ ನಡೆದು ಸ್ಥಳವು ಗೊತ್ತುಮಾಡಲ್ಪಟ್ಟಿತು. ಇವೆಲ್ಲ ಶುಭಸೂಚನೆಗಳ ಮೇಲಿಂದ ಒಂದೆರಡು ವರ್ಷಗಳ ಕಾಲಾವಧಿಯಲ್ಲಿಯೇ ಧಾರವಾಡದಲ್ಲಿ ಕಾಲೇಜವಾಗುವದೆಂದು ಜನರ ಮನವರಿಕೆಯಾಯಿತು. ಇಷ್ಟರಲ್ಲಿ ಕೈಯೊಳಗಿನ ತುತ್ತು ಬಾಯಿಯಲ್ಲಿ ಬೀಳಲಿಲ್ಲ ಎಂಬಂತೆ ಆಯಿತು. ಮುಂಬಯಿ ಇಲಾಖೆಯ ಶಿಕ್ಷಣ ಖಾತೆಯ ಡಾಯರೆಕ್ಟರರು ತಮ್ಮ ವಾರ್ಷಿಕ ರಿಪೋರ್ಟದಲ್ಲಿ ಮುಂಬಯಿ ಇಲಾಖೆಯಲ್ಲಿ ಉಚ್ಚ ಪ್ರತಿಯ ಶಿಕ್ಷಣ ವಿಷಯಕವಾದ ಮೂರು ಹೊಸ ಸಂಸ್ಥೆಗಳು ಬೇಕಾಗಿವೆಂದು ಅವರು ಸರಕಾರಕ್ಕೆ ತಿಳಿಸಿದ್ದರು. ಈ ಮೂರು ಸಂಸ್ಥೆಗಳು ಯಾವವೆಂದರೆ: (೧) ಮುಂಬಯಿಯಲ್ಲಿ ಕೇವಲ ಸ್ತ್ರೀಯರಿಗಾಗಿ ಒಂದು ಆರ್ಟ್ಸ ಕಾಲೇಜ (೨) ಪುಣೆಯಲ್ಲೊಂದು ಸಂಸ್ಕೃತ ಕಾಲೇಜ (೩) ಕರ್ನಾಟಕದಲ್ಲೊಂದು ಆರ್ಟ್ಸ ಕಾಲೇಜ. ಡಾಯರೆಕ್ಟರವರ ಈ ಸೂಚನೆಗೆ ಸರಕಾರದವರು ಕೊಟ್ಟಿರುವ ಉತ್ತರವೆಂದರೆ, ಮೇಲಿನ ಈ ಮೂರು ಸಂಸ್ಥೆಗಳಲ್ಲಿ ಮೊದಲಿನ ಎರಡು ಸಂಸ್ಥೆಗಳ ಆವಶ್ಯಕತೆಯು ಮಾತ್ರ ಇರುವಂತೆ ಸರಕಾರಕ್ಕೆ ತೋರುತ್ತದೆ. ಈ ಸಂಗತಿಯು ಪ್ರಸಿದ್ಧವಾದ ಕೂಡಲೆ ಜನರಲ್ಲಿ ಅತ್ಯಂತ ನಿರಾಶೆಯುಂಟಾಯಿತು ಎಂಬ ಸಂಗತಿಯು ಕಾಲೇಜು ಸ್ಥಾಪಿಸಲು ಹೋರಾಡಿದವರ ಮೇಲೆ ಮತ್ತು ಕನ್ನಡಿಗರ ಮೇಲೆ ಉಂಟಾದ ಆಘಾತದ ಚಿತ್ರವಾಗಿದೆ. ಇದಲ್ಲದೆ ಮುಂಬಯಿ ಕಾಯದೇ ಕೌನ್ಸಿಲಿನ ಸಭಾಸದರಾದ ದಿ. ಬಹಾದ್ದೂರ ಗೋಡಬೋಲೆ ಅವರು ಒಂದು ಸೂಚನೆಯನ್ನು ಕೌನ್ಸಿಲಿನಲ್ಲಿ ತರಕ್ಕವರಿದ್ದವರು. ಆ ಸೂಚನೆಯ ಮಥಿತಾರ್ಥ ಕರ್ನಾಟಕ ಕಾಲೇಜಕ್ಕಾಗಿ ಈ ವರೆಗೆ ಕೂಡಿದ ೧॥ (ಒಂದೂವರೆ) ಲಕ್ಷ ರೂಪಾಯಿಗಳನ್ನು ಪುಣೆಯ ಫರ್ಗ್ಯೂಸನ ಕಾಲೇಜದ ಚಾಲಕರಾದ ಡೆಕ್ಕನ ಎಜ್ಯುಕೇಶನ ಸೋಸಾಯಿಟಿಯವರ ಸ್ವಾಧೀನ ಮಾಡಿ, ಕರ್ನಾ

ಟಕದಲ್ಲಿ ಒಂದು ಕಾಲೇಜನ್ನು ಸ್ಥಾಪಿಸುವದಕ್ಕಾಗಿ ಆವರಿಗೆ ತಿಳಿಸುವದು ಹಾಗೂ ಗ್ರ್ಯಾಂಟ್ಸ ಇನ್ನ ಏಡ ಕಾಯಿದೆಯ ಪ್ರಕಾರ ಆ ಸೋಸಾಯಿಟಿ ಯವರಿಗೆ ಸರಕಾರದವರು ಸಹಾಯವನ್ನು ಮಾಡ ತಕ್ಕದ್ದು. ಆದರೆ ಯಾವ ಕಾರಣದಿಂದಲೋ ಈ ಸೂಚನೆ ಕೌನ್ಸಿಲಿನ ಮುಂದೆ ಬರಲಿಲ್ಲ. ಕರ್ನಾಟಕದ ಉಚ್ಚ ಪ್ರತಿಯ ಶಿಕ್ಷಣದ ರಥದ ಹಗ್ಗಗಳನ್ನು ಜಗ್ಗುವದಕ್ಕೆ ಸರಕಾರದವರಿಗೆ ಅನುಕೂಲ ವಿಲ್ಲದಿದ್ದರೆ ಶಿಕ್ಷಣದ ರಥವನ್ನು ನಿಂತಲ್ಲಿಯೇ ನಿಲ್ಲಿಸಿ ಜನರಾದರೂ ತಮ್ಮ ತಮ್ಮ ಮನೆಗೆ ಹೋಗುವರೋ ಹೇಗೆ? ಕರ್ನಾಟಕದ ತುಂಬೆಲ್ಲ ಉಚ್ಚ ಪ್ರತಿಯ ಶಿಕ್ಷಣದ ಪ್ರಸಾರವಾಗಿ, ಕರ್ನಾಟಕದಲ್ಲಿ ಸ್ವಾವಲಂಬನದ ಹೊಸ ವಿಚಾರಗಳ ಪ್ರಾದುರ್ಭಾವವಾಗಬೇಕೆಂದು ಕರ್ನಾಟಕಸ್ಥರ ಮನೀಷೆಯಾಗಿದ್ದರೆ ಶಿಕ್ಷಣ ಮೂಲಕವಾದ ಆಚಾರ ವಿಚಾರಗಳ ಪ್ರಗತಿಪರವಾದ ಜ್ಞಾನ ವೃಕ್ಷದ ಶೀತಲ ಛಾಯೆಯು ಕರ್ನಾಟಕಕ್ಕೆ ದೊರೆಯಬೇಕೆಂದು ಅಲ್ಲಿಯ ನಿವಾಸಸ್ಥರ ಅಭಿಲಾಷೆಯಾಗಿದ್ದರೆ, ಕರ್ನಾಟಕದ ಭಾವಿ ಸಂತತಿಯು ಹಿಂದುಸ್ಥಾನದೊಳಗಿನ ಉಳಿದ ಭಾಗಗಳಲ್ಲಿಯ ಸಂತತಿಗಳಗಿಂತ ಶಿಕ್ಷಣ ವಿಷಯದಲ್ಲಿ ಹಿಂದುಳಿಯಕೂಡದೆಂದು ಈಗಿನ ಸಂತತಿಯವರ ಭಾವನೆಯಾಗಿದ್ದರೆ ಆವರು ಸರಕಾರದವರು ಮಾಡಿದಾಗ್ಗೆ ಮಾಡತೊಲ್ಲರೇಕೆಂದು ಅಸ್ಪೃಹ-ಣೀಯವಾದ ಪರಾವಲಂಬನವನ್ನು ಸೇವಿಸ ಕೂಡದೆಂದು ನಮ್ಮ ವಿನಂತಿಯಿದೆ" ಎಂದು ಬರೆದ ವಾಸುದೇವಾಚಾರ್ಯರ ಲೇಖನಿ ಎಷ್ಟು ಬಲವುಳ್ಳದ್ದಾಗಿತ್ತು, ಎಂಬ ವಿಚಾರ ಬಾರದ ಇರದು.

"ಯುದ್ಧದ ಮೂಲಕ ಕಾಲೇಜು ಸ್ಥಾಪನೆ ೮–೧೦ ವರ್ಷಗಳ ವರೆಗೆ ಆಗುವ ಸಂಭವ ಕಾಣದು ಎಂಬುದನ್ನು ಮನದಲ್ಲಿಟ್ಟುಕೊಂಡು ಕರ್ನಾಟಕಸ್ಥರೇ ತಮ್ಮದೊಂದು ಶಿಕ್ಷಣಾತ್ಮಕವಾದ ಹೊಸ ಸೋಸಾಯಿಟಿ ಸ್ಥಾಪಿಸಿ, ಅಥವಾ ಧಾರವಾಡದಲ್ಲಿ ಈಗ್ಗೆ ಇರುವ ಕರ್ನಾಟಕ ಎಜ್ಯುಕೇಶನ ಸೋಸಾಯಿಟಿಯನ್ನು ಬೆಳೆಸಿ" ಎಂದು ಸೂಚಿಸಿದ್ದಲ್ಲದೆ ಪುಣೆಯ ನ್ಯೂ ಇಂಗ್ಲಿಷ್ ಸ್ಕೂಲು ಫರ್ಗ್ಯೂಸನ್ ಕಾಲೇಜು ದಲ್ಲಿ ಹೇಗೆ ರೂಪಾಂತರಗೊಂಡಿತೆಂಬುದನ್ನು ಹೇಳಿದ್ದಾರೆ.

'ಸಚಿತ್ರ ಭಾರತ'ದ ಇನ್ನೊಂದು ಸೂಚಿಕೆಯಲ್ಲಿ ಪ್ರಶಂಸನೀಯವಾದ ಸವು ಎಂಬ ಲೇಖವನ್ನು ವಾಸುದೇವಾಚಾರ್ಯರು ಬರೆದಿದ್ದಾರೆ. ಈ ಲೇಖನದ ಪ್ರಾರಂಭದ ಜಲಬಿಂದು ನಿಪಾತೇನ ಕ್ರಮಶಃ ಪೂರ್ಯತೇ ಘಟಃ ಎಂಬ ಸಂಸ್ಕೃತ ಉದ್ಧರಣೆಯನ್ನು ಕೊಟ್ಟು ಗುರುಗಳಾದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿ ತೋಂಟದಾರ್ಯರಮಠ, ಡಂಬಳ ಮತ್ತು ಗದಗ ಇವರು ಲಿಂಗಾಯತ ಎಜ್ಯುಕೇಶನ ಫಂಡಿಗೆ ೪೦೦೦ (ನಾಲ್ಕು ಸಾವಿರ) ರೂಪಾಯಿ ಕೊಟ್ಟ ಸಂಗತಿ ಮತ್ತು ಚೆನ್ನಬಸಪ್ಪಾ ನೀಲಿ ಚೆನ್ನಬಸಪ್ಪ ಶಿರಹಟ್ಟಿಯವರ ಕಾರ್ಯವನ್ನು ಮನಸಾ ಹೊಗಳಿದ್ದಾರೆ.

ಕರ್ನಾಟಕ ಕಾಲೇಜಿನ ಪ್ರತಿಯೊಂದು ಭಾಗಕ್ಕೆ ಇರುವ ಅನೇಕ ಹಿನ್ನೆಲೆಗಳಲ್ಲಿ ಇದು ಕೂಡ ಒಂದು ಹಿನ್ನೆಲೆ ಆಗಿದೆ. ಮುಂಬೈ ವಿಶ್ವವಿದ್ಯಾಲಯವನ್ನು ಕುರಿತು ಸಂಶೋಧನೆ ಮಾಡಿ ಡಾಕ್ಟರೇಟ್ ಪದವಿ ಪಡೆಯಲಾಗಿದೆ. ಆದರಂತೆ ಕರ್ನಾಟಕ ಕಾಲೇಜ ಎಂಬ ವಿಷಯದ ಮೇಲೆ ಸಂಶೋಧನೆ ಮಾಡಿ ಪ್ರಬಂಧವನ್ನು ಬರೆಯಲು ಕನ್ನಡಿಗರು ಮುಂದೆ ಬರಬೇಕು ಎಂಬುದೇ ಈ ಲೇಖನದ ಉದ್ದೇಶವಾಗಿದೆ. ✦



# ಬರ್ಜರ್ ವೈನಲ್ ಹಚ್ಚಿರಿ
## ಗೋಡೆಗಳು ನಿತ್ಯವೂ ಅಂದವಾಗಿ ಹಾಡಲಿ:
## ಹೊಸ ವರ್ಷ ಸುಖದಾಯಕವಾಗಲಿ

ಪ್ರತ್ಯೇಕ ವಿಷಯದಲ್ಲಿ ವೈನಲ್‌ಅನ್ನು ಯಾವುದೇ ಆಯಿಲ್ ಬೌಂಡ್ ಡಿಸ್ಟೆಂಪರ್‌ನೊಡನೆ ಸರಿಹೋಲಿಸಿರಿ. ಆಗ ತಿಳಿಯುವುದು ವೈನಲ್‌ನ ಹಿರಿಮೆ :

| | ವೈನಲ್ | ಆ.ಬೌ.ಡಿ. |
|---|---|---|
| ಫಿನಿಶ್ (ಹೊಳಪು) | ಸಮೃದ್ಧ, ನಯ | ಅಲ್ಪ |
| ಒಣಗಲು ಬೇಕಾಗುವ ಸಮಯ | 4 ತಾಸು | 12 ತಾಸು |
| ವಾಸನೆ | ಆಕರ್ಷಕ | ಅಸಹ್ಯ |
| ತೊಳೆಯಲು ಸಾಧ್ಯತೆ | ಚೆನ್ನಾಗಿದೆ | ಚೆನ್ನಾಗಿಲ್ಲ |
| ಬಣ್ಣದ ಸ್ಥಿರತೆ | ಉತ್ತಮ | ಸಾಮಾನ್ಯ |
| ಬಾಳಿಕೆ | ಹೆಚ್ಚು | ಕಡಿಮೆ |
| ಹಚ್ಚುವ ರೀತಿ | ವ್ಯತ್ಯಾಸವಿಲ್ಲ | |

ಎಲ್ಲಕ್ಕಿಂತ ಹೆಚ್ಚಿನ ಗುಣ 5 ಕೆಜಿ ಆಯಿಲ್ ಬೌಂಡ್ ಡಿಸ್ಟೆಂಪರ್ ಬೇಕಾಗುವ ಜಾಗಕ್ಕೆ 2 ಲೀಟರ್ ವೈನಲ್ ಸಾಕಾಗುತ್ತದೆ.




# ವೈನಲ್

ಪ್ರತಿಯೊಂದು ರೀತಿಯಲ್ಲಿಯೂ ಆಯಿಲ್ ಬೌಂಡ್ ಡಿಸ್ಟೆಂಪರ್‌ಗಿಂತ ಉತ್ಕೃಷ್ಟ.

British Paints
**BERGER**
WORLDWIDE

# ಸೊನ್ನೆ ಮತ್ತು ಅನಂತ

**ಸೊನ್ನೆ'** ಹಾಗೂ 'ಅನಂತ' ಭಾರತೀಯ ಹಿಂದೂ ವಿಚಾರಧಾರೆಯ ಅತ್ಯದ್ಭುತ ಕಲ್ಪನೆಗಳು. 'ಸೊನ್ನೆ' ಗಣಿತಕ್ಕೆ ಭಾರತದ ಕೊಡುಗೆಯಾದರೆ 'ಅನಂತ'- ಉಪನಿಷತ್ತಿನ ಮೂಲ ಮಂತ್ರ.

ವೇದಗಳ ಪ್ರಕಾರ ಮಾನವ ಜೀವನದ ಗುರಿ ಮತ್ತು ಪ್ರಯತ್ನ ಮೃತ್ಯುವಿನಿಂದ ಅಮೃತತ್ವಕ್ಕೆ ಏರುವುದು; ಶೂನ್ಯದಿಂದ ಅನಂತದೆಡೆಗೆ ಪ್ರಯಾಣ, ವೇದ ಪ್ರಾರ್ಥನೆ ಹೇಳುವಂತೆ, ಅಜ್ಞಾನದ ಕತ್ತಲಿನಿಂದ ಜ್ಞಾನದ ಬೆಳಕಿಗೆ ಸಾಗುವುದೇ ಮನುಷ್ಯನ ಹಂಬಲ. ಗಣಿತದ ವಿದ್ಯಾರ್ಥಿಯು ಮಟ್ಟಿಗೆ ಹೇಳುವುದಾದರೆ ಅವನು 'ಅಹಂ' ರಹಿತ ಶೂನ್ಯ (ಸೊನ್ನೆ) ದಿಂದ ಅತಿಪ್ರಜ್ಞೆಯ 'ಅನಂತ'ದ ಕಡೆಗೆ ಸಾಗುತ್ತಾನೆ.

ಈ ತತ್ವದ ಬಗ್ಗೆ ಪ್ರಸ್ತಾಪಿಸುತ್ತಾ ಕಾರ್ಲೈಲ್ ಹೇಳುತ್ತಾನೆ- 'ಜೀವನದ ಭಿನ್ನರಾಶಿಯ ಬೆಲೆಯನ್ನು ಏರಿಸಬೇಕಾದರೆ ಅಂಶ (numerator)ವನ್ನು ಹೆಚ್ಚಿಸುವುದರಿಂದಲ್ಲದೆ ಛೇದ (denominator) ವನ್ನು ಕಡಿಮೆ ಮಾಡಿಕೊಳ್ಳುವುದರಿಂದ ಮಾತ್ರ ಸಾಧ್ಯ. ಒಂದನ್ನು ಸೊನ್ನೆಯಿಂದ ಭಾಗಿಸಿದರೆ ಅನಂತ (infinity) ಸಿಗುವುದು. ನಿನ್ನ ಕೂಲಿಯ (ಸಂಬಳದ) ಹಕ್ಕನ್ನು ಸೊನ್ನೆಯನ್ನಾಗಿಸಿಕೋ. ಆಗ ಇಡೀ ಜಗತ್ತು ನಿನ್ನ ಕಾಲಡಿಯಲ್ಲಿರುವುದು!'

ಅವಶ್ಯಕತೆಗಳನ್ನು ಕಡಿಮೆ ಮಾಡಿಕೊಂಡಂತೆಲ್ಲಾ ಸಂತೋಷ ಹೆಚ್ಚುವುದು. ಅವಶ್ಯಕತೆಗಳಿಲ್ಲದ ಸೊನ್ನೆಯೇ ಸಂತೋಷದ ಅನಂತ ಸ್ಥಿತಿ! ಅದೇ ಪರಮ ಸುಖದ ಚರಮ ಸೀಮೆ. "ಶ್ರೀ'ಯವರ 'ಸುಖ ಜೀವನ' ಸೂತ್ರವೂ ಇದೇ!

ಫ್ಯಾಕ್ಟರಿಯ ಮಾಲಿಕನಿರಬಹುದು, ರೈಲ್ವೆ ಸ್ಟೇಷನ್ನಿನ ಪೋರ್ಟರ್ ಇರಬಹುದು-ಅವಶ್ಯಕತೆಗಳ ಮೇಲೆ ಹತೋಟಿ ಹೆಚ್ಚಿಸಿದಂತೆಲ್ಲಾ (ಅಂದರೆ ಕಾಲುಗಳನ್ನು ಹಾಸಿಗೆಗೆ ತಕ್ಕಂತೆ ಮಾಡಿಸಿಕೊಂಡಂತೆಲ್ಲಾ) ಸುಖ ಹೆಚ್ಚುವುದು. ಈ 'ಸುಖ' ಆತಂಕವನ್ನು ಕ್ಷಣ ಕಾಲ ಮರೆಸುವ 'ಸಿನೆಮಾ' ಸುಖವಲ್ಲ, 'ಬಾರಿ'ನ ಸುಖವಲ್ಲ-ಮನಸ್ಸಿಗೆ ನೆಮ್ಮದಿ ತರುವ 'ಕಾಯಂ' ಸುಖ. ಇಲ್ಲದಿದ್ದರೆ ಲಕ್ಷಾಂತರ ರೂಪಾಯಿಗಳನ್ನು ಸಂಪಾದಿಸಿದರೂ ಅವಶ್ಯಕತೆಗಳು ದ್ವಿಗುಣಗೊಂಡು ಸುಖ ಅರ್ಧವಾಗುತ್ತದೆ.

'ಶೂನ್ಯ' ಸಂಪಾದನೆಯ ಮಾರ್ಗವನ್ನು ನೋಡಿದ್ದಾಯಿತು. ಇನ್ನು 'ಅನಂತ'ದ ತಾರ್ಕಿಕ ವಿವರಣೆಯನ್ನು ಗಮನಿಸೋಣ:

೫ರಿಂದ ೫ನ್ನು ಕಳೆದರೆ ಉಳಿಯುವುದೇನು? ಸೊನ್ನೆ. ಇದೇ ಉತ್ತರ ೧೦೦೦ದಿಂದ ೧೦೦೦ ವನ್ನು, ಕೋಟಿಯಿಂದ ಕೋಟಿಯನ್ನು ಕಳೆದರೂ ಸಿಗುತ್ತದೆ. ಅಂದರೆ ಒಂದು ನಿರ್ದಿಷ್ಟ ಸಂಖ್ಯೆಯಿಂದ ಅದೇ ಸಂಖ್ಯೆಯನ್ನು ಕಳೆದರೆ ಉಳಿಯುವುದು ಶೂನ್ಯ. ಆದರೆ ಈ ಸಾಮಾನ್ಯ ತರ್ಕ (ಗಣಿತಶಾಸ್ತ್ರದ ಮೂಲತತ್ತ್ವ) ಅನಂತಕ್ಕೆ ಅನ್ವಯಿಸುವದಿಲ್ಲ! ಅನಂತವನ್ನು ಅನಂತದಿಂದಲೇ ಕಳೆದರೆ ಉಳಿಯುವುದು ಅನಂತವೇ.

ಈ ಸಮೀಕರಣದ ಮೂಲ ಮಂತ್ರ;

**ಪೂರ್ಣಸ್ಯ ಪೂರ್ಣಮಾದಾಯ**
**ಪೂರ್ಣಮೇವಾ ವಶಿಷ್ಯತೆ**

ಸಾಕ್ಷಾತ್ಕಾರ ಹೊಂದಿದ ಆತ್ಮಕ್ಕೆ ಜೀವನದ (ಇರುವಿಕೆಯ) ಹೋರಾಟವಾಯು, ತೀರಾ ಲೌಕಿಕ ತತ್ವಗಳು ಅನ್ವಯಿಸುವುದಿಲ್ಲ. ಮೇಲುನೋಟದ ಈ ಮಿತಿಗಳಿಂದ, ಋಣಾನುಬಂಧಗಳಿಂದ ಕಟ್ಟಿಹಾಕಲ್ಪಟ್ಟಿದ್ದರೂ, ತನ್ನಲ್ಲಡಗಿರುವ ಅನಂತತೆಯ ಅರಿವು ಅವನಿಗಿರುತ್ತದೆ; ಈ ಲೌಕಿಕ ತತ್ವಗಳ ಮಿತಿಯನ್ನು ಅವನು ಮೀರಿ ನಿಲ್ಲಬಲ್ಲನಾಗಿರುತ್ತಾನೆ.

**—ಡಾ. ಸಿ. ಎಸ್. ಸುನಂದನ**

ಅನ್ವೇಷಣೆಗೆ ಸುಳಿವು ನೀಡಿತು !

# ರೊಸೆಟ್ಟಾ ಶಿಲಾಶಾಸನ

**ಎಚ್. ಎಂ. ನಾಗರಾಜರಾವ್**

೧೭೯೯ ರ ಆಗಸ್ಟಿನ ಒಂದು ದಿನ. ಈಜಿಪ್ತನ್ನು ಗೆಲ್ಲಲು ಹೊರಟಿದ್ದ ನೆಪೋಲಿಯನ್ನನ ಸೈನಿಕನೊಬ್ಬ ನೈಲ್ ನದಿಯ ಪಶ್ಚಿಮ ತೀರದ ರಷೀದ್ ಅಥವಾ ರೊಸೆಟ್ಟಾ ಎಂಬ ಸ್ಥಳದ ಬಳಿ ಅಗೆಯುತ್ತಿದ್ದ. ಆತನ ಪಿಕಾಸಿಗೆ ಕಲ್ಲೊಂದು ಸಿಕ್ಕಿತು. ಮೀಟಿ ಹೊರತೆಗೆದಾಗ ಅದೊಂದು ಪುಟ್ಟ ಕಲ್ಲು ಚಪ್ಪಡಿಯಾಗಿತ್ತು. ಅದರ ಮೇಲೆ ಚಿತ್ರವಿಚಿತ್ರವಾದ ಅಕ್ಷರ – ವಿನ್ಯಾಸಗಳಿದ್ದವು. ಆತನಿಗೆ ಅದನ್ನು ಓದಲು ಸಾಧ್ಯವಾಗಲಿಲ್ಲ. ಆದರೂ ಅದನ್ನಾತ ಎಸೆಯದೆ ಸಂಗ್ರಹಿಸಿ ಇಟ್ಟದ್ದು ಮುಂದಿನ ಮಹತ್ವದ ಸಂಶೋಧನೆಗೆ ಕಾರಣವಾಯಿತು.

ಫ್ರೆಂಚ್ ಸೈನ್ಯ ಬ್ರಿಟಿಶ್ ಸೈನ್ಯಕ್ಕೆ ಸೋತು ಶರಣಾಗಬೇಕಾಯಿತು. ೧೮೦೧ರಲ್ಲಿ ಬ್ರಿಟಿಶರ ಕೈಸೇರಿದ ಯುದ್ಧವಸ್ತುಗಳಲ್ಲಿ ರೊಸೆಟ್ಟಾ ಶಾಸನವೂ ಒಂದು. ಇಂಗ್ಲೆಂಡಿಗೆ ಕಳುಹಿಸಲ್ಪಟ್ಟ ಈ ಶಾಸನ ಸ್ವಲ್ಪ ಕಾಲ ಸೊಸೈಟಿ ಆಫ್ ಆ್ಯಂಟಿಕ್ವೆರೀಸ್‌ನಲ್ಲಿದ್ದು ಅನಂತರ ಬ್ರಿಟಿಶ್ ಮ್ಯೂಸಿಯಂ ಸೇರಿತು. ಈಗಲೂ ಅದು ಅಲ್ಲಿಯೇ ಇದೆ.

ರೊಸೆಟ್ಟಾ ಶಾಸನದ ಶಿಲೆ ಮಜ್ರುದುಂಡೆ ಕಲ್ಲಿನ ಜಾತಿಗೆ ಸೇರಿದ್ದು, ಉದ್ದ ೪೫ ಅಂಗುಲ, ಅಗಲ ೨೮॥ ಅಂಗುಲ ಮತ್ತು ದಪ್ಪ ೧೧ ಅಂಗುಲಗಳು. ಶಾಸನವನ್ನು ಮೂರು ಲಿಪಿಗಳಲ್ಲಿ ಕಂಡರಿಸಿದೆ: ಚಿತ್ರಲಿಪಿ (ಈಗ ಉಳಿದುದು ೧೪ ಸಾಲು). ಡಿಮೋಟಿಕ್ ( ೩೨ ಸಾಲು ) ಮತ್ತು ಗ್ರೀಕ್ ( ೫೪ ಸಾಲು ). ಕಲ್ಲಿನ ಮೇಲ್ಭಾಗ, ಎಂದರೆ ಚಿತ್ರಲಿಪಿ ಇರುವ ಭಾಗ ತುಸು ಒಡೆದು ಹೋಗಿದೆ. ಈಜಿಪ್ತಿನ ಚಿತ್ರಲಿಪಿಯ ರಹಸ್ಯ



ರೊಸೆಟ್ಟಾ ಶಿಲಾಶಾಸನ

ವನ್ನು ಬಿಡಿಸುವಲ್ಲಿ ರೊಸೆಟ್ಟಾ ಶಾಸನದ ಪಾತ್ರ ಬಹಳ ಮಹತ್ವದ್ದು.

ಈ ಶಾಸನವನ್ನು ಓದಲು ಪ್ರಯತ್ನಿಸಿದ ಸಂಶೋಧಕರು ಅನತಿಕಾಲದಲ್ಲೇ ಗ್ರೀಕ್ ಭಾಗವನ್ನು ಓದಿ ಭಾಷಾಂತರಿಸುವಲ್ಲಿ ಯಶಸ್ವಿಯಾದರು. ದೊರೆ ಟಾಲೆಮಿ ಎಪಿಫೇನಸ್‌ನ ಪಟ್ಟಾಭಿಷೇಕದ ವಾರ್ಷಿಕೋತ್ಸವ ಸಮಾರಂಭದ ಸಂಬಂಧದಲ್ಲಿ ಮೆಂಫಿಸ್ ಪಟ್ಟಣದಲ್ಲಿ ನಡೆದ ಸಭೆಯಲ್ಲಿ ಅಂಗೀಕೃತವಾದ ನಿರ್ಣಯ ಈ ಶಾಸನದ ವಸ್ತುವಾಗಿತ್ತು. ಇಜಿಪ್ತಿಗೆ ದೊರೆ ನೀಡಿದ ಸೌಲಭ್ಯ ಸವಲತ್ತುಗಳೂ ಪ್ರತಿಯಾಗಿ ದೊರೆಗೆ ಸಲ್ಲಬೇಕಾದ ಗೌರವ ಕಾಣಿಕೆಗಳೂ ಇದರಲ್ಲಿ ಪ್ರಸ್ತಾಪಿಸಲ್ಪಟ್ಟಿದ್ದವು.

ಈಗಿನ ಲೆಕ್ಕಾಚಾರದಂತೆ ರೊಸೆಟ್ಟಾ ಶಾಸನದ ಕಾಲ ಕ್ರಿಸ್ತಪೂರ್ವ ೧೯೬ರ ಮಾರ್ಚ್ ೨೭ ಆಗುತ್ತದೆ.

ಗ್ರೀಕ್ ಭಾಗದಲ್ಲಿ ತಿಳಿಸಿದ ವಿಷಯವೇ ಉಳಿದೆರಡು ಲಿಪಿಗಳಲ್ಲಿ ರಚಿತವಾದ ಶಾಸನಗಳಲ್ಲಿಯೂ ಉಲ್ಲೇಖಗೊಂಡಿರಬೇಕೆಂದು ಸಹಜವಾಗಿಯೇ ಭಾವಿಸಲಾಯಿತು. ಆದರೆ ಈ ಊಹೆ ಸರಿಯೋ ತಪ್ಪೋ ಎನ್ನುವುದನ್ನು ಸಾಬೀತುಪಡಿಸುವುದು ಹೇಗೆ? ಚಿತ್ರಲಿಪಿಯ ಭಾಗಕ್ಕೆ ಸ್ವಲ್ಪ ಹಾನಿಯಾಗಿತ್ತು. ಅಲ್ಲದೆ ಚಿತ್ರಲಿಪಿ ಸಂಕೇತಾತ್ಮಕ ಸ್ವರೂಪದ ಬರಹವೆಂದು ಆಗ ಭಾವಿಸಲಾಗಿತ್ತು. ಆದ್ದರಿಂದ ಡಿಮೋಟಿಕ್ ಲಿಪಿಯನ್ನು ಓದಲು ಪ್ರಯತ್ನಿಸಲಾಯಿತು. ಇದು ಪ್ರಾಚೀನ ಇಜಿಪ್ತಿನ ಜನಸಾಮಾನ್ಯರು ದೈನಂದಿನ ವ್ಯವಹಾರಗಳಿಗೆ ಬಳಸುತ್ತಿದ್ದ ಲಿಪಿಯಾಗಿತ್ತು. ಫ್ರೆಂಚ್ ಪೌರಸ್ತ್ಯಪಂಡಿತ ಸಿಲ್ವೆಸ್ಟ್ರ ಡಿ. ಸಾಸಿ, ಸ್ವೀಡನ್ನಿನ ಜೇನ್ ಡೇವಿಡ್ ಆಕರ್‌ಬ್ಲಾಡ್ ಡಿಮೋಟಿಕ್ ಲಿಪಿಯ ಅಧ್ಯಯನದಲ್ಲಿ ಮೊದಲಿಗರೆನಿಸಿದರು. ಗ್ರೀಕ್ ಮತ್ತು ಡಿಮೋಟಿಕ್ ಶಾಸನಪಾಠಗಳನ್ನು ಹೋಲಿಸಿ ನೋಡಿ, ಗ್ರೀಕ್ ಪಾಠದಲ್ಲಿ ಉಲ್ಲೇಖಿಸಲ್ಪಟ್ಟ ಎಲ್ಲ ಹೆಸರುಗಳನ್ನು ಡಿಮೋಟಿಕ್ ಪಾಠದಲ್ಲಿ ಪತ್ತೆ ಹಚ್ಚಿ ತೋರಿಸಿಕೊಡುವಲ್ಲಿ ಆಕರ್‌ಬ್ಲಾಡ್ ಯಶಸ್ವಿಯಾದ. ಕಾಪ್ಟಿಕ್ ರೂಪಗಳಲ್ಲಿದ್ದ ಒಂದೆರಡು ನಾಮಪದಗಳನ್ನೂ ಆತ ಗುರುತಿಸಿದ. ಆದರೆ ಡಿಮೋಟಿಕ್ ವರ್ಣಮಾಲಾತ್ಮಕ ಲಿಪಿಯಾಗಿರಬೇಕೆಂಬ ತಪ್ಪು ಕಲ್ಪನೆಯಿಂದ ಆತ ಹೆಚ್ಚಿನ ಪ್ರಗತಿಯನ್ನು ಸಾಧಿಸಲಾರದೆ ಹೋದ.

ಅನೇಕ ವರ್ಷಗಳ ನಂತರ ೧೮೧೪ ರಲ್ಲಿ ಬ್ರಿಟಿಶ್ ವಿಜ್ಞಾನಿಯೂ ವೈದ್ಯನೂ ಆದ ಡಾ. ಥಾಮಸ್ ಯಂಗ್ ಎಂಬ ರೊಸೆಟ್ಟಾ ಶಾಸನದ ಅಧ್ಯಯನವನ್ನು ಆರಂಭಿಸಿದ. ಸಂಶೋಧನೆಯ ಹಾದಿ ಕಠಿಣವಾದಷ್ಟೂ ಆತನ ಕುತೂಹಲ ಹೆಚ್ಚತೊಡಗಿತು. ದಾರಿ ತೋರಬಲ್ಲ ಯಾವುದೇ ಸುಳಿವು ದೊರೆತಿರಲಿಲ್ಲ. ಮೊದಲ ಹಂತದಲ್ಲಿ ಪ್ರತಿಯೊಂದೂ ಊಹೆ, ಅನಂತರ ಆ ಊಹೆ ಪರಿಶೀಲನೆ–ಪರೀಕ್ಷೆಗಳಿಗೆ ಒಳಗಾಗಬೇಕಿತ್ತು. ಒಂದೊಂದು ಅಕ್ಷರದ ಪತ್ತೆಯೂ ಒಂದೊಂದು ಗಮನಾರ್ಹ ಘಟನೆಯಾಗುವಷ್ಟು ಪರಿಶ್ರಮದ ಕೆಲಸವಾಗಿತ್ತದು.

ಒಮ್ಮೆ ಡಾ. ಯಂಗ್ ಚಿತ್ರಲಿಪಿಯ ಏಳೆಂಟು ಚಿಹ್ನೆಗಳ ಸಮುದಾಯವನ್ನೊಳಗೊಂಡ ಒಂದು ಭಾಗವನ್ನು ಓದುವಲ್ಲಿ ಯಶಸ್ವಿಯಾದ. ಆದರೆ



ಅಂಡಾಕಾರದ ಉಂಗುರ ಹಾಗೂ ದೊರೆ ಟಾಲೆಮಿಯ ಹೆಸರು ಮತ್ತು ಬಿರುದು (ಬಲದಿಂದ ಎಡಕ್ಕೆ)

ಆತ ಓದಿದ ಚಿಹ್ನಗಳಲ್ಲಿ ಒಂದು ಮಾತ್ರ ಸರಿಯಾಗಿತ್ತೆಂದು ಅನಂತರ ಸ್ಥಿರಪಟ್ಟಿತು! ನಾಲ್ಕು ವರ್ಷಗಳ ನಿರಂತರ ಶ್ರಮದಿಂದ ಆತನಿಗೆ ಓದಲು ಸಾಧ್ಯವಾದುದು ಸುಮಾರು ತೊಂಬತ್ತು ಚಿಹ್ನೆಗಳು–ಎಂದರೆ ವರ್ಷಕ್ಕೆ ಇಪ್ಪತ್ತೈದು ಅಥವಾ ತಿಂಗಳಿಗೆ ಎರಡು ಚಿಹ್ನಗಳು ಮಾತ್ರ! ಈ ಪರಿಶ್ರಮಕ್ಕೆ ಬೆಲೆಕಟ್ಟಲಾದೀತೆ? ಡಾ. ಯಂಗನ ಅಭಿಪ್ರಾಯ ಸ್ಥೂಲವಾಗಿ ಹೀಗಿತ್ತು: (i) ಡಿಮೋಟಿಕ್. ಲಿಪಿ ವರ್ಣಾತ್ಮಕವಲ್ಲದ ಕೆಲವು ಚಿಹ್ನಗಳನ್ನು ಹೊಂದಿದೆ; (ii) ಕೊನೆಯ ಪಕ್ಷ ಕೆಲವಾದರೂ ಡಿಮೋಟಿಕ್ ಚಿಹ್ನೆಗಳು ಚಿತ್ರಲಿಪಿಯಿಂದ ವ್ಯುತ್ಪತ್ತಿಯಾದವು; (iii) ಚಿತ್ರಲಿಪಿಯ ಭಾಗದಲ್ಲಿನ ಅಂಡಾಕಾರದ ಉಂಗುರದೊಳಗೆ ದೊರೆ ಟಾಲೆಮಿಯ ಹೆಸರು ಹಾಗೂ ಬಿರುದುಗಳಿವೆ.

ಗ್ರೀಕ್ ಭಾಗದಲ್ಲಿದ್ದ ಟಾಲೆಮಿಯ ಹೆಸರನ್ನು ಚಿತ್ರಲಿಪಿಯ ಪಾಠದಲ್ಲಿ ಡಾ. ಯಂಗ್ ಗುರುತಿಸಿದುದು ಸರಿಯಾಗಿತ್ತು. ಅರಸ–ಅರಸಿಯರ ಹೆಸರನ್ನು ಅಂಡಾಕಾರದ ಉಂಗುರದೊಳಗೆ ಕೆತ್ತುತ್ತಿದ್ದರೆಂಬ ವಿಷಯ ಇದರಿಂದ ದೃಢಪಟ್ಟಿತ್ತು. ಆದರೆ ಉಳಿದ ಚಿತ್ರ ಚಿಹ್ನೆಗಳು ಸ್ವರ, ಅಕ್ಷರ, ಶಬ್ದ ಅಥವಾ ವಸ್ತು ಇತ್ಯಾದಿಗಳಲ್ಲಿ ಯಾವುದನ್ನು ಪ್ರತಿನಿಧಿಸುತ್ತವೆ ಎನ್ನುವ ಪ್ರಶ್ನೆಗೆ ಉತ್ತರವಿನ್ನೂ ದೊರೆತಿರಲಿಲ್ಲ.

ಇಂಗ್ಲೆಂಡಿನಲ್ಲಿ ಡಾ. ಯಂಗ್ ಚಿತ್ರಲಿಪಿಯ ಅಧ್ಯಯನದಲ್ಲಿ ನಿರಂತನಾಗಿದ್ದಾಗಲೇ ಫ್ರಾನ್ಸಿನಲ್ಲಿ ಫ್ರಾಂಕ್ ಷಾಂಪೋಲಿಯನ್ ಎಂಬ ವಿದ್ವಾಂಸನೊಬ್ಬ ಈ ಲಿಪಿಯ ಅಧ್ಯಯನದಲ್ಲಿ ಮಗ್ನನಾಗಿದ್ದ. ಈತನು ಡಾ. ಯಂಗ್‌ನಂತೆ ಹವ್ಯಾಸಿಯಾಗಿರಲಿಲ್ಲ. ಬಾಲ್ಯದಿಂದ ಈ ದಿಶೆಯಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡಿದ್ದ. ಇಜಿಪ್ತಿನ ಅಪರಿಚಿತ ಚಿತ್ರ ಬರಹಗಳೆಲ್ಲದರ ಪ್ರತಿಗಳ ಅಮೂಲ್ಯ ಸಂಗ್ರಹ ಈತನಲ್ಲಿತ್ತು. ತುಂಬ ಪ್ರತಿಭಾವಂತನಾಗಿದ್ದ ಈತ ತನ್ನ ಹನ್ನೆರಡನೆಯ ವಯಸ್ಸಿನಲ್ಲಿಯೇ 'ಎ ಹಿಸ್ಟರಿ ಆಫ್ ಫೇಮಸ್ ಡಾಗ್ಸ್' ಎಂಬ ಕೃತಿಯನ್ನು ರಚಿಸಿದ್ದ. ೧೮೦೭



ರಲ್ಲಿ ಶಾಲೆಯಲ್ಲಿ ಓದುತ್ತಿದ್ದ ಈತ ತನ್ನ ಪ್ರಬಂಧದ ಸರದಿ ಬಂದಾಗ 'ಈಜಿಪ್ಟ್ ಅಂಡರ್ ದಿ ಫೆರೋಸ್' ಎಂಬ ತನ್ನ ಅಪ್ರಕಟಿತ ಗ್ರಂಥದ ಪೀಠಿಕಾ ಭಾಗವನ್ನು ಓದಿದ. ಕಾಪ್ಟಿಕ್ ಭಾಷೆಯನ್ನು ಕುರಿತ ಈತನ ವಿದ್ವತ್ಪೂರ್ಣವಾದ ಪ್ರಬಂಧವನ್ನು ಮೆಚ್ಚಿದ ಅಧ್ಯಾಪಕ ವರ್ಗ ಅಂದಿನಿಂದಲೇ ಈತನನ್ನು ವಿದ್ಯಾರ್ಥಿ ಬೆಂಚಿನಿಂದ ಅಧ್ಯಾಪಕ ಕುರ್ಚಿಗೇರಿಸಿತು!

ಚಿತ್ರಲಿಪಿಯಲ್ಲಿನ ಉಂಗುರದೊಳಗೆ ಅರಸನ ಹೆಸರು ಪತ್ತೆಯಾದರೂ ಇತರ ಚಿಹ್ನೆಗಳ ಉಚ್ಚಾರ ಮತ್ತು ಧ್ವನಿಮೌಲ್ಯಗಳನ್ನು ಇನ್ನೂ ಕಂಡುಹಿಡಿಯಲಾಗಿರಲಿಲ್ಲ. ಷಾಂಪೋಲಿಯನ್ ಉಂಗುರದೊಳಗಿನ ಚಿಹ್ನೆಗಳಿಂದಲೇ ತನ್ನ ಅಧ್ಯಯನವನ್ನು ಆರಂಭಿಸಿದ. ಈತ ಕೂಡ ಇಜಿಪ್ಟಿನ ಚಿತ್ರಲಿಪಿ ಸಂಪೂರ್ಣವಾಗಿ ಸಂಕೇತಾತ್ಮಕವೆಂದೇ ಭಾವಿಸಿದ್ದ. ಕ್ರಮೇಣ ಪ್ರತಿಯೊಂದು ಚಿಹ್ನೆಯೂ ಒಂದೊಂದು ಧ್ವನಿಯ ಪ್ರತೀಕವೆಂಬುದನ್ನು ಅರಿತ. ಚಿತ್ರಲಿಪಿಯು ಭಾವರೂಪ ಮತ್ತು ಧ್ವನಿರೂಪಗಳಿಂದ ಕೂಡಿದ್ದೆಂಬ ಸತ್ಯ ಅರಿವಿಗೆ ಬಂದ ನಂತರ ಷಾಂಪೋಲಿಯನ್ನನ ಸಂಶೋಧನೆಯ ಪ್ರಗತಿ ಸುಗಮವಾಗಿ ಸಮಕಾಲೀನ ಇಜಿಪ್ಟ್ ಶಾಸ್ತ್ರಜ್ಞರ ಸಂಶೋಧನೆಯ ಪ್ರಗತಿಯನ್ನು ಹಿಂದೆ ಹಾಕಿತು. ಫಿಲೇ ಎಂಬಲ್ಲಿ ದೊರೆತ ದ್ವಿಭಾಷಾ ಶಾಸನವೊಂದು ಷಾಂಪೋಲಿಯನ್ನನ ಅಭಿಪ್ರಾಯಕ್ಕೆ ಪುಷ್ಟಿ ನೀಡಿತು. ಒಂದು ದಶಕದ ಪರಿಶ್ರಮದಿಂದ ಈತ ಚಿತ್ರಲಿಪಿಯ ಎಲ್ಲ ಅಕ್ಷರಗಳನ್ನೂ ಪತ್ತೆ ಹಚ್ಚಿದ.

'ಇಜಿಪ್ಟಿನ ಚಿತ್ರಲಿಪಿ ಕೇವಲ ಬರಹವಾಗಿರದೆ ಧ್ವನಿಮೌಲ್ಯದಿಂದ ಕೂಡಿದ್ದ' ಬರಹವೆಂಬ ಅಂಶ ಸಂಶೋಧನೆಯ ಹಾದಿಯನ್ನೇ ಬದಲಿಸಿತು. ೧೮೨೨ರ ಸೆಪ್ಟೆಂಬರಿನಲ್ಲಿ ಫ್ರೆಂಚ್ ವಿದ್ವಾಂಸರ ಸಭೆಯೊಂದರಲ್ಲಿ ಷಾಂಪೋಲಿಯನ್ ತನ್ನ ಸಂಶೋಧನೆಯ ಸಾರವನ್ನು ತಿಳಿಸಿದ. ೧೮೨೮ರಲ್ಲಿ ಇಜಿಪ್ಟಿಗೆ ಭೇಟಿ ನೀಡಿ, ಅಲ್ಲಿನ ವಿವಿಧ ಸ್ಮಾರಕಗಳ ಮೇಲಿನ ಮತ್ತು ಪಾಪಿರಸ್ ಹಾಳೆಗಳಲ್ಲಿನ ಚಿತ್ರ ಬರಹಗಳನ್ನು ಸರಾಗವಾಗಿ ಓದಿ ಭಾಷಾಂತರಿಸಿದ. ಇಜಿಪ್ಟಿನ ಚಿತ್ರಲಿಪಿಗೆ ಸಂಬಂಧಿಸಿದ ನಿಘಂಟು ಮತ್ತು ವ್ಯಾಕರಣ ಕೃತಿಗಳ ರಚನೆಯಲ್ಲಿ ತೊಡಗಿದ ಈತ ತನ್ನ ಸತತ ದುಡಿಮೆಯಿಂದ ಅಸ್ವಸ್ಥನಾಗಿ ನಲವತ್ತೆರಡರ ಹರೆಯದಲ್ಲಿಯೇ ಮೃತನಾದ. ಈತನ ಅಪೂರ್ಣ ಕೃತಿಗಳನ್ನು ಆವನ ಅಣ್ಣ ಪೂರ್ಣಗೊಳಿಸಿ ಪ್ರಕಟಿಸಿದ. ೧೮೬೬ರ ನಂತರ ರಿಚರ್ಡ್ ಲೆಪ್ಸಿಯಸ್ ಮುಂತಾದ ವಿದ್ವಾಂಸರಿಂದ ಷಾಂಪೋಲಿಯನ್ನನ ಅದ್ಭುತ ಕೆಲಸಕ್ಕೆ ಸೂಕ್ತ ಗೌರವ-ಮಾನ್ಯತೆ ಸಂದವು. ಇಂದು ಷಾಂಪೋಲಿಯನ್ನನ ನಿಘಂಟಿನ ಸಹಾಯದಿಂದ ನಮ್ಮ ವಿದ್ವಾಂಸರು ಇಜಿಪ್ಟಿನ ಚಿತ್ರಲಿಪಿಯನ್ನು ಹೆಚ್ಚಿನ ಕಷ್ಟವಿಲ್ಲದೆ ಓದಬಲ್ಲವರಾಗಿದ್ದಾರೆ.

ಡಾ. ಯಂಗ್ ಮತ್ತು ಷಾಂಪೋಲಿಯನ್ ಡಿಮೋಟಿಕ್ ಲಿಪಿಯ ಬಗ್ಗೆ ಗಮನ ಹರಿಸಿದರಾದರೂ ಹೆಚ್ಚಿನ ಪ್ರಗತಿ ಸಾಧಿಸಿರಲಿಲ್ಲ. ೧೮೫೫ರಲ್ಲಿ ಈ ಲಿಪಿಯನ್ನು ಕುರಿತು ಅಧ್ಯಯನ ಮಾಡಿದ ಜರ್ಮನಿಯ ಡಾ. ಹೆನ್ರಿ ಬ್ರುಗ್ ಕೃತಿಯೊಂದನ್ನು ರಚಿಸಿದರು. ಡಿಮೋಟಿಕ್ ಶಬ್ದಗಳನ್ನು ಚಿತ್ರಲಿಪಿಗೆ ಪರಿವರ್ತಿಸುವ ವಿಧಾನವನ್ನು ಇದು ತೋರಿಸಿಕೊಟ್ಟಿತು.

ಬ್ರಿಟಿಶ್ ಮ್ಯೂಸಿಯಂನಲ್ಲಿ ಸಾಮಾನ್ಯ ನೋಡುಗರ ಗಮನ ಸೆಳೆಯದ ಕಲ್ಲಿನ ತುಣುಕೊಂದರ ಹಿಂದೆ ಈ ಅದ್ಭುತ ಕತೆ ಅಡಗಿದೆ. ರೊಸೆಟ್ಟಾ ಶಾಸನ ಇಜಿಪ್ಟಿನ ಚಿತ್ರಲಿಪಿಯ ಸಂಶೋಧನೆಯ ರಸಾತ್ಮಕ ಅಧ್ಯಾಯಗಳಲ್ಲೊಂದು ಎನ್ನುವುದರಲ್ಲಿ ಸಂದೇಹವೇ ಇಲ್ಲ. ◆



# ಪ್ರತ್ಯಂಬೆಯ

ಮೂಲ : **ಅಹಮದ್ ದಾವೂದ್**
ಕನ್ನಡಕ್ಕೆ : **ಕುಂ. ವೀರಭದ್ರಪ್ಪ**

ಸ್ವೀಲಂ ಆ ಸುದ್ದಿಯನ್ನು ಊಟ ಮಾಡುವ ಕೋಣೆಗೆ ಹೊತ್ತು ತಂದ. ಊಟ ಮಾಡುತ್ತಿದ್ದವರು ಕೈಯಲ್ಲಿದ್ದ ತುತ್ತನ್ನು ತಟ್ಟೆಗೆ ಹಾಕಿ ಆತನ ಮುಖ ನೋಡಿದರು.

"ನಮ್ಮ ಊರ ಕಡೆಗೆ ಅವರು ದಂಡೆತ್ತಿ ಬರ್ತಿದ್ದಾರೆ. ಮಹಮದ್ ಮಜೀದನ ಮನೆಯಲ್ಲಿದ್ದಾಗ ನಾನವರ್ನ ನೋಡಿದೆ," ಇದು ಸ್ವೀಲಂ ಹೊತ್ತು ತಂದ ಸುದ್ದಿ.

"ಏನ್ ಏನೋ ಹೇಳ್ತೀಯಾ ಅಂದ್ಕೊಂಡಿದ್ದೆ. ಈ ವದಂತಿ ಕೇಳಿ ಕೇಳಿ ನನ್ನ ಕಿವಿ ಕಿವುಡಾಗಿ ಬಿಟ್ಟಿದೆ ನೋಡು." ನಿರಾಶೆಯಿಂದ ಅಜೀಜ್ ಸ್ವೀಲಂನ ಮಾತನ್ನು ತಳ್ಳಿಹಾಕಿದ "ಆಗೋ! ನೋಡಿ, ಸ್ವೀಲಂನ ಕಾಲುಗಳೆರಡೂ ಗಡಗಡ ನಡುಗುತ್ತಿರೋದ್ನ," ಎಂದು ತಮಾಷೆ ಮಾಡಿ ತಮ್ಮನ ಮುಖವನ್ನು ಸಪ್ಪಗಾಗಿಸಿದ.

ಅಷ್ಟರಲ್ಲಿ ತೀರಾ ಹತ್ತಿರದಲ್ಲೆ ಧಡ್ ಧಡ್ ಅಂತ ಹೆಜ್ಜೆಯ ಸದ್ದು ಕೇಳಿಸಿದ ಪರಿಣಾಮವಾಗಿ ಎಲ್ಲರ ಕಣ್ಣುಗಳು ಆಶ್ಚರ್ಯದಿಂದ ಅಗಲವಾದವು. ಯಾರಿಗೂ ಒಂದು ತುತ್ತನ್ನೆತ್ತಿ ಬಾಯಲ್ಲಿಟ್ಟುಕೊಳ್ಳಲಾಗಲಿಲ್ಲ. ಉಸಿರು ಬಿಗಿಹಿಡಿದು ರೆಪ್ಪೆ ಬಡಿಯದೆ ಹಾಗೆ ನೋಡುತ್ತಿದ್ದಂತೆಯೇ ಆಯುಧಗಳನ್ನು ಹಿಡಿದುಕೊಂಡಿದ್ದ ಸೈನಿಕರಿಬ್ಬರು ಗೂಡೊಳಗೆ ಕಾಣಿಸಿಕೊಂಡರು. ಬಹುಶಃ ತಂದೆ ಬಂದಿರಬೇಕೆಂದು ಅಜೀಜ್ ಮೌನವಾಗಿ ಯೋಚಿಸಿದ. ಉತ್ತರದ ನಿಲುವಿನ, ಸದೃಢ ಕಾಯದ ತಂದೆಯ ಬಗ್ಗೆ, ಆತ ಯೋಚಿಸದ ಸಮಯವೇ ಇರಲಿಲ್ಲ. ತಂದೆ 'ಫಿದಾಯೀನ್' ಸಂಸ್ಥೆಯ ಒಬ್ಬ ಸದಸ್ಯ. ಆತನ ಕಣ್ಣ ರೆಪ್ಪೆ ಪಟಲದ ಮೇಲೆ ತಂದೆಯ ರೂಪವೇ ಕೆತ್ತಲ್ಪಟ್ಟಿರುವುದು. ತಂದೆ ತನ್ನ ಬಂದೂಕನ್ನು ಯಾವಾಗಲೂ ಮಗುವಿನ ಹಾಗೆ ಹಿಡಿದುಕೊಂಡಿರುತ್ತಿದ್ದುದು ನೆನಪುಂಟು. ಆತ ಅವನ್ನು ಕೆಳಕ್ಕಿಳಿಸಿದನೆಂದರೆ ಎದುರಿಗಿರುವಾತನ ತಲೆ ಎಗರಿ ಅಷ್ಟು ದೂರದಲ್ಲಿ ಬಿದ್ದಿರುತ್ತದೆ ಎಂದೇ ಅರ್ಥ.

"ಅಸ್ಸಲಾಂವಾಲೇಕುಂ" ಕೋಣೆಯೊಳಕ್ಕೆ ಬಂದಿದ್ದ ಇಬ್ಬರ ಪೈಕಿ ಒಬ್ಬ ಅರಬ್ಬಿ ಭಾಷೆಯಲ್ಲಿ ನುಡಿದ. ನಿಜವಾಗಿ ಆತ ಯೋಧನಂತೆ ಕಾಣು ಬರುತ್ತಿರಲಿಲ್ಲ. ಆತ ಒಬ್ಬ ಅಧಿಕಾರಿ ಇದ್ದಿರಬೇಕೆಂಬುದರಲ್ಲಿ ಸಂಶಯವಿರಲಿಲ್ಲ. ಆತ ಆಡುತ್ತಿರುವ ಮಾತುಗಳನ್ನು ನೋಡಿದರೆ ಆತ

ಅರಬ್ಬೀ ದೇಶದವನಲ್ಲ ಎಂದು ಎಂಥವರಿಗೂ ತಿಳಿದುಬಿಡುವುದು.

ಏನು ಮಾಡುವುದೆಂದು ಯಾರಿಗೂ ಹೊಳೆಯಲಿಲ್ಲ. ತಾಯಿ ಮಾತ್ರ ಆ ನಮಸ್ಕಾರಕ್ಕೆ ಪ್ರತಿ ನಮಸ್ಕಾರ ಮಡಿದಳು.

ವೈಯಕ್ತಿಕವಾಗಿ ಅನುಭವಿಸಲು ಸಾಧ್ಯವಿದ್ದ ಎಂತಹ ನಾಗರಿಕ ಹಕ್ಕುಗಳನ್ನು ನಿರ್ದಯವಾಗಿ ದಮನ ಮಾಡಿರುವ ಸರ್ಕಾರದ ಬಗ್ಗೆ ಫಾತಿಮಾ ಬೇಗಂ ತುಂಬ ನೊಂದುಕೊಂಡಿರುವಳು. ಆ ಆಫೀಸರನ ಕ್ರೂರವಾದ ದೃಷ್ಟಿಯನ್ನು ಎದುರಿಸಲಾಗದೆ ಮುಖ ತಗ್ಗಿಸಿದಳು ಆಕೆ. ಆ ಕ್ಷಣ ಎಲ್ಲಿಯಾದರೂ ಅವಿತುಕೊಳ್ಳಬೇಕೆಂದು ಆಕೆಗೆ ಅನ್ನಿಸಿತು. ಆ ಅಧಿಕಾರಿ ತನ್ನ ಕೆಂಗಣ್ಣುಗಳನ್ನು ಕೇವಲ ತಾಯಿಯ ಮೇಲಷ್ಟೇ ಅಲ್ಲದೆ ಇತರರ ಕಡೆಗೂ ಚೆಲ್ಲಿ ಘಾಸಿಗೊಳಿಸುತ್ತಿರುವನು. ಆ ಮದಾಂಧನ ಕಣ್ಣುಗಳು ತನ್ನ ದೇಹದ ಪ್ರತಿ ಅಂಗವನ್ನು ಶೋಧಿಸುತ್ತಿರುವ ರೀತಿಯಲ್ಲಿ ಚುಚ್ಚುತ್ತಿರುವವು. ಆ ಸೈಕರಿಬ್ಬರು ಮನೆಯನ್ನೆಲ್ಲ ನಿರ್ದಯವಾಗಿ ಜಾಲಾಡಿಸುತ್ತಿರುವರು. ನೀಟಾಗಿ ಜೋಡಿಸಿದ್ದ ಸಾಮಾನುಗಳನ್ನು ಚೆಲ್ಲಾಪಿಲ್ಲಿ ಮಾಡುತ್ತಿರುವರು.

“ನಿಮ್ಮ ಪೈಕಿ ಯಾರೊಬ್ಬರೂ ನಮ್ಮನ್ನು



ಸಾಯಂಕಾಲದ ಊಟಕ್ಕೆ ಕರೆಯುವುದಿಲ್ಲವೇನು?" ಎಂದು ಅಧಿಕಾರಿ ಚಾಲಾಕುತನವನ್ನು ಪ್ರದರ್ಶಿಸಿದ.

"ನಾವು ತಿನ್ನೋ ಆಹಾರ ನಿಮ್ಮಂಥೋರಿಗೆ ಸರಿ ಹೋಗ್ತದೋ ಇಲ್ಲವೋ ಅಂತ..."

ಈ ಮಾತನ್ನು ಕೇಳಿ ಆ ಅಧಿಕಾರಿ ವಿಷಲೇಪಿತ ನಗೆ ನಕ್ಕ.

"ಸರಿ ಸರಿ...! ಒಂದು ಮುಖ್ಯವಾದ ವಿಷಯದ ಬಗ್ಗೆ ನಾವು ಬಂದಿದ್ದೀವಿ. ಆದ್ದರಿಂದ ನೀವು ಊಟ ಮಾಡುತ್ತಿರುವಾಗ ತೊಂದರೆ



ಕೊಡ್ತೀವಿ. ನೀವಾರೂ ತಪ್ಪು ತಿಳಿಯಬಾರದು," ಅಂದ ಅಧಿಕಾರಿ.

"ಏನು ಬೇಕಾಗಿತ್ತು ನಿಮಗೆ?" ವಿನಯದಿಂದ ಎದ್ದು ತಾಯಿ ಕೇಳಿದಳು. ಚಿಕ್ಕ ಮಗಳು ಬಟ್ಟೆ ಸರಿಪಡಿಸಿಕೊಳ್ಳುತ್ತ ಎದ್ದು ನಿಂತಳು.

"ಈ ಮನೆ ಯಾರದು ಅಂತ ದಯವಿಟ್ಟು ಹೇಳ್ತೀರಾ?"

"ನಮ್ಮದೇ!"

"ಸರಿ ಸನ್ನಿಂದಾಗಿರೊ ಪರದಾಟವನ್ನು ದಯವಿಟ್ಟು ಕ್ಷಮಿಸಿರಿ. ಯಾರೊಂದಿಗಾದರೂ ಮಾತನಾಡುವಾಗ ಪರಸ್ಪರ ಪರಿಚಯ ವಿನಿಮಯ ಮಾಡಿಕೊಳ್ಳುವುದು ಸೌಜನ್ಯದ ಲಕ್ಷಣ. ಇರಲಿ. ನಿಮ್ಮ ಗಂಡ ಇರುವರೆ?" ಅಧಿಕಾರಿಯ ಕಣ್ಣುಗಳು ಫಾತಿಮಾ ಬೇಗಂ ಮೇಲೆ ಇದ್ದವು ಇನ್ನೂ.

"ಅಪ್! ಹುಂ."

"ಆತನ ಹೆಸರು?" ಆತ್ಮೀಯತೆಯನ್ನು ಪ್ರಕಟಿಸುತ್ತಿರುವ ರೀತಿಯಲ್ಲಿ ಅಧಿಕಾರಿ ಕೇಳುತ್ತಿರುವನು.

"ಅಜೀಜ್ ಮಂಸೂರ್."

"ಏನು ಮಾಡ್ತಿದ್ದಾರೆ?"

ಆಕೆಗೆ ಬೇಗನೆ ಉತ್ತರಿಸಲಾಗಲಿಲ್ಲ; ತಡವರಿಸಿದಳು.



"ಈಗ ಅವರು ತುಂಬ ಪ್ರಯಾಸದಿಂದ ಕಷ್ಟದ ದಿನಗಳನ್ನು ಕಳೆಯುತ್ತಿರುವರು."

"ನೀವು ಅಂದ ಕಷ್ಟದ ದಿನಗಳು ಅಂದರೆ ಯಾವವು; ಸರಿಯಾಗಿ ನನಗೆ ಅರ್ಥವಾಗ್ಲಿಲ್ಲ."

"ನನ್ನ ಮಾತಿನ ಅರ್ಥವೆಂದರೆ ಅತ್ತ ಕೆಲಸ ಜೊತೆಗೆ ಬಿಸಿನೆಸ್ಸೂ ಮಾಡ್ತಿಲ್ಲ ಅಂತ."

"ಮತ್ತೆ ಹೇಗೆ ಬದುಕುತ್ತಿರುವಿರಿ ನೀವೆಲ್ಲ!"

"ಕತ್ತಾಳೆ ಗಿಡಗಳನ್ನು ಹಾಕಿದವರು ಮತ್ತೆ ಅವಕ್ಕೆ ನೀರೆರೆಯಬೇಕಲ್ಲಾ."

"ಅಹಾ!...ಹ್ಹ... ಅದು ಸರಿ ಬಿಡಿ... ಈಗ ನೀವು ತಿಂತಿರೋ ಆಹಾರವನ್ನು ಆ ಕತ್ತಾಳೆ ಗಿಡಗಳನ್ನು ಹಾಕಿದವರು ಕಳಿಸಿರುವರೆಂದು ಅರ್ಥಮಾಡಿಕೊಳ್ಳಲೇನು?" ಅಧಿಕಾರಿ ಮನೆಯ ಸಾಮಾನುಗಳನ್ನು ಕೂಲಂಕಷ ಪರಿಶೀಲಿಸುವ ರೀತಿಯಲ್ಲಿ ನೋಡುತ್ತಿರುವನು. ಹಸು ಮಕ್ಕಳ ದೃಷ್ಟಿ ಅಧಿಕಾರಿಯ ದೃಷ್ಟಿಯನ್ನು ಹಿಂಬಾಲಿಸುತ್ತಿದ್ದವು. ಅಜೀಬ್ ಅಟ್ಟದ ಮೇಲಿದ್ದ ಗವಾಕ್ಷಿಯನ್ನು ನೋಡಿದ.

ಅಧಿಕಾರಿಯ ದೃಷ್ಟಿ ತಾಯಿಯ ಕಡೆ ಮತ್ತೆ ತಿರುಗಿತು.

"ನಿಮ್ಮ ಯಜಮಾನ ಎಲ್ಲಿ? ಕಾಣಿಸ್ತಿಲ್ಲ?" ಎಂದು ಕೇಳಿದ.

"ಗೊತ್ತಿಲ್ಲ."

"ನಿಮ್ಮ ಗಂಡ ಎಲ್ಲಿರುವುದು ಅಂತ ಆತನ ಹೆಂಡತಿಯಾದ ನಿಮಗೇ ಗೊತ್ತಿಲ್ಲದಿರುವುದು ತುಂಬ ದುರದೃಷ್ಟಕರ ವಿಷಯ." ಹಗಿನಾರಿದ ಹಲೆ ಮೂವತ್ತೆರಡು ಹಲ್ಲುಗಳು ಸರ್ವರಿಗೂ ಕಾಣಿಸುವಂತೆ ಗಹಗಹಿಸಿ ನಕ್ಕ ಅಧಿಕಾರಿ.

"ನೀವೆಲ್ಲ ಹೆದರಿ ಕಂಗಾಲಾಗಿರುವ ರೀತಿಯಲ್ಲಿ ಕಾಣುತ್ತಿರುವಿರಲ್ಲ!"

"ಆಂ! ಇಲ್ಲವಲ್ಲ!" ಬೆಚ್ಚಿದಳು ತಾಯಿ. ಅಧಿಕಾರಿ ಆಕೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಲೇ ಇರುವನು. ಮಾತಿಗೆ ಮೊದಲೇ ತಡವರಿಸುತ್ತಾ ಉತ್ತರಿಸುತ್ತಿರುವುದು ಆತನಿಗೆ ಸರಿ ಕಾಣದೆ ಹೋಗಿರಬಹುದು. ಆತ ತನ್ನೊಡಲಲ್ಲಿ ಅಗ್ನಿಪರ್ವತ ಇಟ್ಟುಕೊಂಡು ತೋರಿಕೆಗೆ ಮಾತ್ರ ಮುಗುಳ್ನಗೆಯನ್ನು ಬೀರುತ್ತಿರುವನು.

"ಸರಿ ಸರಿ. ನಾನು ನಿಮಗೆ ಈ ರೀತಿ ತೊಂದರೆ ಕೊಡಬೇಕೂಂತ ಇಲ್ಲಿಗೆ ಬರಲಿಲ್ಲ. ನನ್ನನ್ನು ನಂಬಿರಿ. ನೀವು ಏನು ತಿಂದು ಬದುಕುತ್ತಿದ್ದೀರಿ. ನೀವು ಬದುಕುತ್ತಿರೋ ವಾತಾವರಣ ಹೇಗಿದೆ ಅಂತ ನೋಡಲು ಬಂದೆ, ಅಷ್ಟೆ."

ಆತನ ಮಾತುಗಳನ್ನು ಕೇಳುತ್ತಲೇ ತಾಯಿ ಆ ಅಧಿಕಾರಿಯ ಸೊಂಟದ ಬಳಿ ನೇತಾಡುತ್ತಿದ್ದ ರಿವಾಲ್ವರನ್ನು ಮತ್ತು ಆತನ ಕೈಯಲ್ಲಿದ್ದ ಲೈಟ್ ಮಷಿನ್ ಗನ್ನನ್ನು ಗಮನಿಸಿದಳು.

"ನಿಮ್ಮ ಜಮೀನನ್ನು ಕಿತ್ತುಕೊಂಡಿದ್ದರಂತೆ. ನಿಮ್ಮ ಗಂಡ ಕೆಲಸವಿಲ್ಲದೆ ತಿರುಗುತ್ತಿರುವಂತೆ ಈಗ ಕೆಲವು ಕ್ಷಣಗಳ ಹಿಂದೆ ನೀವು ಹೇಳಿದಿರಿ. ಹೀಗಾಗಬಾರದಿತ್ತು! ಇದರಲ್ಲಿ ಏನೋ ಪರಿಪಾಟಲಿರಬೇಕು. ಅದನ್ನು ಸರಿ ಮಾಡೋಣ. ಈಗ ನೀವು ತಿಂತಿರೋ ಆಹಾರ ಸ್ವರ್ಗದಿಂದ ಬಿದ್ದಿರಲಿಕ್ಕಿಲ್ಲ ಎಂದು ನಾನು ಭಾವಿಸುತ್ತಿರುವುದನ್ನು ನೀವು ಅನುಮೋದಿಸುತ್ತೀರೆಂದು ನಾನು ತಿಳಿಯುವೆ." ಅಧಿಕಾರಿ ತುಂಬ ಅರ್ಥಗರ್ಭಿತವಾಗಿ ನಗುತ್ತಲೇ ನುಡಿದ. ಮತ್ತೆ ಮುಂದುವರಿದು, "ಅಂದ್ರೆ ಈ ಮಾತಿನ ಅರ್ಥ ಯಾರೋ ನಿಮಗೆ ಸಹಾಯ ಮಾಡ್ತಿದ್ದಾರೆ ಎಂದು. ಹ್ಹಾಂ ಹೀಗೆ ಸಹಾಯ ಮಾಡ್ತಿರೋದು ನಿಮ್ಮ ಗಂಡನಾಗಿರಬಹುದು. ಈ ಕೂಡಲೇ ನಾವು ಹೇಳಿದಂತೆ ನಿಮಗೆ ನಾವು ಸಹಾಯದ ಏರ್ಪಾಟು ಮಾಡಬಲ್ಲೆವು. ನಿಮ್ಮ ಹುಡುಗರೆಲ್ಲ ಹಸುಮಕ್ಕಳು. ಅವರಿಗೆ ಇನ್ನೂ ಬರದ ಪ್ರಪಂಚ ಜ್ಞಾನ ಹೇಳಿ ಕೊಡಬೇಕಲ್ಲಾ! ಇದರ ಬಗ್ಗೆ ನೀವೇನು ಯೋಚಿಸುತ್ತಿಲ್ಲವೇನು? ಇದರ ಬಗ್ಗೆ ನಿಮ್ಮ ಅಭಿಪ್ರಾಯ ತಿಳಿದುಕೊಳ್ಳಬೇಕೆಂದು ನನ್ನ ಆಸೆ."

"ಎಲ್ಲಾ ನಿಮ್ಮ ದಯೆ ಅಧಿಕಾರಿಗಳೇ." ಎಂದು ನಾಲಗೆಗೆ ನುಗ್ಗುತ್ತಿದ್ದ ಮಾತುಗಳನ್ನು ಗಂಟಲ ಬಳಿಯೇ ತಡೆ ಹಿಡಿದು, "ನಮ್ಮ ಕಷ್ಟಸುಖಕ್ಕೆ ಪರಿಹಾರ ನೀಡ್ತಿರೋ ರೀತಿಯಲ್ಲಿ ನೀವೇ ಮಾತಾಡ್ತಿದ್ದೀರಿ," ಎಂದಷ್ಟೆ ನುಡಿದಳು ತಾಯಿ.

"ಆದ್ರೆ ನಿಮ್ಮ ಗಂಡನ ಬಗ್ಗೆ 'ಬೇಕಾರ

ನುಡಿಯುತ್ತಿಲ್ಲ ನೀವು? ಆತ ನಿಮಗೆ ಯಾವ ರೀತಿ ಸಹಾಯ ಮಾಡ್ತಿದ್ದಾನೆ! ಪ್ರತಿದಿನ ಮನೆ ಹೊಸ್ತಿಲು ದಾಟ್ತಿದಾನಾ ? ಬಂದ್ರೆ ಯಾವ ಸಮಯದಲ್ಲಿ ಬರ್‍ತಿರ್ತಾನೆ? ಆತನಿಂದ ಭೂಮಿ ಯನ್ನು ಯಾಕೆ ಕಸಿದುಕೊಂಡಿದ್ದಾರೆ ? ಇಂಥ ಎಷ್ಟೋ ಪ್ರಶ್ನೆಗಳನ್ನು ಕೇಳಬೇಕಿದೆ; ಇವುಗಳ ಪೈಕಿ ಒಂದು ಪ್ರಶ್ನೆಗೂ ನೀವು ಸರಿಯಾಗಿ ಉತ್ತರ ಕೊಡುತ್ತಿಲ್ಲ."

"ಜೋರ್ಡಾನಿನಲ್ಲಿರೋ ಸಂಬಂಧಿಕರ ಮನೆಗೆ ಹೋಗುತ್ತಿರುವುದಾಗಿ ಹೇಳಿಹೋದ ಗಂಡ ತಾನು ವಾಪಸು ಬರುವುದು ತುಂಬ ತಡ ವಾಗಬಹುದೆಂದು ಹೇಳಿರುವನು."

"ಪ್ಚ್ ಪ್ಚ್...... ಎಷ್ಟೋ ವಿಷಯಗಳನ್ನು ನೀವು ಹೇಳಬಲ್ಲಿರಿ...... ಜೋರ್ಡಾನಿನಲ್ಲಿರೋ ನಿಮ್ಮ ಗಂಡನ ಸಂಬಂಧಿಕರ ಹೆಸರು ಹೇಳ್ತಿರಾ ? ಜೋರ್ಡಾನಿನಲ್ಲಿ ಬಂಧುಗಳಿರೋದು ಸಂತೋ ಷದ ವಿಷಯ ಕೂಡ!"

"ನನಗೆ ಗೊತ್ತಿಲ್ಲ, ನಾನಿದುವರೆಗೆ ಅವರ ಪೈಕಿ ಯಾರೊಬ್ಬರನ್ನೂ ನೋಡಿಲ್ಲ. ಬಹುಶಃ ಸೋದರತ್ತೆಯೋ ಆಕೆಯ ಮಕ್ಕಳೋ ಇದ್ದಿರ ಬಹುದು."

"ಅವರೇನು ಮಾಡ್ತಿದ್ದಾರೆ?"

"ಗೊತ್ತಿಲ್ಲ."

"ನಿಮ್ಮ ಗಂಡ ನಿಮಗೆ ಸಾಂದರ್ಭಿಕವಾಗಿ ಇದರ ಬಗ್ಗೆ ಯಾವ ವಿಷಯವನ್ನೂ ಹೇಳಿಲ್ಲ ವೇನು? ಅವರೇನು ವ್ಯಾಪಾರ ಮಾಡ್ತಿದಾರೋ ಸರ್ಕಾರಿ ನೌಕರರೋ ಅಥವಾ ಕುಪ್ಪೆ ಕುಪ್ಪೆ ಹಣ ಉಳ್ಳ ಶ್ರೀಮಂತರೋ?"

"ಇಲ್ಲ."

ಆಫೀಸರನಿಗೆ ಸಿಟ್ಟು ಬಂತು. ಅವುಡು ಗಚ್ಚಿದ. ಕೆನ್ನೆ ಮತ್ತು ಕಣ್ಣುಗಳಿಗೆ ರಕ್ತ ನುಗ್ಗಿತು. ತನ್ನ ದೃಷ್ಟಿಯನ್ನು ಬೇರೆ ಕಡೆ ತಿರುಗಿಸಿದ.

"ಇಷ್ಟಕ್ಕೂ ನಿಮ್ಮ ಗಂಡ ಅವರ ಬಳಿಗೆ ಯಾಕೆ ಹೋಗ್ತಿದಾನಂತ ನಿಮ್ಮತ್ರ ಏನೊಂದೂ ಹೇಳಲಿಲ್ಲವೇನು?"

"ನಾನು ಕೇಳಿದಲ್ಲಿ ಆತ ತಪ್ಪದೆ ಹೇಳುತ್ತಿದ್ದ ನೇನೋ; ಇಲ್ಲಿ ಎಷ್ಟು ದಿನಾಂತ ಕೆಲಸ ಬೊಗಸೆ ಇಲ್ದೆ ಇರಬಲ್ಲರು ಹೇಳಿ. ಆತನಿಂದ ಎಂದು ಭೂಮಿ ಕಸಿದುಕೊಂಡರೋ ಅಪತ್ತೆ ಮನಸ್ಸು ಚಿಕ್ಕದು ಮಾಡಿಕೊಂಡರು. ನೋಡಿ, ಎಲ್ಲಿಯಾ ದರೂ ಸರಿಯೇ ಜೋರ್ಡಾನಿನಲ್ಲಾದರೂ ಕೆಲಸ ಸಿಕ್ಕೀತೇಂಬ ಆಸೆ ಹೊತ್ತು ಅಲ್ಲಿಗೆ ಹೋಗಿರ ಬಹುದು."

"ಯಾರಾದರೂ ಕೆಲಸ ಕೊಡಿಸ್ತೀವಂತ ಮಾತೇನಾದರೂ ಕೊಟ್ಟಿರುವರೇನು!"

"ಬಂಧು ಸಂಬಂಧಿಕರು ಅಷ್ಟು ಸಹಾಯ ಮಾಡದೆ ಇರಲಾರರು."

"ಬಂಧುಗಳ ಹೆಸರೇನಾದರೂ ತಮಗೆ ಗೊತ್ತಿರುವುದೇನು?"

"ನನಗ್ಯಾರೂ ಗೊತ್ತಿಲ್ಲಾಂತ ನಿಮಗೆ ಈ ಮೊದಲೇ ಹೇಳಿರುವೆನು."

"ಮತ್ತೆ ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗಲಿಲ್ಲೇನು ಆತ! ಅಲ್ಲಿ ಕೆಲಸ ಸಿಕ್ಕುವುದೋ ಇಲ್ಲವೋ ಅಂತ ಆತನಿಗೇನಾದರೂ ಅನುಮಾನ ಇತ್ತೇನು ?"

"ನಾಲ್ಕಾರು ದಿನಗಳ ನಂತರ ತಿರುಗಿ ಬರ್‍ತೀನಂತ ಹೇಳಿ ಹೋಗಿದ್ದಾರೆ."

"ಹೋ ಹ್ಹೊ! ಹಾಗೋ ಆದ್ದರಿಂದಲೋ ಆತ ತನ್ನ ಸಂಗಡ ನಿಮ್ಮನ್ನು ಕರೆದೊಯ್ಯದೇ ಇರುವುದು ?"

"ನಾವೂ ಬರೋದಿಲ್ಲಾಂತ ಸ್ಪಷ್ಟವಾಗಿ ಹೇಳಿ ಬಿಟ್ಟಿದ್ದೀವಿ."

"ಯಾಕೆ ?"

"ಯಾಕೆ ಅಂದ್ರೆ ಈ ಮಣ್ಣಿನಲ್ಲಿ ನಾವೆಲ್ಲ ಹುಟ್ಟಿದ್ದೀವಿ, ಈ ಮಣ್ಣಿನಲ್ಲಿ ನಾವೆಲ್ಲ ಬೆಳೆದು ದೊಡ್ಡವರಾಗಿದ್ದೀವಿ. ಆದ್ದರಿಂದ ಈ ನಮ್ಮ ತಾಯಿ ನೆಲ ಬಿಟ್ಟು ಪರನಾಡಿಗೆ ಹೋಗಲಿಕ್ಕೆ ನಮಗ್ಯಾರಿಗೂ ಇಷ್ಟವಿಲ್ಲ."

"ಅಲ್ಲಿಂದ ಪತ್ರಗಳೇನಾದರೂ ಬರೀತಿ ರ್ತಾರೇನು ?"

"ಇಲ್ಲ."

"ಅವನ ಫೋಟೋ ಗೀಟೋ ಏನಾದ್ರೂ ಇದ್ರೆ ಸ್ವಲ್ಪ ತೋರಿಸ್ತೀರಾ! ಇದನ್ನು ಈ ಮೊದ್ಲೆ ಕೇಳಿಬಿಡಬೇಕಾಗಿತ್ತು. ಮರ್‍ತುಬಿಟ್ಟೆ, ಕ್ಷಮಿಸಿರಿ.

ನಿಮ್ಮ ಗಂಡನ ಭಾವಚಿತ್ರ ನೋಡಿಯಾದರೂ ವೈಯಕ್ತಿಕವಾಗಿ ಪರಿಚಯ ಮಾಡಿಕೊಳ್ತೇನೆ. ನಿಮ್ಮ ಗಂಡ ಯುವಕನೋ; ಮುದುಕನೋ ? ಅಥವಾ ಪೈಲವಾನನಂತಿರುವನೋ ?"

"ಎಲ್ಲರ ಹಾಗೆ ಆತ ಮಾಮೂಲು ಮನುಷ್ಯ!"

"ನಮ್ಮ ಮಾತುಗಳಲ್ಲಿ ದಯವಿಟ್ಟು ವಿಶ್ವಾಸ ಇಡಿರಿ. ನಾವು ಒಬ್ಬರಿಗೊಬ್ಬರು ಸಹಾಯ ಮಾಡಬೇಕು. ಮಾಡಿಸ್ಕೊಬೇಕು. ನಿಮ್ಮ ಗಂಡ ಜೋರ್ಡಾನಿನಿಂದ ಮರಳಿದ ಕೂಡಲೆ ಆತನ ಹೊಲವನ್ನು ಆತನಿಗೆ ವಾಪಸ್ಸು ಕೊಡಿಸ್ತೇವೆ."

"ಅದೆಲ್ಲ ನಿಮಗೆ ಬಿಟ್ಟಿದ್ದು."

"ಇಲ್ಲ ಇಲ್ಲ...... ನಿಮ್ಮ ಭವಿಷ್ಯತ್ತು ನಿಮ್ಮ ಮಾತನ್ನವಲಂಬಿಸಿದೆ. ನಮಗೆ ಸಂತೋಷ ಆಗಬೇಕೆಂದ್ರೆ ನೀವು ನಮ್ಮೊಂದಿಗೆ ಸಹಕರಿಸ ಬೇಕು. ನಮ್ಮಲ್ಲಿ ಪರಸ್ಪರ ನಂಬಿಕೆ ಇರಬೇಕು! ಆ ಮೇಲೆ ಎಲ್ಲಾ ಸಮಸ್ಯೆಗಳು ತಾವಾಗಿಯೇ ಪರಿಹಾರವಾಗುತ್ತವೆ."

"ಇಷ್ಟಕ್ಕೂ ನಿಮಗೆ ಬೇಕಾಗಿರುವುದೇನು ?"

"ಹೆಚ್ಚಿಗೆ ಸಮಯ ತೆಗೆದುಕೊಳ್ಳುವದಿಲ್ಲ ಬಿಡಿ. ನೀವು ತುಂಬ ಒಳ್ಳೆಯವರಂತ ನನಗೆ ಚೆನ್ನಾಗಿ ಗೊತ್ತು. ಅದು ಅಲ್ಲದೆ ನೀವು ಸತ್ಯವನ್ನೇ ನುಡಿಯುತ್ತಿರುವಿರಿ. ಆದ್ದರಿಂದ ಫಲಿತಾಂಶ ಕೂಡ ಒಳ್ಳೆಯದಿರುತ್ತದೆ. ಈಗಾಗಲೇ ನಿಮಗೆ ಗೊತ್ತಾಗಿರಬೇಕು– ನನಗೇನು ಬೇಕಾಗಿದೆ ಅಂತ."

"ನನಗೆ ಅರ್ಥವಾಗಲಿಲ್ಲ."

"ನಿಮ್ಮ ಗಂಡನ ಜಮೀನನ್ನು ನಿಮ್ಮ ಗಂಡ ನಿಗೇ ಮರಳಿಸಿದೆವೆಂದಿಟ್ಟುಕೊಳ್ಳಿ. ಆಗ ನೀವು ಏನು ಹೇಳುವಿರಿ ?" ಆಕೆಯ ಮುಖದಲ್ಲಿ ಕಣ್ಣಿಟ್ಟು ನೋಡುತ್ತ ನುಡಿದ ಅಧಿಕಾರಿ.

"ಅದು ಕೂಡ ನಿಮ್ಮನ್ನು ಅವಲಂಬಿಸಿದ ವಿಷಯ."

"ನಾವು ಈಗಾಗಲೇ ಮಾಡಿರುವ ಪ್ರಾರಂಭದ ಮಾತಿನ ಕಡೆ ಮತ್ತೆ ಹೋಗುವುದೆಂದರೆ ನನಗ್ಯಾಕೋ ಆಗಿ ಬರುವುದಿಲ್ಲ" ಎಂದು ಅಧಿಕಾರಿ ತನ್ನ ಜೇಬಿನಿಂದ ಒಂದು ಸಿಗರೇಟು, ಒಂದು ಚಿಕ್ಕ ಸೈಜಿನ ಪಿಸ್ತೂಲನ್ನೂ ಹೊರ ತೆಗೆದು ಎಲ್ಲರ ಮುಖಗಳನ್ನೊಮ್ಮೆ ನೋಡಿದ. ಪಿಸ್ತೂಲನ್ನು ಗುರಿ ಇಟ್ಟು ಹಿಡಿದು ಟ್ರಿಗ್ಗರ್ ಒತ್ತಿದ. ಪಿಸ್ತೂಲಿನ ಮಧ್ಯದಿಂದ ನಿಶ್ಶಬ್ದವಾಗಿ ಚಿಕ್ಕ ಬೆಂಕಿಯ ಜ್ವಾಲೆ ಕಾಣಿಸಿಕೊಂಡಿತು. ಅದರಿಂದ ಸಿಗರೇಟಿಗೆ ಬೆಂಕಿ ಹೊತ್ತಿಸಿ ಹೊಗೆ ಬಿಡುತ್ತಾ ನಕ್ಕ. ನಂತರ ಆಕೆಯ ಮುಖದ ತುಂಬ ತನ್ನ ದೃಷ್ಟಿಯನ್ನು ಹಾಯಿ ಸತೊಡಗಿದ.

ಈ ದೃಶ್ಯವನ್ನು ನೋಡಿ ನಗಲುಪಕ್ರಮಿಸಿದ ಚಿಕ್ಕ ಮಕ್ಕಳು ನಗಲಾರದೆ ಮೌನವಾದರು. ಅವರ ದೃಷ್ಟಿ ಅಧಿಕಾರಿಯ ಸೊಂಟದ ಮೇಲೆ ನೇತಾಡುತ್ತಿದ್ದ ರಿವಾಲ್ವರ ಮೇಲೆ ಬೀಳುತ್ತಲೆ ಭಯದಿಂದ ಮುಖ ಬಿಗಿ ಹಿಡಿದರು.

"ನಾನಂಥವನಲ್ಲ ಅಂತ ನಿಮಗೆ ಗೊತ್ತಿರ ಬಹುದು..." ಕೆಲವು ಕ್ಷಣ ಹ್ಹ ಹ್ಹ ಅಂತ ನಕ್ಕು ಮತ್ತೆ ನುಡಿದ." "ನಿಮಗೆ ಗೊತ್ತಿರುವ ಪ್ರತಿ ವಿಷಯವನ್ನೂ ನನಗೆ ಗೊತ್ತು ಮಾಡಿರೆಂದು ನಾನು ನಿಮಗೆ ವಿನಯಪೂರ್ವಕವಾಗಿ ಸಲಹೆ ನೀಡುತ್ತಿರುವೆ. ಇದರಿಂದ ಮೊದಮೊದಲು ನಿಮಗೆ ಒಳ್ಳೆಯದೇ ಆಗುತ್ತದೆ."

ಈ ಮಾತಿಗೆ ಪ್ರತಿ ನುಡಿಯದೆ ಉಸಿರು ಹಿಡಿದು ನಿಂತ ಆಕೆಯನ್ನು ನೋಡುತ್ತಲೆ ಅಧಿ ಕಾರಿಯ ಕಣ್ಣು ಹಿಗ್ಗಿತು. ಬ್ಲೇಡಿನಂತೆ ರಿವಾ ಲರು ಫಳಫಳ ಹೊಳೆಯ ತೊಡಗಿತು.

"ಒಬ್ಬ ವ್ಯಕ್ತಿ ನಿಮ್ಮ ಮನಗೆ ದಿನಂಪ್ರತಿ ಬಂದು ಹೋಗ್ತಿದಾನೆಂಬುವ ಸಮಾಚಾರ ನಮ ಗೀಗಾಗಲೇ ತಲಪಿದೆ, ಇದು ನಿಮಗೆ ಗೊತ್ತಿರಲಿಕ್ಕೂ ಬೇಕು. ಆ ವ್ಯಕ್ತಿ ನಿಮ್ಮ ಗಂಡನಲ್ಲ ಅಂತ ನೀವು ಈಗಾಗಲೇ ಹೇಳಿರುವಿರಿ. ಜೋರ್ಡಾನಿಗೆ ಹೋಗಿರೋ ವ್ಯಕ್ತಿ ಬಹಳ ದಿನಗಳವರೆಗೆ ತಿರುಗಿ ಬರುವುದು ಸಾಧ್ಯ ವಿರಲಿಕ್ಕಿಲ್ಲ. ಹಾಗಾದರೆ ಈ ಮನೆಗೆ ದಿನನಿತ್ಯ ಬಂದುಹೋಗ್ತಿರೋ ವ್ಯಕ್ತಿ ಯಾರು?"

"ನೀವು ಹೇಳ್ತಿರೋದು ನಿಜವಲ್ಲ."

"ನೀವು ಸತ್ಯವನ್ನು ಮಾತ್ರ ಹೇಳ್ತಿದೀರೋ?" ಮತ್ತೆ ನಕ್ಕ ಅಧಿಕಾರಿ. ಈ ಸಾರಿ, ಆತ ನಕ್ಕದ್ದು ನಿಜವಾದ ನಗು ಅಲ್ಲ ಅಂತ ಆಕೆಗೆ ಅರ್ಥ ವಾಯಿತು. "ಆ ಹುಡುಗಿ ನಿಮ್ಮ ಮಗಳೋ?"

ಫಾತಿಮಾ ಭಯದಿಂದ ನಿಂತ ಸ್ಥಿತಿಯಲ್ಲಿಯೇ ನಡುಗತೊಡಗಿದಳು.

"ಹೌದು?" ಅಂದಳು ತಾಯಿ.

"ಹೆಸರೇನು?"

ತಾಯಿ ತನ್ನ ಮಗಳ ಕಡೆಗೊಮ್ಮೆ ನೋಡಿದಳು. 'ನಿನ್ನ ಹೆಸರು ಹೇಳುತ್ತಿರುವುದಕ್ಕೆ ದಯವಿಟ್ಟು ನನ್ನನ್ನು ಕ್ಷಮಿಸು' ಎಂದು ಆಕೆಯನ್ನು ಕಣ್ಣುಗಳ ಮೂಲಕ ಕೇಳಿಕೊಂಡಳು.

"ಫಾತಿಮಾ."

"ಫಾತೀಮಾ... ಫಾತೀಮಾ... ಇಂಥ ಹೆಸರೇ ಇರಬಹುದೆಂದು ನಾನೀಗಲೇ ಊಹಿಸಿಬಿಟ್ಟಿದ್ದೆ ಬಿಡಿ. ಸರಿ; ಫಾತೀಮಾ ನೀನಾದ್ರೂ ಹೇಳು. ನಿಮ್ಮ ಮನೆಗೆ ಬಂದು ಹೋಗೋ ವ್ಯಕ್ತಿ ಯಾರು?"

ಫಾತೀಮಾ ಗೋಡೆಯ ಕಡೆ ನೋಡಿದಳು, ಈ ಪ್ರಶ್ನೆಗೆ ಉತ್ತರ ಹೇಳುವ ಮೊದಲೆ ತನ್ನನ್ನು ಯಾರಾದರೂ ರಕ್ಷಿಸಬಹುದೆಂದು. ವಿಧಿ ಇಲ್ಲದೆ ಹೇಳಿದಳು. "ನನಗೆ ಗೊತ್ತಿಲ್ಲ."

"ಹೋಹ್ಹೋ! ನಿನಗೂ ಗೊತ್ತಿಲ್ಲವೋ? ನನ್ನ ಪಾಡಿಗೆ ನಾನು ಸಮಯ ಹಾಳು ಮಾಡ್ತಿದೀನಿ ಎಂದಾಯಿತು. ನನ್ನ ಈ ತಪ್ಪನ್ನು ನಾನು ಒಪ್ಪಿಕೊಳ್ತೀನಿ."

ಅಧಿಕಾರಿ ಮನೆಯ ಪ್ರತಿಯೊಬ್ಬರ ಮುಖವನ್ನು ದೃಷ್ಟಿಯ ಮೂಲಕ ಜಾಲಾಡಿಸಿ ತನ್ನ ಪ್ರಶ್ನೆಗಳಿಂದ ಅವರೆಲ್ಲರ ಮುಖದ ಮೇಲಾಗಿರುವ ಪರಿಣಾಮವನ್ನು ಓದಿಕೊಂಡ. ಯಾರ ಮುಖದ ಮೇಲೂ ಯಾವುದೆ ಪರಿಣಾಮ ಇರದ್ದುದು ಕಂಡು ಹೊಳೆಯಲ್ಲಿ ಹುಣಸೆ ಹಣ್ಣು ತೊಳೆದಂತಾಯಿತೆಂದುಕೊಂಡ. ತನ್ನ ಪ್ರಯತ್ನ ನಿರರ್ಥಕವಾದದ್ದರ ಬಗ್ಗೆ ಮುಖ ಕಿವುಚಿಕೊಂಡ.

"ಈ ಮನೆಯಲ್ಲಿ ಸಮಾಜ ವಿರೋಧಿಗಳಿಗೆ ಆಶ್ರಯ ಕೊಡಲಾಗ್ತಿದೆ ಎಂಬುದು ಖಾತ್ರಿಯಾಗ್ತಿದೆ. ಇಲ್ಲಿ ಯಾರು ಆಶ್ರಯ ಪಡೆಯುತ್ತಿರುವರೆಂಬ ಬಗ್ಗೆ ನಿಮಗೆ ಗೊತ್ತಿದೆ ಅಂತ ನಾನು ಅಂದುಕೊಳ್ತಿಲ್ಲ. ಬಹುಶಃ ನಿಮಗೆ ಗೊತ್ತಿರಲೂ ಬಹುದು. ನಿಮ್ಮನ್ನು ಎಚ್ಚರಿಸುವುದೂ ನನ್ನ ಕರ್ತವ್ಯ. ಸಮಾಜ ವಿರೋಧಿ ವ್ಯಕ್ತಿಗಳಿಗೆ ಆಶ್ರಯ ಕೊಟ್ಟವರನ್ನು ನಾಶ ಮಾಡೋದು ನನ್ನ ಕರ್ತವ್ಯ. ನಮಗೆ ಸಹಾಯ ಮಾಡಬೇಕೂಂತ ನಿಮಗನ್ನಿಸಿದ್ರೆ ಅವರ್ನ ನಮಗೆ ಹಿಡಿದು ಕೊಡ್ರಿ, ಅರೆಸ್ಟ್ ಮಾಡ್ತೀವಿ. ಹೀಗೆ ಮಾಡೋದ್ರಿಂದ ಪರಿಸ್ಥಿತಿ ಸುಧಾರಿಸದೇ ಇರಲಾರದು. ಸಹಾಯ ಮಾಡೋದು ಇಷ್ಟವಿಲ್ಲದಿದ್ರೆ ಅದು ನಿಮ್ಮ ಇಷ್ಟ. ಅನವಶ್ಯಕವಾಗಿ ನೀವು ಇಕ್ಕಟ್ಟಿನಲ್ಲಿ ಸಿಕ್ಕಿ ಹಾಕಿಕೊಳ್ತೀರಿ."

ಕೆಲವು ಕ್ಷಣ ಮನೆ ತುಂಬ ನಿಶ್ಶಬ್ದ ಆವರಿಸಿತು. ಅಜೀಜ್ ಮನೆಯ ಸ್ಥಿತಿ ಬಗೆಗೆ ಆಲೋಚಿಸುತ್ತಿದ್ದ. ಮನೆಯ ನಾಲ್ಕು ಗೋಡೆಗಳು ಇನ್ನೇನು ನೆಲಕ್ಕೊರಗಿಬಿಡುತ್ತವೆ ಅನ್ನಿಸಿತು ಆತನಿಗೆ. ಮನೆಯ ಗೂಟದ ಮೇಲೆ ಬಲವಾಗಿ ನಿಂತಿದೆ ಅಟ್ಟ.

ಹೃದಯ ಮತ್ತೊಬ್ಬರಿಗೆ ಕೇಳಿಸುವಂತೆ ಬಡಿದುಕೊಳ್ಳುತ್ತಿರುವುದು. ಇನ್ನೇನು ಕೆಲವು ಕ್ಷಣಗಳಲ್ಲೇ ಹೃದಯ ಒಡೆದುಹೋಗ್ತದೆ ಎಂದು ಭಾಸವಾಯಿತು. ಅಲ್ಲಿಯ ವರೆಗೆ ನಿಯಂತ್ರಿಸಿರುವ ಸಹನೆಯ ಅಣೆಕಟ್ಟು ಆತನ ಮಾತುಗಳಿಂದ ಎಲ್ಲಿ ಒಡೆಯುವುದೋ ಎಂದು ಆಕೆ ಕಣ್ಣು ಮುಚ್ಚಿಕೊಂಡಳು. ಅಧಿಕಾರಿಯ ದೃಷ್ಟಿ ಫಾತೀಮಾಳ ಮೇಲಿಲ್ಲ. ಆಕೆಯ ತಾಯಿಯ ಮೇಲಿರುವುದು.

"ನಿಮಗೆ ತಿಳಿದಂತೆ ನೀವು ಮಾಡಿಕೊಳ್ಳಿರಿ." ಅಂತ ನಿಷ್ಠುರವಾಗಿ ನುಡಿದಳು ತಾಯಿ.

ಅಧಿಕಾರಿಗೆ ಆಕೆಯ ಮಾತುಗಳು ರಾಚಿದವು. ಏನೋ ಹೇಳಲಿದ್ದ ಮಾತುಗಳನ್ನು ತಡೆ ಹಿಡಿದು ಮನೆಯನ್ನು ಒಮ್ಮೆ ನೋಡಿದ, ಮನುಷ್ಯ ಅವಿತುಕೊಳ್ಳುವಂಥ ಸ್ಥಳ ಯಾವುದೂ ಅಲ್ಲಿ ಕಂಡುಬರಲಿಲ್ಲ. ಆತನಿಗೆ.

"ಕೊನೆ ಸಾರಿ ಹೇಳ್ತಿದೀನಿ. ನೀವು ನಮ್ಮೊಂದಿಗೆ ಸಹಕರಿಸಿದಿರೋ ಸರಿ; ಇಲ್ಲಾ ಅಂದ್ರೆ, ಇಡೀ ಈ ಮನೆಯನ್ನು ನಿಮ್ಮೆಲ್ಲರ ಸಹಿತ ಸುಟ್ಟುಹಾಕಿ ಬಿಡ್ತೇವೆ," ಅಂದ ಅಧಿಕಾರಿ.

"ಇದೇ ಸ್ಥಳದಲ್ಲಿ ಒಳ್ಳೆ ಮನೆ ಕಟ್ಟಿಕೊಳ್ಳುವ ಒಳ್ಳೆಯ ದಿನಗಳು ಬಂದೇ ಬರ್ತವೆ," ಅಂದಳು ತಾಯಿ.

ಅಷ್ಟರಲ್ಲಿ ಅನಿರೀಕ್ಷಿತವಾದ ಒಂದು ಘಟನೆ

ನಡೆದುಹೋಯಿತು. ಆ ತಾಯಿಗೂ ನಿರೀಕ್ಷಿಸಲಾಗಲಿಲ್ಲ. ಅಜೀಜ್ ಟೇಬಲ್ ಮೇಲಿದ್ದ ಒಂದು ಚಮಚೆಯನ್ನು ಮಿಂಚಿನಂತೆ ತೆಗೆದುಕೊಂಡು ಅಧಿಕಾರಿಯ ಕಡೆ ಎಸೆದ. ಅದು ಬಿರುಸಾಗಿ ಅಧಿಕಾರಿಯ ಮುಖಕ್ಕೆ ತಗುಲಿತು. ನಂತರ ಒಂದರ ನಂತರ ಒಂದರಂತೆ ವಸ್ತುಗಳನ್ನು ಹಿಂದು ಮುಂದು ಸರಿಸಾಡಿ ಇಡೀ ಮನೆಯನ್ನು ಜಾಲಾಡಿದ ಅಜೀಜ್. ಯಾತಕ್ಕಾಗಿಯೋ ಅಜೀಜ್ ನೆಲಕ್ಕೆ ಬಾಗಿದ. ಅಷ್ಟರಲ್ಲಿ ಬಾಣದಂತೆ ಸ್ವೀಲು ಬಂದು ಅಧಿಕಾರಿಯ ಮುಂದೆ ಅಜೀಜ್‌ನನ್ನು ಹಿಡಿಯಲು ಬಿಡದಂತೆ ನಿಂತುಕೊಂಡ. ಫಾತೀಮಾ ಗಟ್ಟಿಯಾಗಿ ಅಳತೊಡಗಿದಳು. ತಾಯಿ ಗೊಂಬೆಯಂತೆ ನಿಂತಿದ್ದಳು. ಏನೋ ಅಹಿತಕರ ಘಟನೆ ನಡೆಯುವುದೆಂದು ಆಕೆಗೆ ಭಯ.

ಅದುವರೆಗೆ ಯಾಂತ್ರಿಕವಾಗಿ ಹೊರಗಡೆ ನಿಂತಿದ್ದ ಯೋಧನೊಬ್ಬ ಸರಸರ ಒಳಗೆ ಬಂದವನೆ ಅಧಿಕಾರಿಯ ಪಕ್ಕದಲ್ಲಿ ನಿಂತುಕೊಂಡ. ಆ ಕ್ಷಣ ಆತ ಟ್ರಿಗ್ಗರ್ ಒತ್ತಿದ ಕೈಯಲ್ಲಿದ್ದ ಪಿಸ್ತೂಲಿನಿಂದ ಸಿಡಿದ ಗುಂಡೊಂದು ಅಜೀಜ್‌ನ ಎದೆಯನ್ನು ತೂರಿಕೊಂಡು ಹೋಯಿತು. ಅಜೀಜ್ ಚೀರಾಡಿ ನೆಲಕ್ಕೊರಗಿದ. ಹಿಂದಿನಿಂದ ರಕ್ತ ಚಿಮ್ಮತೊಡಗಿತು. ನೆಲವೆಲ್ಲ ರಕ್ತಮಯ.

ತಾಯಿ ಓಡಿಹೋಗಿ ಮಗನನ್ನು ಅಪ್ಪಿಕೊಂಡಳು. ಅಜೀಜ್ ದೃಷ್ಟಿ ಎಲ್ಲಿ ಆಫೀಸರನ ಮೇಲೆಯೇ ಇದೆ. ಏನೂ ಮಾಡದ ಅಸಹಾಯಕತೆ. ನೀರು ಸುರಿಯುತ್ತಿರುವ ಕಣ್ಣುಗಳು. "ಈ ಮನೆಯನ್ನು ಇಂಚು ಬಿಡದೆ ಹಾಗೆ ಜಾಲಾಡಿರಿ. ಈ ನಾಯಿಯನ್ನು ಸೆರೆಮನೆಗೆ ತಳ್ಳಿರಿ." ಮನೆಯಿಂದ ಸರ ಸರ ಹೊರಗೆ ನಡೆದುಹೋದ ಅಧಿಕಾರಿ ಆವೇಶವನ್ನು ನಿಯಂತ್ರಿಸಿಕೊಳ್ಳಲು.

ಅಜೀಜ್ ಮಿಸುಕಾಡಲಿಲ್ಲ. ಆತನ ದೃಷ್ಟಿ ಅಟ್ಟದ ಕಡೆಗೇ ಕೇಂದ್ರೀಕೃತವಾಗಿರುವುದು. ಅಟ್ಟದ ಹಲಗೆಗಳ ನಡುವೆ ಚಾಚಿರುವ ತಂದೆಯ ಕೈಗಳು ಆತನಿಗಿನ್ನೂ ಕಾಣಿಸುತ್ತಲೇ ಇವೆ. ಆ ದೃಶ್ಯ ಬದಲಾಗಿ ಅಲ್ಲಿ ಉರಿಯುವ ಮೊಂಬತ್ತಿ ಕಾಣಿಸತೊಡಗಿತು. ಆ ಮೇಣದ ಬತ್ತಿ ಬೆಳ್ಳಗೆ ಥೇಟ್ ತಾಯಿಯ ಮುಖದಂತೆ ಕಾಣತೊಡಗಿತು. ಬಹಳ ಸಮಯದಿಂದ ಆಕೆ ಆತನನ್ನೇ ನೋಡುತ್ತಿರುವಂತೆ ಅನ್ನಿಸಿತು. ಸಿಪಾಯಿ ತಾಯಿಯನ್ನು ದರದರ ಎಳೆದುಕೊಂಡೊಯ್ಯುತ್ತಿರುವನು. ಆಕೆ ದೃಷ್ಟಿ ನೆಲದ ಮೇಲೆ ಒರಗಿರುವ ಹೆತ್ತ ಮಗುವಿನ ಕಡೆಗಿದೆ. ಆಕೆ ತನ್ನ ದೇಹದ ಇಡೀ ಶಕ್ತಿಯನ್ನು ಕ್ರೋಢೀಕರಿಸಿಕೊಂಡು "ಅಜೀಜ್" ಎಂದು ಕೂಗಿದಳು. ಅದು ಗಾಯಗೊಂಡ ಸಿಂಹಿಣಿಯ ಗರ್ಜನೆಯಂತೆ ಕೇಳಿಸಿತು. ಅದು ಬೆಟ್ಟ ಕಣಿವೆಗಳಲ್ಲಿ ಪ್ರತಿಧ್ವನಿಸಿತು.

ಅಜೀಜಗೂ ಆ ಕೇಕೆ ಕೇಳಿಸಿತು. ಬಹುದೂರದಿಂದ, ಆಕಾಶದಿಂದ, ಅದು ಬಂದಿತೆಂದುಕೊಂಡ. ದೇಹದಿಂದ ಸಿಡಿದುಬಂದಿರುವಂಥ ಆತನ ಕಣ್ಣುಗಳ ತುಂಬ ತಾಯಿಯದೇ ಬಿಂಬ. ಕ್ರಮೇಣ ತಾಯಿಯ ರೂಪ ಕತ್ತಲಲ್ಲಿ ಕರಗಿ ಹೋಯಿತು.

ಬಹು ದೂರದಿಂದ ವಿಷಾದ ಗೀತೆಯೊಂದು ಆತನ ಕಣ್ಣ ಪಟಲಗಳಿಗೆ ತಾಕುತ್ತಿತ್ತು. ಆತನ ಕಿವಿಗಳಿಗೆ ರೆಕ್ಕೆ ಮೂಡಿದವು. ಆ ಕ್ಷಣ ಆತನ ಕಣ್ಣುಗಳಲ್ಲಿ ಬೆಳಕಿನ ಕಿರಣವೊಂದು ಕೋರೈಸಿ ಆರಿಹೋಯಿತು.



ಜಗವನೆಲ್ಲ ಸೊಬಗಿನಿಂದ ತುಂಬಿ ಸೊಗವ ಸೂಸಿದೆ
ದಿಶೆದಿಶೆಯಲಿ ಮಿಸುಪ ಪೈರು ಹಚ್ಚ ಹಸಿರು ಹಾಸಿದೆ
ನಿಲವೇಘ ಶೋಭೆಯಿಂದ ಮೆರೆಯುತಿಹುದು ಆಗಸ
ಶ್ರಾವಣದಾ ಮಾಸ ಈಗ ಮನಕೆ ಎನಿತು ಸಂತಸ

–ವಿ. ಸಿ. ಐರಸಂಗ

ನೆನಪಿನಾಳದಿಂದ

# ವನ್ಯ ಪ್ರಾಣಿಗಳೊಡನೆ ನನ್ನ ಅನುಭವಗಳು

**ಡಾ. ಕೆ. ಆರ್. ಆಲೂರ***

೧೯೪೭ರಲ್ಲಿ ಬೀಸಿದ ಬಿರುಗಾಳಿಗೆ ಮುಂಬಯಿ ಪಟ್ಟಣ ತತ್ತರಿಸಿ ಅಲ್ಲಿಯ ಜನಜೀವನ ಒಂದು ವಾರದ ವರೆಗೆ ಅಸ್ತವ್ಯಸ್ತವಾಯಿತಲ್ಲದೇ ದಾರಿ ಬದಿಯ ಮುಕ್ಕಾಲು ಭಾಗ ಗಿಡಗಳು ನೆಲಸಮವಾದವು. ಎಷ್ಟೋ ಗಿಡಗಳು ವಿದ್ಯುತ್ ತಂತಿಗಳ ಮೇಲೆ ಬಿದ್ದಿದ್ದರಿಂದ ತಂತಿಗಳೊಡನೆ ಕಂಬಗಳೂ ಭೂಮಿಗೆ ಒರಗಿದವು. ಇವೆಲ್ಲವುಗಳನ್ನು ಸರಿಸಿ ದಾರಿಯನ್ನು ಸುಗಮಗೊಳಿಸಲು ಆಗಿನ ರಾಣೀಬಾಗದಲ್ಲಿಯ ಆನೆಯನ್ನು ಕರೆತಂದು ಅವರ ಕಾಲಿಗೂ ಗಿಡಗಳಿಗೂ ಹಗ್ಗ ಕಟ್ಟಿ ಎಳೆಸಲಾಯಿತು. ಮೂಲದಲ್ಲಿ ವನ್ಯಪ್ರಾಣಿಯಾಗಿ ಜನಿಸಿದ್ದರೂ ರಾಣೀಬಾಗದ ಮೂರು ದಶಕಗಳ ವಾಸ್ತವ್ಯದಲ್ಲಿ ಅದು ಸಾಕು ಪ್ರಾಣಿಯಾಗಿ ಪರಿವರ್ತನೆಯಾಗಿದ್ದರಿಂದ ಈ ಭಾರ ಎಳೆಯುವ ಕಾರ್ಯವು ಅವರಿಂದಾಗದೆ ಆ ಆನೆ ತನ್ನ ಮೊಣಕಾಲನ್ನು ಉಳುಕಿಸಿಕೊಂಡಿದ್ದರಿಂದ ಅದಕ್ಕೆ ಚಿಕಿತ್ಸೆ ನೀಡುವ ಕೆಲಸ ನನ್ನ ಪಾಲಿಗೆ ಬಂದಿತು. ಭಾರ ಎಳೆಯುವಾಗ ಪುಡಿಪುಡಿಯಾದ ಮೂಳೆಗಳನ್ನು ಪುನಃ ಜೋಡಿಸಿ ಅವುಗಳನ್ನು ಸ್ವಸ್ಥಾನಕ್ಕೆ ಸರಿಸುವ ಕಾರ್ಯ ಅಸಾಧ್ಯವಾಗಿದ್ದರಿಂದ ಅದು ತನ್ನ ಕಾಲಿನಿಂದ ಕುಂಟುತ್ತ, ಆಡುತ್ತ ನೋಡ ಬಂದ ಜನರನ್ನು ಮುದಗೊಳಿಸುತ್ತಿತ್ತು. ರಾತ್ರಿಯಲ್ಲಿ ಧೊಪ್ಪನೆ ನೆಲಕ್ಕೆ ಬಿದ್ದೋ ಕುದುರೆಯಂತೆ ನಿಂತೋ ನಿದ್ರಿಸಿ ವಿಶ್ರಾಂತಿ ಪಡೆಯಬೇಕಾಗುತ್ತಿತ್ತು. ಇದರಿಂದ ಅವರ ಪ್ರಕೃತಿಯು ದಿನೇ ದಿನೇ ಕ್ಷೀಣಿಸಿ ಕೊನೆಗೆ ಪಶುಸಂಗ್ರಹಾಲಯದ ಒಡೆಯರು ಅದನ್ನು ಯಾತನೆಯಿಂದ ಮುಕ್ತಗೊಳಿಸಲು ನಿರ್ಧರಿಸಿ ನನ್ನ ಕಡೆಗೆ ಬಂದರು. ಉಪಚಾರದಿಂದ ಗುಣವಾಗುವ ಸಾಧ್ಯತೆ ಇರದ್ದರಿಂದ ಅವರ ಜೀವನವನ್ನು ಕೊನೆಗೊಳಿಸಲು ಪೋಲೀಸ್ ಅಧಿಕಾರಿಗಳಿಗೆ ಹೇಳಲಾಯಿತು. Elephant gun ಎಂಬ ವಿಶೇಷ ತುಬಾಕಿನಿಂದ ಹಾರಿಸಿದ ಒಂದೇ ಗುಂಡಿನ ಅದು ತನ್ನ ಜೀವನದ ಕೊನೆಯುಸಿರನ್ನು ಎಳೆಯಿತು.

ಈ ಮಧ್ಯೆ ನಮ್ಮ ಪುರಾಣಗಳಲ್ಲಿ ವರ್ಣಿಸಿದ ಬೆಳವಲಕಾಯಿ ಹೀರುವ ಪ್ರಯೋಗವನ್ನು ಅವರ ಮೇಲೆ ಮಾಡಿ ನೋಡಲಾಯಿತು. ಅದಕ್ಕೆ ತಿನ್ನಿಸಿದ ೨೦–೩೦ ಬೆಳವಲಕಾಯಿಗಳಲ್ಲಿ ಅನೇಕವು ಏನೂ ಪರಿವರ್ತನೆಯಾಗದೇ ಹಾಗೆಯೇ ಹೊರ ಬಿದ್ದರೆ ೩–೪ ಕಾಯಿಗಳ ತಿರುಳು ಹೀರಿ ಬರಿದಾದುದು ಕಂಡುಬಂತು. ಆನೆ ದುರ್ಬಲವಾದುದು ಹೀಗಾಗಲು ಕಾರಣವಾಗಿರಬಹುದು.

---

* **ಲೇಖಕರು ಭಾರತದ ಪ್ರಖ್ಯಾತ ಪಶುವೈದ್ಯಶಾಸ್ತ್ರಜ್ಞರು.**

ಈ ಆನೆಯ ಮರಣೋತ್ತರ ಪರೀಕ್ಷೆಗೆ ಲಭ್ಯವಿದ್ದ ಯಾವ ಉಪಕರಣವೂ ಸಮರ್ಥ ವಿರದ್ದರಿಂದ ಕಟ್ಟಿಗೆಯನ್ನು ಕೊರೆಯುವ ಗರಗಸದಿಂದ ದೇಹವನ್ನು ಇಬ್ಭಾಗಗೊಳಿಸಿ ವಿದ್ಯಾರ್ಥಿಗಳ ಸಹಾಯದಿಂದ ಅದರ ಆಂತರ ವಯವಗಳನ್ನು ಪೊರದೆಗೆದೆ. ನಾನು ಈ ವಿಷ ಯದ ಮೇಲೆ ಒಂದು ಲೇಖನವನ್ನು ಬರೆದು ಕಲಕತ್ತೆಯಲ್ಲಿ ಜರುಗಿದ ಇಂಡಿಯನ್ ಸೈನ್ಸ್ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಓದಿದಾಗ ಓರ್ವ ಸದಸ್ಯರು ಆನೆಯ ಮೆದುಳಿನಲ್ಲಿ 'ಗಜ ಮೌಕ್ತಿ' ಇರುವುದು ಪ್ರಖ್ಯಾತವಿದೆ. ಆದ್ದರಿಂದ ಅದನ್ನು ತೋರಿಸಬೇಕೆಂದು ಕೇಳಿಕೊಂಡರು. ಅದಾವುದನ್ನೂ ಕಾಣದ ನನಗೆ ತಕ್ಷಣ ಯೋಗ್ಯ ಉತ್ತರ ಹೊಳೆಯದ್ದರಿಂದ, "ಸ್ವಾಮಿ, ಅದನ್ನು ನಿಮ್ಮ ದುರಿಗೆ ತೋರಿಸಿ ಶ್ಯಮಂತಕಮಣಿಯನ್ನು ಕಳೆದುಕೊಂಡ ಸತ್ಯಜಿತನಾಗಲು ನಾನು ಬಯ ಸುವುದಿಲ್ಲ," ಎಂದು ಹಾಸ್ಯ ಚಟಾಕಿ ಹಾರಿಸಿ ಭಾಷಣ ಮುಗಿಸಿದೆ.

ಮುಂದೆ ನನಗೆ ಹಿಮಾಲಯದ ಅಡಿಯಲ್ಲಿ ಸ್ಥಾಪಿಸಿದ ಕೃಷಿ ವಿಶ್ವವಿದ್ಯಾಲಯದಲ್ಲಿ ಕಲಿಸುವ ಮತ್ತು ಆ ಸಂಸ್ಥೆಯನ್ನು ನಿರ್ದೇಶಿ ಸುವ ಸಂದರ್ಭ ೧೯೬೦ ರಲ್ಲಿ ಒದಗಿತು. ಪಾಕಿಸ್ತಾನದಿಂದ ಬಂದ ನಿರಾಶ್ರಿತರನ್ನು ಆರಿಸಿ ಡೆಹರಾಡೂನಿನಿಂದ ನೇಪಾಳ ಮಾರ್ಗವಾಗಿ ದಾರ್ಜಿಲಿಂಗ್ ವರೆಗೆ ವಿಸ್ತರಿಸಿ ತರಾಯಿ ಎಂದು ಕರೆಯಲ್ಪಡುವ ವನ್ಯಪ್ರದೇಶ ವನ್ನು ಪ್ರತಿ ವಲಸೆಗಾರನಿಗೆ ೫ ಎಕರೆಯಂತೆ ವ್ಯವಸಾಯಕ್ಕೆ ಕೊಡಲಾಯಿತು. ಇದರೊಡನೆ ಪೂರ್ವದಲ್ಲಿ ವನ್ಯಪ್ರಾಣಿಗಳ ವಾಸಸ್ಥಾನ ವಾದ ಈ ಸ್ಥಳಕ್ಕೆ ಇಲ್ಲಿಂದ ಚದುರಿದ ಪ್ರಾಣಿಗಳು ಮೇಲಿಂದ ಮೇಲೆ ಬಂದು ಹೋಗುವುದು ವಾಡಿಕೆಯಾಗಿತ್ತು. ಮಾರ್ಗ ಮಧ್ಯದಲ್ಲಿ ಚಿಗರೆ, ಸಾರಂಗಗಳ ಗುಂಪು ಮತ್ತು ಇದೇ ಸಮಯವನ್ನು ಸಾಧಿಸಿ ಅವುಗಳನ್ನು ಕಬ ಳಿಸುವ ಹುಲಿ, ತೋಳ, ಚಿರತೆ, ಕಬ್ಬಿನ ಬೆಳೆ ಯನ್ನು ಹೊಕ್ಕು ನಾಶಗೊಳಿಸುವ ಆನೆಗಳ ಹಿಂಡುಗಳಿಗೆ ಲೆಕ್ಕವೇ ಇರಲಿಲ್ಲ. ಇಲ್ಲಿ ವಿವಿಧ ಜಾತಿಗೆ ಸೇರಿದ ಹಾವುಗಳು ಬಹಳ. ಅವುಗಳನ್ನು ವಿಂಗಡಿಸಿ ವರ್ಣಿಸುವುದು ಕಠಿಣ.

ಒಂದು ದಿನ ನಮ್ಮ ವಿಶ್ವವಿದ್ಯಾಲಯದ ಸಮೀಪದಲ್ಲಿ ೧೮ ಅಡಿ ಉದ್ದವಿದ್ದ ಹೆಬ್ಬಾವು ತನ್ನ ಅಳವಿನಲ್ಲಿ ಸಿಕ್ಕ ಚಿಗರೆಯನ್ನು ಕಬಳಿಸಿ ತಪ್ಪಿತಸ್ಥ ಮಕ್ಕಳು ತಮ್ಮ ತಂದೆತಾಯಿಗಳ ಮುಂದೆ ಏನೂ ಅರಿಯದಂತೆ ನಟಿಸುವ ಹಾಗೆ ಜಲಾಶಯದ ದಾಣದಲ್ಲಿ ಮುಖವನ್ನು ಮಾತ್ರ ಹೊರಹಾಕಿ ಉಳಿದ ದೇಹವನ್ನು ನೀರಿನಲ್ಲಿ ಅಡಗಿಸಿಕೊಂಡು ಕೂತ ಸುದ್ದಿ ಬಂತು. ಕೂಡಲೇ ನಾವು ವಿದ್ಯಾರ್ಥಿ ಮತ್ತು ಸಹಾಯಕ ಸಿಬ್ಬಂದಿಯ ಪಟಾಲಂದೊಡನೆ ಅಲ್ಲಿಗೆ ಹೋಗಿ ಹೆಬ್ಬಾವಿನ ಉಬ್ಬಿದ ಮುಂಬದಿ ಮತ್ತು ಹಿಂಬದಿ ಯನ್ನು ಹಗ್ಗದಿಂದ ಬಿಗಿದು ಜೀಪಿನಲ್ಲಿ ಅದನ್ನು ವಿಶ್ವವಿದ್ಯಾಲಯಕ್ಕೆ ತಂದೆವು. ಹೆಬ್ಬಾವು ಸಾಧು ಪ್ರಾಣಿ. ಕಚ್ಚಿದರೆ ವಿಷವಿಲ್ಲ, ಮುಟ್ಟಿದರೆ ನಂಜಿಲ್ಲ. ನುಂಗಿದ ಚಿಗರೆ ಜೀರ್ಣವಾಗುವ ಮೊದಲೇ ಅದರ ಮೇಲಿನ ಪ್ರಯೋಗ ಮುಗಿಯಬೇಕಾದ್ದರಿಂದ ಅದನ್ನು ಕೂಡಲೆ ಚಿಕ್ಕ ಕೋಣೆಯಲ್ಲಿ ಕ್ಲೋರೋಫಾರ್ಮ್ ಹಾಕಿ ಎಚ್ಚರ ತಪ್ಪಿಸಿದೆವು. ಇಲ್ಲಿಯ ವರೆಗೆ ಅದರ ಉದರದಲ್ಲಿ ಸೇರಿದ್ದು ಚಿಗರೆ ಎಂಬುದು ಶ್ರಮಿಕನಿಂದ ಅರಿತ ವಿಷಯವಾಗಿತ್ತು. ಅದನ್ನು ಖಚಿತಪಡಿಸಿ ಕೊಳ್ಳಲು ಹೊಟ್ಟೆಯನ್ನು ಸ್ಫೋಟಿಸುವುದು ಒಂದು ಮಾರ್ಗ. ಹಾಗೆ ಮಾಡಿದರೆ ಹೊರ ಚಿಮ್ಮಿ ಬರುವ ಚಿಗರೆ ಉದರಾಂತರಾಳದಲ್ಲಿ ತ್ರಂಬುದಕ್ಕೆ ಪುರಾವೆ ಉಳಿಯುತ್ತಿರಲಿಲ್ಲ. ಆದ್ದರಿಂದ ಉದರ ಭಾಗವನ್ನು ಎರಡೂ ಬದಿ ಗಳಲ್ಲಿ ಬಂಧಿಸಿ ಮಧ್ಯ ಭಾಗವನ್ನು ರಾಸಾ ಯನಿಕಗಳಿಂದ ಪಾರದರ್ಶಕಗೊಳಿಸಲಾಯಿತು. ಇದರಿಂದ ಗಾಜಿನ ಪೆಟ್ಟಿಗೆಯಲ್ಲಿ ಇಟ್ಟ ವಸ್ತುಗಳಂತೆ ಒಳಗೆ ಹುಗಿದ ಚಿಗರೆಯು ತೋರಹತ್ತಿತು. ಇದನ್ನು ಇರಿಸಲಿಕ್ಕೆ ಎಂಟು ಅಡಿ ಉದ್ದ, ನಾಲ್ಕು ಅಡಿ ಅಗಲ ಎತ್ತರ ಮತ್ತು ೨.೫ ಅಡಿ ಆಗಲವಾದ ಕಾಜಿನ ಪೆಟ್ಟಿಗೆಯನ್ನು ಮುಂಬಯಿಯಿಂದ ತರಿಸಲಾಯಿತು. ಈಗ ಅದು ರಸಾಯನಗಳಲ್ಲಿ ಗರ್ಭಸ್ಥ ಶಿಶುವಿನಂತೆ

ಚಿರನಿದ್ರೆ ಮಾಡುತ್ತಿರುವಂತೆ ಕಾಣತೊಡಗಿತು. ಈ ಅಪರೂಪದ ದೃಶ್ಯವನ್ನು ನೋಡಲಿಕ್ಕೆ ವಿದೇಶೀಯರೂ ಸೇರಿದಂತೆ ಬರುವ ಜನರನ್ನು ನಿಯಂತ್ರಿಸುವುದೇ ನಮಗೆ ಒಂದು ಸಮಸ್ಯೆಯಾಯಿತು. ಇದನ್ನು ನೋಡಲು ಭಾರತ ಸರಕಾರದವರು ಒಂದು ಪತ್ರಕರ್ತರ ತಂಡವನ್ನು ಕಳಿಸುವ ವ್ಯವಸ್ಥೆ ಮಾಡಿದರು. ಅದರಲ್ಲಿ ಆಗ 'ಕರ್ಮವೀರ' ಪತ್ರಿಕೆಯ ಸಹಾಯಕ ಸಂಪಾದಕರಾಗಿದ್ದ ಶ್ರೀ ಎಸ್. ವಿ. ಪಾಟೀಲರೂ ಒಬ್ಬರು. ಮುಂದೆ ಅವರು ಆ ಬಗ್ಗೆ ಒಂದು ಲೇಖನ ಬರೆದು ಛಾಯಾಚಿತ್ರದೊಂದಿಗೆ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದರು.

ಹೆಬ್ಬಾವುಗಳು ಪ್ರಾಣಿಗಳನ್ನು ನುಂಗುವ ವಿಷಯದಲ್ಲಿ ಅನೇಕ ಕಲ್ಪನೆಗಳು ಪ್ರಚಲಿತವಾಗಿರುತ್ತವೆ. ಕೆಲವರು ಅದರ ಬಾಯಿಯಲ್ಲಿ ಸಿಕ್ಕು ಬಿದ್ದ ವ್ಯಕ್ತಿಯು ತನ್ನ ಕಠಾರಿಯಿಂದ ಅದರ ಗಂಟಲು ಸೀಳಿ ಹೊರ ಬಂದನೆಂದೂ ಇನ್ನು ಕೆಲವರು ಅದು ನುಂಗುವ ಕಾಲಕ್ಕೆ ಹುಯಿಲೆಬ್ಬಿಸಿ ಜನರ ಸಹಾಯದಿಂದ ಪಾರಾದೆನೆಂದೂ ಹೇಳುವರು. ಆದರೆ ನಿಜ ಸಂಗತಿಯೇ ಬೇರೆ. ಹೆಬ್ಬಾವುಗಳು ಜಪ್ಪಿಸಿ ಹುದುಗಿ ಕುಳಿತು ಬೇಟೆಯಾಡುವ ಪ್ರಾಣಿ. ಬೇಟೆಯ ಯಾವುದೇ ಒಂದು ಭಾಗವನ್ನು, ಅದರಲ್ಲಿಯೂ ಕಾಲನ್ನು, ತನ್ನ ಬಾಯಿಯಿಂದ ಕಚ್ಚಿ ಅದೇ ಸಮಯಕ್ಕೆ ಬಹು ವೇಗದಿಂದ ಅದರ ದೇಹದ ಸುತ್ತ ಮೂರು ಸುತ್ತು ಬಿಗಿದು ಬಲಿಬಿದ್ದ ಪ್ರಾಣಿ ಸಾಯುವ ವರೆಗೆ ತನ್ನ ಹಿಡಿತವನ್ನು ಹೆಚ್ಚಿಸುವುದು. ಒಮ್ಮೆ ಈ ಹಾವುಗಳ ಬಾಯಿಗೆ ಸಿಕ್ಕಮೇಲೆ ತಿರುಗಿ ಜೀವಂತ ಹೊರಬರುವ ಸಾಧ್ಯತೆಯೇ ಇರುವುದಿಲ್ಲ. ಅದಕ್ಕೆ ಚೂಪಾದ ಹಲ್ಲುಗಳಿದ್ದು ಪ್ರಾಣಿಯು ಹೊರಬರಲಿಕ್ಕೆ ಪ್ರಯತ್ನ ಮಾಡಿದಷ್ಟು ಹಲ್ಲುಗಳು ಹೆಚ್ಚು ಭದ್ರವಾಗಿ ಅದನ್ನು ಹಿಡಿದುಕೊಳ್ಳುತ್ತವೆ. ಬೇಟೆ ಸತ್ತ ಮೇಲೆ ಹಿಡಿತವನ್ನು ಸಡಿಲಿಸಿ ಅದನ್ನು ನುಂಗತೊಡಗುವುದು. ಈ ಹಾವುಗಳ ಬಾಯಿ ಬಲು ಚಿಕ್ಕದು. ಈ ಬೃಹತ್ ಸರ್ಪಗಳ ಮೇಲಿನ ಮತ್ತು ಕೆಳಗಿನ ದವಡೆಗಳ ನಡುವೆ ಎಲುಬುಗಳ ಸಂದಿ ಇರದ್ದರಿಂದ ತನ್ನಳವಿನಲ್ಲಿ ಸಿಕ್ಕ ಪ್ರಾಣಿಯ ಗಾತ್ರಕ್ಕೆ ತಕ್ಕಂತೆ ತನ್ನ ಬಾಯಿಯನ್ನು ಹಿಗ್ಗಿಸಬಲ್ಲದು. ನಳರಾಜನು ಹಾವಿನ ದವಡೆಯಲ್ಲಿ ಸಿಕ್ಕು ನೀಲವರ್ಣದವನಾಗಿ ಸಜೀವ ಹೊರಬಂದದ್ದು ಬರಿ ಕವಿ ಕಲ್ಪನೆ.

ರಾತ್ರಿಯಲ್ಲಿ ಏಕೆ, ದಿನದಲ್ಲಿ ಸಹ ನಾನು ಮೇಲೆ ಹೇಳಿದ ತರಾಯಿ ಭಾಗದಲ್ಲಿ ಹುಲಿಗಳ ಹಾವಳಿ ಹೆಚ್ಚು. ಅವನ್ನು ಎದುರಿಸುವ ಪ್ರಸಂಗ ಸಾಮಾನ್ಯ. ಹೀಗಾಗಿ ಕುಮಾಂವ್ ಎಂದು ಕರೆಯಲ್ಪಡುವ ಈ ವಿಭಾಗದಲ್ಲಿ ಪ್ರಾಣಿಶಾಸ್ತ್ರಜ್ಞನೂ ಪಂಡಿತ ಬೇಟೆಗಾರನೂ ಆದ ಜಿಮ್ ಕಾರ್ಬೆಟ್ ಒಂದು ಹುಲಿಗಳ ಅಭಯಾರಣ್ಯವನ್ನು ನಿರ್ಮಿಸಿದ. ಅಲ್ಲಿ ಹುಲಿಗಳನ್ನೂ ಇತರ ವನ್ಯ ಪ್ರಾಣಿಗಳನ್ನೂ ಅತಿ ಸಮೀಪದಿಂದ ವೀಕ್ಷಿಸುವ ವ್ಯವಸ್ಥೆಯಿದೆ.

ಒಂದು ದಿನ ಮನೆಗೆ ಬಂದ ಅತಿಥಿಗಳಿಗೆ ಮೃದುವಾದ ಜಿಗರೆಯ ಮಾಂಸದ ರಸದೌತಣ



"ವಧು ಇನ್ಯಾರ ಜೊತೆಗೋ ಓಡಿಹೋಗಿದಾಳೇಂತ ನೀವ್ಯಾಕೆ ಅಳ್ತೀಯೋ ಮಗನೆ... ವರದಕ್ಷಿಣೆ ಪೂರಾ ಚುಕ್ತಾ ಕೊಟ್ಟಿದ್ದಾರೆ ಅವರು."

ವನ್ನು ಮಾಡಿಸಲಿಕ್ಕೆ ನನ್ನ ತಾಂತ್ರಿಕ ಸಲಹೆಗಾರ ಡಾ. ಬೀಮಾರರೊಡನೆ ಉಪಕುಲಪತಿಗಳಾದ ಸ್ಟೀವರ್ಸನ್ ಎನ್ನುವವರು ರಾತ್ರಿ ಕಾಲದಲ್ಲಿ ಸುಸಜ್ಜಿತ ಜೀಪಿನಲ್ಲಿ ಬೇಟೆಗೆ ಹೊರಟರು. ಕಬ್ಬಿನ ಬೆಳೆಯಲ್ಲಿ ನಿಂತ ಚಿಗರೆಯನ್ನು ನೋಡಿ ಗುಂಡು ಹಾರಿಸಿ ಅದು ನೆಲಕ್ಕುರುಳಿದ್ದು ಕಂಡು, ಅದರ ಮೇಲೆ ಫ್ಲಡ್‌ಲೈಟ್ ಚೆಲ್ಲಿ ಚಿಗರೆಯನ್ನೆತ್ತಿಕೊಳ್ಳಲಿಕ್ಕೆ ಬೀಮಾರ್ ಕೆಳಗಿಳಿದರು. ಹತ್ತಿರದಲ್ಲೆಲ್ಲೂ ಚಿಗರೆ ಕಾಣದ್ದರಿಂದ ಉಪಕುಲಪತಿಯು ಮೊದಲಲ್ಲಿ ಜೀಪನ್ನು ಮುನ್ನುಗ್ಗಿಸಿ ಬೀಮಾರರನ್ನು ತಕ್ಷಣ ಮೇಲೆಳೆದುಕೊಂಡರು. ಕಾರಣ ಇವರಾಡುವ ಬೇಟೆಗೆ ಸಾಕ್ಷಿಯಾಗಿ ಅಡಗಿ ನಿಂತ ಹುಲಿ ಆ ಬೇಟೆಯನ್ನು ಯಾವುದೋ ಮಾಯದಿಂದ ಅಪಹರಿಸಿತ್ತು. ಇನ್ನೊಂದು ಕ್ಷಣದಲ್ಲಿ ಅದು ಬೀಮಾರರ ಮೇಲೆ ಎರಗುವ ಸಂಭವವನ್ನು ತಿಳಿದ ಉಪಕುಲಪತಿಗಳು ಬಹಳ ಚಾಣಾಕ್ಷತನದಿಂದ ಅವರನ್ನು ಅಪಾಯದಿಂದ ಪಾರು ಮಾಡಿದರು.

ಹತ್ತು ಹನ್ನೆರಡು ಜನರನ್ನು ಕೊಂದ ಆ ಹುಲಿಯನ್ನು ಬೇಟೆಯಾಡಿದವರಿಗೆ ಸಾವಿರ ರೂಪಾಯಿ ಬಹುಮಾನ ಕೊಡುವುದಾಗಿ ಅಲ್ಲಿಯ ಜಿಲ್ಲಾಧಿಕಾರಿಗಳು ಸಾರಿದರು. ಓರ್ವ ಪೋಲೀಸ್ ಅಧಿಕಾರಿಯು ತನ್ನ ಜೀವದ ಹಂಗು ತೊರೆದು ಆ ಹುಲಿಯನ್ನು ಆನೆಯ ಮೇಲಿಂದ ಬೇಟೆಯಾಡಿ ಅದರ ಕಳೇವರವನ್ನು ಅಧಿಕಾರಿಗಳ ಕಡೆಗೆ ಒಯ್ದು ಬಹುಮಾನ ಕೊಡಬೇಕೆಂದು ಕೇಳಿದ. ಆದರೆ ಅವನಿಗೆ ಅಲ್ಲಿ ಒಂದು ವಿಚಿತ್ರವಾದ ಸನ್ನಿವೇಶ ಕಾದಿತ್ತು. ಬಹುಮಾನವನ್ನು ಕೊಡುವ ಅಧಿಕಾರಿಯು ಇದು ಹುಲಿಗಳು ಆವಾಸ; ಹಂತಕವಲ್ಲದ ಹುಲಿಗಳನ್ನು ಕೊಲ್ಲುವುದು ಅಪರಾಧ. ಹತ್ತು ಹನ್ನೆರಡು ಜನರನ್ನು ಬೇಟೆಯಾಡಿದ ಹುಲಿಯು ಇದೇ ಎಂದು ಸಿದ್ಧಪಡಿಸು ಎಂದು ಹೇಳಿದ. ಸ್ವಾಭಾವಿಕವಾಗಿ ಪೋಲೀಸ್ ಅಧಿಕಾರಿಗೆ ಪುರಾವೆಯನ್ನು ಒದಗಿಸಲು ಸಾಧ್ಯವೇ ಇರಲಿಲ್ಲ. ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಬೇಟೆಗಾಗಿ ಪ್ರಸಿದ್ಧನಾಗ ಕೃಷಿ ವಿಶ್ವವಿದ್ಯಾಲಯದ ಉಪಕುಲಪತಿಯ ಸಲಹೆ ಕೇಳಬೇಕೆಂದು ಒಬ್ಬ ಸೂಚಿಸಿದ. ಅದರಂತೆ ಮಾಡಲು ಅವರಿಗೂ ಏನೂ ತೋಚದ್ದರಿಂದ ಎಲ್ಲರನ್ನೂ ನನ್ನ ಕಡೆ ಕರೆತಂದರು. ನಾನು ಈ ವಿಚಾರವನ್ನು ಹೇಗೆ ಬಗೆಹರಿಸಬೇಕೆಂದು ವಿಚಾರಿಸಿ, ಸತ್ತ ಹುಲಿಯ ಹೊಟ್ಟೆಯನ್ನು ಸೀಳಿ, ಹಿಂದೆ ಮಾಡುವನ್ನು ಪಾರದರ್ಶಕಗೊಳಿಸಿದ ತಂತ್ರವನ್ನು ಪ್ರಯೋಗಿಸಿದ ಮೇಲೆ ಅದರ ಒಡಲಿನಲ್ಲಿ ಮನುಷ್ಯರ ಕೈ ಮತ್ತು ಕಾಲ್ಬೆರಳುಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಇದರಿಂದ ಅದು ನರಹಂತಕ ಎಂದು ನಿರ್ಣಯಿಸಲು ಯಾವ ಅಡೆತಡೆಯೂ ಉಳಿಯಲಿಲ್ಲ. ಈ ಆಧಾರದ ಮೇಲೆ ಆ ಪೋಲೀಸ್ ಅಧಿಕಾರಿಗೆ ಬಹುಮಾನ ದೊರೆಯಿತು ಎಂದು ಬೇರೆ ಹೇಳಬೇಕಾಗಿಲ್ಲ.

## ವಿಪರ್ಯಾಸ

ಅರವತ್ತರ ಹರೆಯದ ತರುಣಗೆ
ಹದಿನಾರು ಪ್ರಾಯದ ಮದುಕ
ನೇಣು ಬಿಗಿದಂತೆ ತಾಳಿ ಕಟ್ಟುವುದನ್ನು
ಆಸೆ-ನಿರಾಸೆಯ ಸಂಯುಕ್ತ ಕಣ್ಣುಗಳಿಂದ ನೋಡುವ
ಹದಿ ಹರೆಯದ ವಿಧವೆಯೊಬ್ಬಳಿಗೆ
ಮುದಿಗೂಬೆಗಳೆಲ್ಲಾ ಸೇರಿ ಬುದ್ಧಿ ಹೇಳಿದುವು:
ಮದುವೆ ಮಂಗಳಕಾರ್ಯ; ವಿಧವೆ ನೀನು
ಭಾಗವಹಿಸುವಂತಿಲ್ಲ... ಮಗಳೇ...
ಮನೆಗೆ ಹೋಗಿ ವ್ರತಪಾರಾಯಣ ಮಾಡೆಂದು.

– ತುಳಸೀತನಯ

ವಿ. ಎ. ಜೋಶಿ

# ದಣಿವನ್ನು ಗೆಲ್ಲಿರಿ

ಛೀ, ನನಗೆ ದುಡಿದು ದುಡಿದು ಸಾಕಾಗಿದೆ. ನಿತ್ರಾಣ ಅನಿಸುತ್ತಿದೆ..."

"ಉಸ್ಸಪ್ಪ, ಈ ಕೆಲಸಗಳು ನನ್ನನ್ನು ದಣ್ಣು ಮಾಡುತ್ತಿವೆ..."

"ಓಹ್, ನನಗೆ ವಿಪರೀತ ದಣಿವು, ಏನೂ ಬೇಡ. ಸುಮ್ಮನೇ ಬಿದ್ದುಕೊಳ್ಳಬೇಕು ಆತೀನಿ..."

--ಇಂಥ ಹಲವು ಮಾತುಗಳನ್ನು ನಾವು ಪರಿಸರದಲ್ಲಿ ಅನುದಿನ ಕೇಳುತ್ತಿರುತ್ತೇವಷ್ಟೆ. ಕೇಳುವುದೇನು ಬಂತು, ಈ ಉದ್ಗಾರಗಳು ಆಗಾಗ ನಮ್ಮ ಬಾಯಿಂದಲೂ ಬರುತ್ತಲೇ ಇರುತ್ತವೆ!

ದಣಿವು ದೈಹಿಕ ಹಾಗೂ ಮಾನಸಿಕ ಈ ಎರಡೂ ರೂಪಗಳಲ್ಲಿ ಕಾಣಿಸಿಕೊಳ್ಳುವುದುಂಟು. ದೈಹಿಕ ದಣಿವು ಮನಸ್ಸಿನ ನಿಷ್ಕ್ರಿಯತೆಗೆ ಮಾರ್ಗ ಮಾಡಿಕೊಡುತ್ತದೆ, ಅಲ್ಪ ಕಾಲದ ವಿಶ್ರಾಂತಿಯ ನಂತರ ಶರೀರದ ದಣಿವನ್ನು ನಿವಾರಿಸಬಹುದು. ಆದರೆ ಮಾನಸಿಕ ದಣಿವನ್ನು ದೂರಗೊಳಿಸುವುದು ಅಷ್ಟು ಸುಲಭವಲ್ಲ. ಕೆಲವರಲ್ಲಿ ದಣಿವಿನ ಭಾವ ಅವರ ಮನೋವಿಚಾರಗಳ ಒಂದು ಅಂಗವಾಗಿಯೇ ಬೆಳೆದಿರುತ್ತದೆ. ಇವರು ಕಾರ್ಯ ಕೈಕೊಳ್ಳುವ ಮೊದಲೇ ದಣಿದು ಬಸವಳಿದಿರುತ್ತಾರೆ. ಲಭ್ಯ ಶಕ್ತಿಯನ್ನು ಯುಕ್ತಿಪೂರ್ವಕವಾಗಿ ಬಳಸುವುದು ಅವಶ್ಯ. ಆಲಸ್ಯದಲ್ಲಿ ಹಲವು ಸುಖಗಳಿವೆ ಎಂದು ಆಲಸಿಗಳು ನಂಬಿರುವರಾದರೂ, ಅವರ ಚೈತನ್ಯಕ್ಕೆ ಕಾಲಕ್ರಮದಲ್ಲಿ ತುಕ್ಕು ಹಿಡಿಯುತ್ತದೆ - ಎಂಬುದನ್ನು ಅವರು ಮರೆಯಕೂಡದು. ಅಲ್ಪಕಾಲದ ಆಲಸ್ಯ ಅಷ್ಟೇ ಕಾಲದ ಕೆಲಸಕ್ಕಿಂತ ಹೆಚ್ಚಿನ ದಣಿವನ್ನು ಉಂಟುಮಾಡುತ್ತದೆ, ಅಲ್ಲದೆ ಒಂದು ಬಗೆಯ ಮ್ಲಾನತೆ ಇಲ್ಲಿ ಮನವನ್ನು ಕವಿಯುತ್ತಿದೆ.

ನಾಳಿನ ಯೋಚನೆ ಹಲವು ಸಲ ಮನದಲ್ಲಿ ಚಿಂತೆಗಳ ಗೂಡು ಕಟ್ಟುವುದು. ಏಸು ಕ್ರಿಸ್ತ ಕಿವಿ ಮಾತು ಹೇಳಿದ: 'ನಾಳೆಗಾಗಿ ಯಾವ ವಿಚಾರವೂ ಬೇಡ.' ಇಲ್ಲಿ ವಿಚಾರ ಚಿಂತೆಗೆ ಪರ್ಯಾಯವಾಗಿ ಬಂದಿದೆ, ನಿಲುಕುವ ಯೋಚನೆಗಳು ಯಾವತ್ತೂ ಅವಶ್ಯ. ಕೇವಲ ಹಗಲುಗನಸುಗಳು ಪ್ರಯೋಜನಕಾರಿಯಾಗಲಾರವು. ಅವು ಕೆಲ ಕಾಲ ಮನಸ್ಸಿಗೆ ರಂಜನೆಯನ್ನು ಒದಗಿಸಬಹುದಷ್ಟೆ. ಹಗಲುಗನಸುಗಳ ಬೆನ್ನು ಹತ್ತಿದ ವ್ಯಕ್ತಿ ಅವಾಸ್ತವ, ಅವ್ಯವಸ್ಥಿತ ಜೀವನವನ್ನು ಅಪ್ಪಿಕೊಳ್ಳುತ್ತಾನೆ. ಇವು ಅವನನ್ನು ಸುಮ್ಮನೆ ಕೆರಳಿಸುತ್ತವೆ, ದಣಿಸುತ್ತವೆ, ಪಥಭ್ರಾಂತನನ್ನಾಗಿಸುತ್ತವೆ.

ಆತ್ಮವಿಶ್ವಾಸದ ಅಭಾವ ಬಹುಬೇಗ ದಣಿವನ್ನು ಹುಟ್ಟಿಸುತ್ತದೆ. ಕೈಗೆತ್ತಿಕೊಂಡ ಕಾರ್ಯದ ಹೊಣೆ ಇಲ್ಲಿ ಸಂಬಂಧಿಸಿದವನನ್ನು ಹೆಜ್ಜೆ ಹೆಜ್ಜೆಗೆ ಅಣಕಿಸುತ್ತಿರುತ್ತದೆ. ಅಧೈರ್ಯದಿಂದಾಗಿ ನಿಶ್ಚಿಂತ ಮನಸ್ಸಿನಿಂದ ಮುನ್ನಡೆಯಲು ಸಾಧ್ಯವಾಗುವುದಿಲ್ಲ. ಬದುಕಿನ ಹೊಸ ಆಹ್ವಾನಗಳನ್ನು ಎದುರಿಸಲು ಅವನು ಹಿಂಜರಿಯುವುದರಿಂದ ಸೋಲುವನು. ಈ ಸೋಲು ಅವನನ್ನು ಹತಾಶನನ್ನಾಗಿಸುತ್ತದೆ. ಜೊತೆಗೆ ದಣಿವು ಅವನನ್ನು ಆವರಿಸುತ್ತದೆ.

ಕೀಳರಿಮೆಯ ವಿಷಸಂತಾನಗಳಲ್ಲಿ ದಣಿವು ಒಂದಾಗಿದೆ. ಇಲ್ಲಿ ವ್ಯಕ್ತಿಯ ಅಂತರಂಗದ ತುಮುಲ ಅವನ ವಿಚಾರಧಾರೆಯ ತೀಕ್ಷ್ಣತೆಯನ್ನು ಕುಂಠಿತಗೊಳಿಸುತ್ತದೆ. ಅವನ ಗಮನ ಕೆಲಸದ ಕಡೆಗೆ ಹರಿಯದೆ, ತನ್ನ ಕುರಿತು ಇತರರ ವಿಚಾರಗಳೇನು? ಎಂಬುದರ ಸುತ್ತ ಸುತ್ತ-ತೊಡಗುತ್ತದೆ, ಇದರಿಂದ ಕಾರ್ಯಕ್ಷಮತೆ ಕ್ಷೀಣಿಸುತ್ತದೆ, ಕಾರ್ಯದಲ್ಲಿ ಚಿತ್ತ ನಿಶ್ಚಲವಾಗಿ ನಿಲ್ಲುವುದಿಲ್ಲ, ಚಂಚಲ ಮನಸ್ಸಿನ ಕಾರ್ಯಾಚರಣೆ ಸಫಲತೆಯನ್ನು ತರಲು ಹೇಗೆ ಸಾಧ್ಯ ?

ಉತ್ಸಾಹದಿಂದ ಕಾರ್ಯಪ್ರವೃತ್ತರಾಗುವುದರಿಂದ ಅಕಾಲ ದಣಿವನ್ನು ಗೆಲ್ಲಲು ಸಾಧ್ಯ. ಕೈಕೊಂಡ ಕಾರ್ಯದಲ್ಲಿ ತನ್ಮಯತೆ ಹಾಗೂ ಸಮರ್ಪಣಭಾವ ದಣಿವನ್ನು ಬಹುಮಟ್ಟಿಗೆ ದೂರ ಸರಿಸುತ್ತವೆ. ಉತ್ಸಾಹವು ಆಶಾಭಾವವನ್ನು ಪ್ರಚೋದಿಸುತ್ತದೆ. ಆಶಾಭಾವ ಹೊಸ ಶಕ್ತಿಯನ್ನು ವ್ಯಕ್ತಿಯಲ್ಲಿ ತುಂಬುತ್ತದೆ. ಸೋಮಾರಿತನವನ್ನು ನಮ್ಮ ದೇಶಕ್ಕೆ ಅಂಟಿದ ಶಾಪ ಎಂದು ಬಗೆದ ಎಂ. ವಿಶ್ವೇಶ್ವರಯ್ಯನವರು ಶಿಸ್ತು, ಕಾರ್ಯಶ್ರದ್ಧೆ ಹಾಗೂ ದಕ್ಷತೆಯ ದುಡಿಮೆಯ ಮಾದರಿಯೊಂದನ್ನು ನಮ್ಮೆದುರು ಮಂಡಿಸಿದ್ದಾರೆ. ಈ ಶತಾಯುಷಿ ಬದುಕಿನ ಕೊನೆಯ ಉಸಿರಿನವರೆಗೆ ಉತ್ಸಾಹದ ಬುಗ್ಗೆಯಾಗಿದ್ದರು.

ಯುಗಪ್ರವರ್ತಕ ವಿಜ್ಞಾನಿ ಥಾಮಸ್ ಅಲ್ವಾ ಎಡಿಸನ್ ಜೀವನದ ಅಂತಿಮ ಗಳಿಗೆಯವರೆಗೂ ವಿವಿಧ ಸಂಶೋಧನೆಗಳಿಗೆ ತನ್ನನ್ನೇ ಸಮರ್ಪಿಸಿಕೊಂಡ ದಿವ್ಯಚೇತನ. ಅವಿಶ್ರಾಂತ ದುಡಿಮೆ ಈ ವಿಜ್ಞಾನಿಯ ಬದುಕನ್ನು ಭವ್ಯವಾಗಿ ರೂಪಿ



"ಬರೋ ಎಲೆಕ್ಷನ್‌ನಲ್ಲಿ ಸೀಟು ಸಿಗಲೀಂತ ಅಂದ್ಕೊಂಡು ತಿರುಪತಿ ತಿಮ್ಮಪ್ಪನ ಹೆಸರ್‍ನಲ್ಲಿ ಕಾಣಿಕೆ ಹಾಕ್ಕೊಂಡಿ ಸ್ವಾಮಿ, ನಿಮ್ಮ ಹಣೇಬರಹ ಯಾರಿಗೆ ಗೊತ್ತು..."

ಸಿತು. ಅವನ ೭೫ನೆಯ ಹುಟ್ಟುಹಬ್ಬದ ದಿನ ನಡೆದ ಪತ್ರಿಕಾ ಸಂದರ್ಶನ ಅವನ ಜೀವನ ಧೋರಣೆಯ ಮೇಲೆ ಬೆಳಕು ಚೆಲ್ಲುತ್ತದೆ.

ಒಬ್ಬ ಪತ್ರಿಕಾ ಪ್ರತಿನಿಧಿ ಎಡಿಸನ್ನನನ್ನು ಕೇಳಿದನಂತೆ, "ಸರ್, ನೀವು ಎಂದು ನಿವೃತ್ತರಾಗಲು ಬಯಸುತ್ತೀರಿ?" ಎಂದು.

"ನಿವೃತ್ತಿ ! ಛೀ ಎಂದಿಗೂ ಇಲ್ಲ."

"ನೀವು ವಿಶೇಷವಾಗಿ ಆಸಕ್ತಿ ಇಟ್ಟುಕೊಂಡ್ದುದು ಯಾವುದರಲ್ಲಿ?"

"ನನ್ನ ಆಸಕ್ತಿ ಅಂದಿರಾ? ಪ್ರತಿಯೊಂದು ವಿಷಯದಲ್ಲಿಯೂ ನನಗೆ ಸಮಾನ ಆಸಕ್ತಿ ಇದೆ."

"ನಿಮ್ಮ ಪ್ರತಿಭೆಯ ಮೂಲ ಎಲ್ಲಿದೆ?"

"ಪ್ರತಿಭೆಯ ಮೂಲವೇ? ಪ್ರತಿಭೆ ಅಂದರೆ ಕಠಿಣ ಪರಿಶ್ರಮಕ್ಕೆ ಪರ್ಯಾಯ ಪದ ಎಂದು ನನ್ನ ನಂಬಿಕೆ, ನೂರಕ್ಕೆ ೯೮ ಪಾಲು ಬೆವರು, ಎರಡು ಪಾಲು ಸ್ಫೂರ್ತಿ ಸೇರಿ ಆದಾಗಿರುತ್ತದಷ್ಟೆ !"

ನಮ್ಮ ನೆರೆಹೊರೆಯಲ್ಲಿ ಕಣ್ಣರಳಿಸಿ ನೋಡಿದರೆ ಹಲವು ಪ್ರಕಾರದ ಜನ ಕಾಣ ಸಿಗುತ್ತಾರೆ. ಕೆಲ ಗೃಹಿಣಿಯರು ತಮ್ಮ ಚಿಕ್ಕ ಕುಟುಂಬಗಳ ಮನೆಗೆಲಸ ಮಾಡುವಲ್ಲಿಯೆ ಸುಸ್ತಾಗುತ್ತಾರೆ. ಅವರ ಅಲ್ಪಕಾಲದ ವಿರಾಮದಲ್ಲಿಯ ಮಾತುಕತೆ ಕೂಡ, ಮುಗಿಯದ ಕೆಲಸ ಹಾಗೂ ಕೈಲಾಗದ ಸ್ಥಿತಿ ಇವುಗಳ ಕುರಿತು ಇರುತ್ತದೆ. ಇದು ಅವರಲ್ಲಿ ಅಳಿದುಳಿದ ಉತ್ಸಾಹವನ್ನು ಕುಗ್ಗಿಸಿ ಬಿಡುತ್ತದೆ. ವಿರಾಮದ ನಂತರದ ಕೆಲಸವನ್ನು ಅವರು ದಣಿವಿನ ಮನೋಭಾವದಲ್ಲೆ ಪ್ರಾರಂಭಿಸುತ್ತಾರೆ. ಹೀಗಾಗಿ ಅವರ ಕಾರ್ಯಗಳೂ ಮುಗಿಯುವುದಿಲ್ಲ, ದಣಿವೂ ಅವರಿಂದ ದೂರಾಗುವುದಿಲ್ಲ.

ಇನ್ನು ಕೆಲವರು ಗೃಹಿಣಿಯರು ವಿರಳವಾಗಿ ಯಾರಾದರೂ ಕಾಣಸಿಕ್ಕುತ್ತಾರೆ. ಇವರು ಉತ್ಸಾಹದ ಕಾರಂಜಿಯಾಗಿ ಪರಿಸರದಲ್ಲಿ ಸುತ್ತುತ್ತಿರುತ್ತಾರೆ. ಮನೆಯ ಮಕ್ಕಳ ಉಸ್ತುವಾರಿ ಅಲ್ಲದೇ, ಸಮಾಜ ಸೇವೆಯಲ್ಲೊ, ಒಂದಿಲ್ಲೊಂದು ವೃತ್ತಿ ಇಲ್ಲವೇ ಹವ್ಯಾಸದಲ್ಲೊ ಇವರು ತಮ್ಮ ಲವಲವಿಕೆಯನ್ನು ಹರಿಬಿಟ್ಟಿರುತ್ತಾರೆ. ನಿರಂತರ ಕ್ರಿಯಾಶಿಲತೆ ಇವರಿಗೆ ಜೀವನ ಉತ್ಸಾಹವನ್ನು ಪ್ರತಿ ಗಳಿಗೆ ಗಳಿಗೆ ಪೂರೈಸುತ್ತಿರುತ್ತದೆ. ಇವರು ಚಟುವಟಿಕೆಯಿಂದ ಅಡ್ಡಾಡುವುದನ್ನು ನೋಡಿದರೆ, ದಣಿದವರಿಗೆ ಅಸೂಯೆ ಅನಿಸುತ್ತದೆ. ಹಾಗೆಯೆ, ಇವರ ಕ್ರಿಯಾಶೀಲತೆಯ ಉಗಮ ಎಲ್ಲಿರಬೇಕು ಎಂದು ಬೆರಗಾಗುತ್ತದೆ. ಉತ್ಸಾಹವೇ ಜೀವನ ಎಂದು ಈ ಪಾದರಸ ಗೋತ್ರದ ಜನ ನಮಗೆ ತಮ್ಮ ಇರುವಿಕೆಯಿಂದ ಬೋಧಿಸುತ್ತಾರೆ.

ನಿರುತ್ಸಾಹ ಸೋಲಿನ ಮೆಟ್ಟಿಲು, ದಣಿವಿನ ದಾರಿ, 'ಮೂವತ್ತರಲ್ಲಿ ಸತ್ತರು, ಅರವತ್ತರಲ್ಲಿ ಸಂಸ್ಕಾರವಾಯಿತು' – ನಿರುತ್ಸಾಹಿಗಳಿಗೆ ಹೇಳಿ ಮಾಡಿಸಿದ ಉಕ್ತಿ. ಈ ಜೀವಚ್ಛವಗಳು ಭೂಮಿಗೆ ಮಾತ್ರವಲ್ಲ ತಮಗೂ ಭಾರವಾಗಿರುತ್ತವೆ. ಪರಿಸರದಲ್ಲಿಯ ಎಳೆಯರು ಇಂಥವರನ್ನು ಆದರ್ಶವಾಗಿಟ್ಟುಕೊಂಡರೆ, ಕರಾಳ ಭವಿಷ್ಯವನ್ನು ಆಮಂತ್ರಿಸಿದಂತೆಯೆ ಸರಿ.

ದಣಿವನ್ನು ಗೆಲ್ಲಲು ಅತ್ಯಂತ ಸುಲಭ ಉಪಾಯವೆಂದರೆ, ಕೈಗೆತ್ತಿಕೊಳ್ಳುವ ಕಾರ್ಯವನ್ನು ಮನಸಾ ಪ್ರೀತಿಸುವದು. ಇದು ಅಪರೋಕ್ಷವಾಗಿ ಬದುಕಿನ ಆರಾಧನೆಯೆ ಆಗಿದೆ. ಕಾಯಕವೇ ಕೈಲಾಸ ತಾನೆ? ಬೆಂಜಮಿನ್ ಫ್ರಾಂಕ್ಲಿನ್ ಹೇಳಿದ ಮಾತೊಂದು ಸದಾ ಕಣ್ಣ ಮುಂದಿರಲಿ–'ನೀವು ಜೀವನವನ್ನು ಪ್ರೀತಿಸುತ್ತೀರಾ, ಹಾಗಾದರೆ ಕಾಲವನ್ನು ಪೋಲು ಮಾಡಬೇಡಿ, ಏಕೆಂದರೆ ಕಾಲದ ಸಂಯೋಜನೆಯೆ ಜೀವನ!'



೭೮

## ಶಾಪದಿಂದ ಪಾಪಕ್ಕೆ

ಶಾಪ ವೃತ್ತಾಂತಗಳಿಂದ ಜಗತ್ತಿನ ಎಲ್ಲ ಪುರಾತನ ಆಖ್ಯಾನಗಳು ತುಂಬಿ ತುಳುಕುತ್ತವೆ. ನಮ್ಮ ವೇದಗಳು, ಬಬಿಲೋನಿಯನ್, ಅಸೀರಿಯನ್ ದಾಖಲೆಗಳು ಮೊದಲಾಗಿ ಎಲ್ಲವುಗಳಲ್ಲಿ ಶಾಪದ ವಿಷಯ ಬರುತ್ತದೆ. ಶಾಪ ಎಂದರೆ ಯಾವುದಾದರೂ ಅನ್ಯಾಯಕ್ಕೆ, ಅಪಮಾನಕ್ಕೆ ಅಥವಾ ಅಪರಾಧಕ್ಕೆ ನೊಂದ ಅಥವಾ ಕೋಪಿಸಿದ ದೇವತೆ, ಋಷಿ, ಮುನಿ, ಅಥವಾ ಸಾಮಾನ್ಯ ವ್ಯಕ್ತಿ ಅಲ್ಲದೆ ಪ್ರಾಣಿ ಕೂಡ-ತಪ್ಪಿತಸ್ಥನಿಗೆ ಏನಾದರೂ ಕೇಡು ಹಾರೈಸುವುದು. ಸಂಸ್ಕೃತಿಶಾಸ್ತ್ರವನ್ನು ಅಧ್ಯಯನಮಾಡಿದವರು, ಶಾಪ ಮತ್ತು ತದ್ವಿರುದ್ಧವಾದ ವರ ಇವೆರಡೂ ಪುರಾತನ ಮನುಷ್ಯನಿಗೆ, ಉಚ್ಚರಿಸಲ್ಪಟ್ಟ ನುಡಿಯ ಮಾಂತ್ರಿಕ ಶಕ್ತಿಯ ಮೇಲಿದ್ದ ಅಪಾರ ವಿಶ್ವಾಸದ ದ್ಯೋತಕವಾಗಿವೆಯೆಂದು ಹೇಳುತ್ತಾರೆ. ಈ ಅಂಶವನ್ನು ಶಾಪ ಶಬ್ದವೇ ಎತ್ತಿತೋರಿಸುತ್ತದೆ.

ಶಪ್ ಧಾತುವಿಗೆ ಪ್ರಮಾಣಪೂರ್ವಕ ಪ್ರತಿಜ್ಞೆ ಮಾಡುವುದು, ಆಣೆಯನ್ನು ಇಕ್ಕುವುದು ಇಕ್ಕಿಕೊಳ್ಳುವುದು, ಕೇಡು ಹಾರೈಸುವುದು ಮೊದಲಾದ ಅರ್ಥಗಳು ಇದ್ದರೂ ಶಪ್ ಎಂದರೆ ಗಟ್ಟಿಯಾಗಿ ನುಡಿಯುವುದು, ಬೈಯುವುದು, ಆಕ್ರೋಶ ಮಾಡುವುದು ಎಂಬುದೇ ಮೂಲಾರ್ಥ. ಆ ಧಾತುವಿಗೂ ಶಬ್ದಕ್ಕೂ ಸಂಬಂಧವಿದೆಯೆಂದು ಮೋನಿಯರ್ ವಿಲಿಯಮ್ಸ್ ಹೇಳುತ್ತಾನೆ. (ವೇದಗಳಲ್ಲಿ 'ಶಬ್ದ' ಎಂಬ ಶಬ್ದವಿಲ್ಲ; ಬಹುಶಃ ಶಪ್ತವೇ ಶಬ್ದ)

ಶಾಪ ಫಲಕಾರಿಯಾಗಬೇಕಾದರೆ ಅದನ್ನು ಗಟ್ಟಿಯಾಗಿ ಉಚ್ಚರಿಸಬೇಕು; ಮತ್ತು ಅದು ಶಾಪಕ್ಕೆ ಗುರಿಯಾಗತಕ್ಕವನಿಗೆ ಕೇಳಿಸುವಂತಿರಬೇಕು. ಬೇರೆ ಆಗಂತುಕ ಕಾರಣಗಳಿಂದ ಅವನಿಗೆ ಅದು ಕೇಳಿಸದಿದ್ದರೂ ಶಾಪ ಸಫಲವಾಗಬಹುದು ಅಷ್ಟೆ. ಪರೀಕ್ಷಿತನಿಗೆ ಶೃಂಗಿ ಮುನಿ ಅವನ ಪರೋಕ್ಷದಲ್ಲಿ ಶಾಪ ಕೊಟ್ಟರೂ ಅರಸನಿಗೆ ಅದರ ಸುದ್ದಿಯನ್ನು ಹೇಳಿ ಕಳಿಸುತ್ತಾನೆ. ಪ್ರತ್ಯಕ್ಷದಲ್ಲಿ "ತೆಗೆದುಕೋ ಶಾಪ" ಎನ್ನುತ್ತ ಕಮಂಡಲದಿಂದ ನೀರೆರಚಿ ಋಷಿಮುನಿಗಳು ಗಟ್ಟಿಯಾಗಿ ಶಾಪ ಕೊಡುತ್ತಿದ್ದರು. ಈ ದೃಷ್ಟಿಯಿಂದ ಮನಸ್ಸಿನಲ್ಲಿಯೇ ಶಪಿಸುವುದು ನಿರರ್ಥಕ ಮಾತಾಗುತ್ತದೆ.

ಶಾಪಕ್ಕೆ ಸಮನಾದ ಇಂಗ್ಲೀಷ್ curse ಶಬ್ದದ ನಿರ್ವಚನ ಖಚಿತವಾಗಿಲ್ಲವಾದರೂ ಅದು ಫ್ರೆಂಚಿನ curoier = ಆಕ್ರೋಶ ಪೂರ್ವಕ ಕೇಡು ನುಡಿಯುವುದು ಎಂಬ ಪದದಿಂದ ಬಂದಿದೆಯೆಂದು ತರ್ಕಿಸಲಾಗಿದೆ. ಬಹುಶಃ ಇದು ಸಂಸ್ಕೃತದ ಕ್ರೋಶ (= ಕೂಗು) ಶಬ್ದಕ್ಕೆ ಸಂವಾದಿಯಾಗಿರಬಹುದು. ಪ್ರಾಚೀನ ಬಬಿಲೋನಿಯನ್-ಸೀರಿಯನ್‌ಗಳಲ್ಲಿ ಮಮಿತ್ (mamit) ಎಂದರೆ ಶಾಪ, ಮಮಿತು ಎಂದರೆ ಶಾಪಗ್ರಸ್ತ ಅಥವಾ ಪಾಪಿ; ಮಮ್ಮು ಎಂದರೆ ಗಟ್ಟಿಯಾದ ಧ್ವನಿ ಅಥವಾ ಉಚ್ಚರಿತ ಶಬ್ದ. ಇಸ್ಲಾಮಿನಲ್ಲಿಯೂ ಶಾಪ, ವರ ಕೇಳಿಸುವಂತಿರಬೇಕು. ಸಾಮೋವಾ ದ್ವೀಪದ ಆದಿವಾಸಿಗಳು ಶಾಪವನ್ನು ಆಕ್ರೋಶ ಪೂರ್ವಕವಾಗಿಯೇ ಕೊಡುತ್ತಿದ್ದರು.

ಶಾಪದ್ದೇ ಒಂದು ರೂಪ ಶಪಥ; ಶಪಥ ಎಂದರೆ ಒಂದು ಘೋರ ಪ್ರತಿಜ್ಞೆ: ಇದನ್ನು ಯಾವುದಾದರೂ ದೇವತೆಯ ಸಾಕ್ಷಿಯಾಗಿ ಮಾಡುತ್ತಿದ್ದರು. "ವರುಣೇತಿ ಶಪ್" ವರುಣನ ಹೆಸರಲ್ಲಿ ಶಪಥ ತೊಟ್ಟ ಎನ್ನುವ ಮಾತು ಋಗ್ವೇದದಲ್ಲಿದೆ. ವರುಣ ಸತ್ಯದ (ಋತಸ್ಯ) ದೇವತೆಯೆನಿಸಿದ್ದ. "ಚತುರಂತ ಕ್ಷಿತಿಕಾಂತೆ ಕೇಳ್..." ಎಂದು ಮುಂತಾಗಿ ಪಂಚಭೂತ ಸಾಕ್ಷಿಯಾಗಿ ಭೀಮನು ಕೌರವರನ್ನು ಕೊಲ್ಲುವ ಶಪಥ ತೊಡುತ್ತಾನೆ. ದೇವತಾ ಸಾಕ್ಷಿಯಾಗಿ ನ್ಯಾಯಾಲಯದಲ್ಲಿ ಶಪಥ ಮಾಡುವುದು ಇಂದಿಗೂ ಉಳಿದುಬಂದಿದೆ. ಇವೆಲ್ಲವೂ ಪುರಾತನ

ಮಾನವನು ಉಚ್ಚರಿಸಿದ ಶಬ್ದದ ಮಹಿಮೆಯಲ್ಲಿಟ್ಟ ಭಯಭರಿತ ವಿಶ್ವಾಸದ ದ್ಯೋತಕವಾಗಿದೆ. ವೇದದಲ್ಲಿಯೇ **ಸುಳ್ಳು ಶಪಥ** (ಅನೃತಂ ಶಪ್)ದ **ಸುದ್ದಿ** ಬರುತ್ತದೆಂಬ **ಮಾತು** ಬೇರೆ. **ಉಚ್ಚರಿಸಿದ** ಶಬ್ದದ **ಮೇಲೆ ನಂಬಿಕೆ ಸಡಿಲಾದದ್ದರಿಂದಲೇ** "ಇದಂ ಬ್ರಾಹ್ಮಂ, ಇದಂ ಕ್ಷಾತ್ರಂ ಶಾಪಾದಪಿ ಶರಾದಪಿ" (ಇದು ಬ್ರಾಹ್ಮ ಇದು ಕ್ಷಾತ್ರ, ಶಾಪವೋ ಸೈ, ಶರವೋ ಸೈ) ಎಂಬ **ಮಾತು ಮಹಾಭಾರತದಲ್ಲಿ** ಬರುತ್ತದೆ.

**ಶಾಪಕ್ಕೆ ಪ್ರತಿಯಾದ ವರ ಎಂಬುದು ವೃಧಾತುವಿನಿಂದ** ಬಂದದ್ದು. **ವೃಧಾತುವಿನ** ಒಂದರ್ಥ ಆರಿಸಿಕೊಳ್ಳುವುದು; ಆದ್ದರಿಂದ ಇನ್ನೊಂದಕ್ಕಿಂತ ಮೇಲಾದುದು **ವರ;** ಬಹಳ ಗಂಡುಗಳಲ್ಲಿ **ಇವನೇ** ಮೇಲು ಎಂದು ಆರಿಸಿಕೊಂಡವನು **ವರ;** ಹಾಗೆಯೇ **ಇವನೇ ಬೇಕು** ಎಂದು ಆರಿಸಿಕೊಂಡವನೂ **ವರ; ಇದೇ ಬೇಕು** ಎಂದು **ದೇವತೆಯಿಂದಲೋ** ಮಹಾಮಹಿಮರಿಂದಲೋ ಬೇಡಿಕೊಂಡದ್ದೂ **ವರ.** ಈ **ವರ** ಕೂಡ ಗಟ್ಟಿಯಾಗಿ ನುಡಿಸಿಕೊಳ್ಳತಕ್ಕದ್ದೆ. **ಹೊರತು** ಮೌನವಾಗಿ ಮನಸ್ಸಿನಲ್ಲೇ ವರ ಕೊಡುವುದು **ಸಾಧ್ಯವಿಲ್ಲ. ಆಶೀರ್ವಾದ** ಕೂಡ **ವರ** ಆಗುತ್ತದೆ. ಆಶಿರ್ವಾದ ಕೂಡ ಗಟ್ಟಿಯಾಗಿ ಉಚ್ಚರಿಸಬೇಕಾದದ್ದೆ. ಮತ್ತೆ ಇಲ್ಲಿಯೂ (ಆಡಿದ) **"ಮಾತು ಜ್ಯೋತಿರ್ಲಿಂಗ."**

**ಶಾಪ** ವರಗಳ ಹಾಗೆಯೆ ತುಂಬಾ ಪ್ರಾಚೀನವಾದ ಕಲ್ಪನೆ **ಪುಣ್ಯ- ಪಾಪಗಳದ್ದು. ಪುಣ್ಯ** ಎಂಬ **ಧಾರ್ಮಿಕ** ಭಾವನೆ ಎಲ್ಲ ಸಂಸ್ಕೃತಿಗಳಲ್ಲಿ ಇಲ್ಲ. (ಒಳ್ಳೆಯದು ಮಾಡುವುದು ಮಾನವ ಕರ್ತವ್ಯವಾದ್ದರಿಂದ ಅದನ್ನು ಮಾಡದಿರುವುದು **ಪಾಪ** ಹೊರತು ಮಾಡಿದ್ದಕ್ಕೆ **ಪುಣ್ಯ** ಎಂಬ ಜಮಾ ಲೆಕ್ಕ ಇಲ್ಲವೆಂದು ಕ್ರೈಸ್ತರು ಹೇಳುತ್ತಾರೆ.) ನಮ್ಮ **ಪುಣ್ಯದಲ್ಲಿ** ಕೂಡ ಮೂಲತಃ ಈ ಧಾರ್ಮಿಕ ಅರ್ಥಚ್ಛಾಯೆ ಇಲ್ಲವೆಂದು ತೋರುತ್ತದೆ. ಸಂಸ್ಕೃತ ವ್ಯಾಕರಣರು **ಪುಣ್ಯ** ಶಬ್ದವನ್ನು **ಪುಣ್** ಎಂಬ ಧಾತುವಿಗೆ ತಗಲಿಸುತ್ತಾರಾದರೂ ಅದು ನಿಜಕ್ಕೂ **ಪೂ** (ಶುದ್ಧಪಾಗಿಸು, ಸೋಸು) ಎಂಬ ಧಾತುವಿನಿಂದಲೇ ಹುಟ್ಟಿದಂತೆ ಅನಿಸುತ್ತದೆ. "ಸಕ್ತುಮಿವ ತಿತಉನಾ **ಪುನಂತೋ**" (ಹಿಟ್ಟನ್ನು ಜಾಳಿಗೆಯಲ್ಲಿ **ಸೋಸಿದಂತೆ** ಮನಸ್ಸಿನಿಂದ ಸೋಸಬೇಕು) ಎಂಬ ಮಾತು ವೇದದಲ್ಲಿ ಬರುತ್ತದೆ. ಹೀಗೆ **ಪುಣ್ಯ** ಎಂದರೆ **ಶುದ್ಧ** ಎಂಬುದೆ ಮೂಲಾರ್ಥ. **ಸುಗಂಧ** ಎಂಬರ್ಥದಲ್ಲಿ **ಪುಣ್ಯಗಂಧಾ** ಎಂಬ ಮಾತು ಋಗ್ವೇದದಲ್ಲಿದೆ. ಶುದ್ಧವಾದದ್ದು ಇಹಕ್ಕೂ ಪರಕ್ಕೂ ಒಳ್ಳೆ ಪರಿಣಾಮ ಮಾಡುವುದರಿಂದ **ಪುಣ್ಯ** ಶಬ್ದವು **ಭಾವಿ** ಹಿತಕ್ಕಾಗಿ ಕೂಡಿಹಾಕಲು ಸಾಧ್ಯವುಳ್ಳ **ಒಳಿತು** ಎಂಬರ್ಥಕ್ಕೆ **ಚಾಚಿತು.** ಈ ಅರ್ಥಕ್ಕೆ **ಪುಣ್ಯ** ಶಬ್ದ ತಿರುಗುವುದಕ್ಕೆ ದ್ರಾವಿಡದ **ಪೂಣ್** (= ಪ್ರಯತ್ನಿಸು, ಪ್ರತಿಜ್ಞೆ ಮಾಡು) ಧಾತುವಿನ ಪ್ರಭಾವ ಸೇರಿರಲೂಬಹುದು. ಯಾಕೆಂದರೆ **ಪುಣ್ಯ** ಎಂದು ಈಗ ಭಾವಿಸಲ್ಪಡುವುದರಲ್ಲಿ **ಯತ್ನ** ಅಡಕವಾಗಿದೆ. ಋಗ್ವೇದದಲ್ಲಿಯೇ ಕಾಣಿಸುವ **ಪುಣ್ಯ** ಒಳಿತು, ಪವಿತ್ರ, ಮಂಗಲಕರ, ಎಂಬಿತ್ಯಾದಿ ಅರ್ಥಗಳಲ್ಲಿ ವ್ಯವಹೃತವಾಗಿದೆ.

**ಪಾಪವೂ** ಹಾಗೆಯೆ. ಧಾರ್ಮಿಕತೆ ಅದರಲ್ಲಿ ಸೇರಿರಲಿಲ್ಲ. ಋಗ್ವೇದದಲ್ಲಿ ಇದು ದುಷ್ಟ, ದುಷ್ಕರ್ಮ, ಅಮಂಗಲ ಮೊದಲಾದ ಅರ್ಥಗಳಲ್ಲಿ ಕಾಣಿಸುತ್ತದೆ. ಪ್ರಾಥಮಿಕವಾಗಿ ಅದು ಕೇಡು, ಕೇಡಿಗ ಎಂಬ ಅಭಿಪ್ರಾಯವನ್ನು ತಾನೇ ವ್ಯಂಜಿಸುತ್ತವೆ. ಇಂಗ್ಲೀಷಿನ sin (ಸಿನ್) ಎಂಬುದೂ ಹಳೇ ಇಂಗ್ಲೀಷು, ಹಳೇ ಸ್ಯಾಕ್ಸನ್, ಡಚ್, ಲ್ಯಾಟಿನ್ ಮೊದಲಾದ ಭಾಷೆಗಳಲ್ಲಿ ಅದರ ಬಾಂಧವ ಶಬ್ದಗಳೂ ಅಪರಾಧ, ಅನ್ಯಾಯ, ದುಷ್ಕರ್ಮ ಮೊದಲಾದ ಅರ್ಥಗಳಲ್ಲಿ ಪ್ರಯುಕ್ತವಾಗುತ್ತಿದ್ದವು. ಅರಬ್ಬಿ **ಗುನಾಹ** ಕೂಡ **ಅಪರಾಧ** ಎಂಬರ್ಥದೊಡನೆ **ಪಾಪ** ಎಂಬರ್ಥವನ್ನು ಕೊಡುತ್ತದೆ. ಮನುಷ್ಯನ ಅನುಚಿತ, ಕ್ರೂರ ಕರ್ಮಗಳಿಗೆ ಹೊಂದಿದಂತೆ ಇದ್ದ ಈ ಪದಗಳು, ಮುಂದೆ ಧಾರ್ಮಿಕ ವಿಧಿ ನಿಷೇಧಗಳನ್ನು ಮೀರುವ ಮೂಲಕ ಮಾಡುವ ದೈವ-ಧರ್ಮ ದ್ರೋಹಗಳಿಂದ ಮುಂದೆ ಇಹ ಪರಗಳಲ್ಲಿ ದುಷ್ಫಲಗಳನ್ನು ಕೂಡುವ ಸಂಚಿತ ಕರ್ಮಗಳಿಗೇ ಮುಖ್ಯವಾಗಿ ಅನ್ವಯಿಸುವಂತೆ ಬೆಳೆದವು.

**—ಪಾವೆಂ.**

# ರೆಕ್ಕೆ ಅವರೆಗುಂಟು ಒಳ್ಳೆಯ ಕಾಲ

ಶ್ರೀನಾಥ ದೀಕ್ಷಿತ

ವಿಶ್ವವ್ಯಾಪಿಯಾದ ಆಹಾರ ಸಮಸ್ಯೆಯನ್ನು ಕೆಲ ಮಟ್ಟಿಗೆ ಪರಿಹರಿಸಲು ಹಾಗೂ ಪೌಷ್ಟಿಕಾಂಶದ ಕೊರತೆಯನ್ನು ನೀಗಲು ಬೇಳೆ ಕಾಳುಗಳು ಪರಿಣಾಮಕರವಾದ ಪಾತ್ರವಹಿಸುತ್ತವೆ. ಆದರೆ ಜನಸಂಖ್ಯೆಯು ಒತ್ತಡದಿಂದ ಬೇಳೆಕಾಳು ಬೆಳೆಯುವ ಭೂಮಿಯ ವಿಸ್ತಾರ ಹೆಚ್ಚಿಸಲು ಸದ್ಯಕ್ಕೆ ಅಸಾಧ್ಯ. ಇಂತಹ ಪರಿಸ್ಥಿತಿಯಲ್ಲಿ ಅವಕ್ಕೆ ಸರಿಸಮನಾದ ಆಹಾರಮೌಲ್ಯವನ್ನು ಹೊಂದಿರುವ ಇತರ ಬೇಳೆಗಳನ್ನು ಬೆಳಕಿಗೆ ತಂದು ನಮ್ಮ ಆಹಾರ ಪದ್ಧತಿಯಲ್ಲಿ ಒಗ್ಗೂಡಿಸಿಕೊಳ್ಳುವುದು ಅನಿವಾರ್ಯ.

ಬೇಳೆಕಾಳುಗಳ ಜಾತಿಗೆ ಸೇರಿದ ರೆಕ್ಕೆ ಅವರೆಗೆ ಈ ದಿಶೆಯಲ್ಲಿ ಉಜ್ವಲ ಭವಿಷ್ಯವಿರುವುದಾಗಿ ಕಂಡುಬಂದಿದೆ. Winged bean ಎಂದು ಕರೆಯಲಾಗುವ ಈ ಬೇಳೆ ಬಳ್ಳಿ ಜಾತಿಯದು. ಇದನ್ನು ಕೆಲವೆಡೆ "ಕರಗಸದ ಅವರೆ" ಎಂದೂ ಕರೆಯುವದುಂಟು. ಹಿಂದಿಯಲ್ಲಿ "ಚೌಧಾರಿ ಫಲಿ" ಎನ್ನುತ್ತಾರೆ. ಇದು ಕಲಿಯುಗದ ಕಲ್ಪಲತೆ ಎಂದರೆ ಉತ್ಪ್ರೇಕ್ಷೆಯಿಲ್ಲ. ಏಕೆಂದರೆ ಇದರ ಕಾಂಡವನ್ನು ಹೊರತುಪಡಿಸಿ ಬಳ್ಳಿಯ ಇತರ ಭಾಗಗಳಾದ ಎಳೆಯ ಚಿಗುರು, ಹೂವುಗಳು, ಕಾಯಿಗಳು ಹಾಗೂ ಗಡ್ಡೆಗಳು ಎಲ್ಲವೂ ಅಧಿಕ ಸಾರಜನಕವನ್ನು (Protien) ಹೊಂದಿದ್ದು ತಿನ್ನಲೂ ರುಚಿಕಟ್ಟಾಗಿರುತ್ತದೆ. ಇಷ್ಟೆಲ್ಲ ರೀತಿಯಿಂದಲೂ ಉಪಯುಕ್ತವಾದ ಈ ಬಳ್ಳಿ ಪ್ರಚಾರದ ಕೊರತೆಯಿಂದ ಹೆಚ್ಚಾಗಿ ಉಪಯೋಗಿಸಲ್ಪಡುತ್ತಿಲ್ಲ. ಇತರ ದೇಶಗಳಾದ ನ್ಯೂ ಗಿನಿ, ಬರ್ಮಾ, ಫಿಲಿಪೀನ್ಸ್‌ಗಳಲ್ಲಿ ಇದನ್ನು ತರಕಾರಿ ಬೇಳೆ ಹಾಗೂ ಬಹು ವಾರ್ಷಿಕ ಬೇಳೆ ಎಂದೂ ಪರಿಗಣಿಸುತ್ತಾರೆ.

ರೆಕ್ಕೆ ಅವರೆಯ ಬಹೂಪಯೋಗಿತ್ವ ಹಾಗೂ ಅದರ ಪ್ರತಿಯೊಂದು ಭಾಗದಲ್ಲಿರುವ ಅಧಿಕ ಪೌಷ್ಟಿಕಾಂಶವು ಆಹಾರ ಸಮಸ್ಯೆಯು ಈ ದಿನಗಳಲ್ಲಿ ಬಹುಮಟ್ಟಿಗೆ ಪೌಷ್ಟಿಕಾಂಶಗಳ ಕೊರತೆಯನ್ನು ನೀಗಬಲ್ಲದು ಎಂದು ಹಲವು ಪ್ರಯೋಗಗಳಲ್ಲಿ ಕಂಡುಬಂದಿದೆ. ಪ್ರತಿವರ್ಷ ಪ್ರಪಂಚದಲ್ಲಿ ನೂರು ಕೋಟಿ ಮಕ್ಕಳು ಪೌಷ್ಟಿಕಾಂಶದ ಕೊರತೆಯಿಂದ ಅಸು ನೀಗುತ್ತವೆ. ಸಾವಿನ ಸಂಖ್ಯೆ ಹೆಚ್ಚಾಗಿರುವ ಉಷ್ಣವಲಯದ ದೇಶಗಳಲ್ಲಿ ತುಂಬಾ ಚೆನ್ನಾಗಿ ಬೆಳೆಯುವ ರೆಕ್ಕೆ ಅವರೆ ಈ ಭಾಗದಲ್ಲಿ ಬೆಳೆಯುವ ಬೇರೆ ಯಾವುದೇ ಬೇಳೆ ಕಾಳುಗಳಿಗಿಂತ ಹೆಚ್ಚಿನ ಸಸಾರಜನಕವನ್ನು ಹೊಂದಿದ್ದ ಈ ವಲಯದ ಪೌಷ್ಟಿಕಾಂಶದ ಕೊರತೆಯನ್ನು ನೀಗುವುದರಲ್ಲಿ ಬಹುಮಟ್ಟಿಗೆ ಯಶಸ್ವಿಯಾಗುವುದಾಗಿ ಕಂಡುಬಂದಿದೆ.

೩.೪ ಮೀಟರು ಎತ್ತರ ಬೆಳೆಯುವ ಈ ಬಳ್ಳಿ ೩-೪ ವರ್ಷಗಳ ವರೆಗೆ ಕಾಯಿ ಬಿಡುತ್ತದೆ. ನೀಲಿ ಅಥವಾ ನೀಲಿ ಮಿಶ್ರಿತ ಹಳದಿ ಹೂವುಗಳಿರುವ ಈ ಬಳ್ಳಿಯಲ್ಲಿ ನಾಲ್ಕು ಮೂಲೆಗಳಿರುವ ಆಯತಾಕಾರದ ಕಾಯಿಗಳು ಬಿಡುತ್ತವೆ. ನಾಲ್ಕು ಮೂಲೆಗಳಲ್ಲಿ ಗರಗಸದಂತೆ ಇರುವ ರೆಕ್ಕೆಗಳು ಇರುತ್ತವೆ. ೫ ರಿಂದ ೨೦ ಬೀಜಗಳಿರುವ ಈ ಕಾಯಿಗಳ ಉದ್ದ ಸುಮಾರು ೬ ರಿಂದ ೨೦ ಸೆಂಟಿ ಮೀಟರುಗಳಷ್ಟು. ಈ ಕಾಯಿಗಳ ಒಳಗೆ ದುಂಡನೆಯ ಹೊಳೆಯುವ ಸುಮಾರು ೦.೦೪ ರಿಂದ ೦.೬೪ ಗ್ರಾಮ್ ತೂಕವಿರುವ ಬೀಜಗಳಿರುತ್ತವೆ.




೧. ಬಳ್ಳಿ. ೨ ಕಾಯಿ. ೩ ಗಡ್ಡೆ. ೪. ಹೂವುಗಳು ೫. ಬೀಜಗಳು

ಚಿತ್ರಗಳು : ಅಶೋಕ ಬೇವಿನಗಿಡದ

**ಕಾಯಿಗಳು:** ರೆಕ್ಕೆ ಅವರೆಯ ಉಪಯೋಗದಲ್ಲಿ ಕಾಯಿಗಳಿಗೇ ಹೆಚ್ಚು ಮಹತ್ವ. ಅತಿ ಸುಲಭವಾಗಿ ಆಹಾರದಲ್ಲಿ ಅಳವಡಿಸಿಕೊಳ್ಳಬಹುದಾದ ಭಾಗವೆಂದರೆ ಕಾಯಿಗಳೇ. ಎಳೆಯ ಕಾಯಿಗಳನ್ನು ಹಸಿಯಾಗಿಯೇ ಉಪಯೋಗಿಸಬಹುದು. ಅವುಗಳನ್ನು ತೆಳ್ಳನೆಯ ಹಾಳೆಗಳಂತೆ ಕತ್ತರಿಸಿ ಸೂಪ್‌ನಲ್ಲಿ, ಸಾರಿನಲ್ಲಿ ಅಥವಾ ಸಲಾಡ್‌ನಂತೆ ಉಪಯೋಗಿಸಬಹುದು. ಸಣ್ಣಗೆ ಹೆಚ್ಚಿದ ಕಾಯಿಗಳನ್ನು ಹುರಿದು ಅಥವಾ ಕುದಿಸಿ ರುಚಿಕರವಾದ ಪಲ್ಯ ತಯಾರಿಸಬಹುದು. ರುಚಿಯಲ್ಲಿ ಬೀನ್ಸಿನಂತೆಯೇ ಇರುತ್ತದೆ. ಅರ್ಧ ಬಲಿತ ಬೀಜಗಳನ್ನು ಕಾಯಿಯಿಂದ ಬೇರ್ಪಡಿಸಿ ಹಸಿರು ಬಟಾಣಿಯಂತೆ ಬೇಯಿಸಿ ಉಪಯೋಗಿಸಬಹುದು. ಪ್ರತಿ ನೂರು ಗ್ರಾಮ್ ಕಾಯಿಯಲ್ಲಿ ೨.೪ ಗ್ರಾಮಿನಷ್ಟು ಪ್ರೋಟಿನ್ ಇರುತ್ತದೆ.

**ಬೀಜಗಳು:** ಸಂಪೂರ್ಣ ಬಲಿತ ಕಾಯಿಗಳು ರೆಕ್ಕೆ ಅವರೆಯ ಅತಿ ಪೌಷ್ಟಿಕ ಭಾಗ. ಇವುಗಳಲ್ಲಿ ಸೇಕಡಾ ೪೦ ರಿಂದ ೪೨ರಷ್ಟು ಪ್ರೋಟೀನ್ ಅಂಶವಿರುತ್ತದೆ. ಇದು ಅತಿ ಪ್ರೋಟಿನ್ [೪೩.೨%] ಹೊಂದಿರುವ ಸೋಯಾಬೀನ್ಸಿಗೆ ಹೆಚ್ಚು ಕಡಿಮೆ ಸರಿಸಮಾನ. ಇದನ್ನು ಇದೇ ಕಾರಣಕ್ಕಾಗಿ ಉಷ್ಣವಲಯದ ಸೋಯಾಬೀನ್ ಎಂದೂ ಕರೆಯುವದುಂಟು. ಸೋಯಾಬೀನಿನಲ್ಲಿರುವ ಕೆಲವು ಅಪೋಷಕ ಅಂಶಗಳು ರೆಕ್ಕೆ ಅವರೆಯಲ್ಲಿ ಅತೀ ಕಡಿಮೆ ಪ್ರಮಾಣದಲ್ಲಿರುವದು. ಆದ್ದರಿಂದ ಹಸಿಯಾಗಿಯೂ ತರಕಾರಿಯಂತೆ ಬಳಸಬಹುದು. [ಸೋಯಾಬೀನನ್ನು ಹೀಗೆ ಬಳಸಲಾಗುವದಿಲ್ಲ.] ಬೀಜಗಳನ್ನು ಒಂದು ರಾತ್ರಿ ನೀರಿನಲ್ಲಿ ನೆನೆಸಿ ಮರುದಿನ ಬೇಯಿಸಿದರೆ ಬೇಯಿಸಲೂ ಅನುಕೂಲ ಹಾಗೂ ತಿನ್ನಲೂ ರುಚಿಕರವಾಗಿರುತ್ತದೆ. ಇದರ ಬೀಜಗಳಿಂದ ಸೋಯಾಬೀನಿನಂತೆ ಖಾದ್ಯತೈಲವನ್ನೂ ತೆಗೆಯಬಹುದು.

**ಗಡ್ಡೆಗಳು:** ಇದರ ಗಡ್ಡೆಗಳನ್ನು ಬೇಯಿಸಿ ಗೆಣಸಿನಂತೆ ಉಪಯೋಗಿಸಬಹುದು. ಸುಮಾರು ೪೦ ನಿಮಿಷಗಳ ವರೆಗೆ ಕುದಿಸಿದ ನಂತರ ಕಂದು ಬಣ್ಣದ ಗಡ್ಡೆಯ ಸಿಪ್ಪೆ ಸುಲಭವಾಗಿ ಬೇರೆಯಾಗುತ್ತದೆ. ಒಳಗೆ ಬಿಳಿಯ ಬಣ್ಣದ ಮೆತ್ತನೆಯ ಭಾಗ ತಿನ್ನಲು ಗೆಣಸಿನಂತೆಯೇ ರುಚಿಕರವಾಗಿರುತ್ತದೆ. ಗಡ್ಡೆಗಳಲ್ಲಿಯೂ ಸೇಕಡಾ ೮ ರಿಂದ ೩೦ರಷ್ಟು ಪ್ರೋಟಿನ್ ಇದೆ.

**ಎಲೆಗಳು ಮತ್ತು ಚಿಗುರು:** ರೆಕ್ಕೆ ಅವರೆಯ ಎಳೆಯ ಚಿಗುರೆಲೆಗಳನ್ನು ಹಸಿಯಾಗಿ ಅಥವಾ ಬೇಯಿಸಿ ಸೊಪ್ಪಿನ ತರಕಾರಿಯಂತೆ ಉಪಯೋಗಿಸಬಹುದು. ಸಾಮಾನ್ಯವಾಗಿ ಚಿಗುರಿನ ಮೇಲ್ಭಾಗದ ಮೂರು ಎಲೆಗಳನ್ನು ಮಾತ್ರ ಉಪಯೋಗಿಸುತ್ತಾರೆ. ಇವರ ಸೊಪ್ಪಿನಲ್ಲಿ ಹೆಚ್ಚಿನ ಲವಣಾಂಶ ಹಾಗೂ 'ಅ' ಅನ್ನಾಂಗ ಇರುವುದರಿಂದ ಚಿಕ್ಕಮಕ್ಕಳಿಗೆ ಉತ್ತಮ ಆಹಾರವಾಗಿದೆ. ಇದರಲ್ಲಿರುವ ಅ ಅನ್ನಾಂಗದ ಅಂಶ ಉಷ್ಣವಲಯದ ಉಳಿದ ಎಲ್ಲ ಸೊಪ್ಪಿನ ತರಕಾರಿಗಳಿಗಿಂತಲೂ ಅಧಿಕವಾಗಿರುತ್ತದೆ ಎಂದು ಪ್ರಯೋಗಗಳಿಂದ ಕಂಡು ಬಂದಿದೆ; ಸೊಪ್ಪನ್ನು ಸರಿಯಾಗಿ ಬೇಯಿಸದಿದ್ದರೆ ಹಾಗೂ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸಿದರೆ ಗ್ಯಾಸ್ ತೊಂದರೆ ಉಂಟಾಗುತ್ತದೆ ಹಾಗೂ ಒಂದು ರೀತಿಯ ಮಬ್ಬು ಬಂದಂತಾಗುತ್ತದೆ. ಆದ್ದರಿಂದ ಸರಿಯಾಗಿ ಬೇಯಿಸಿದ ಸೊಪ್ಪನ್ನು ಅಲ್ಪ ಪ್ರಮಾಣದಲ್ಲಿ ಮಕ್ಕಳಿಗೆ ಕೊಡುವುದು ಉತ್ತಮ.

**ಹೂವುಗಳು :** ಹೂವುಗಳಲ್ಲಿ ಮಧು ಶೇಖರಗೊಂಡಿರುವದರಿಂದ ಸಿಹಿಯಾಗಿರುತ್ತದೆ. ಇವುಗಳನ್ನು ಬೇಯಿಸಿ ಅಥವಾ ಎಣ್ಣೆಯಲ್ಲಿ ಹುರಿದು ಉಪಯೋಗಿಸಬಹುದು. ಹೂವಿನಲ್ಲಿ ಕೂಡ ಹೆಚ್ಚಿನ ಪ್ರೋಟಿನ್ ಅಂಶ ಇರುತ್ತದೆ.

ಈ ರೀತಿಯಾಗಿ ಈ ಬಳ್ಳಿಯ ಪ್ರತಿಯೊಂದು ಭಾಗದಲ್ಲಿ ಹೆಚ್ಚಿನ ಪೌಷ್ಟಿಕಾಂಶವಿದ್ದು ರುಚಿಕರವಾಗಿರುವುದರಿಂದ ನಮ್ಮ ಆಹಾರದಲ್ಲಿ ಅಳವಡಿಸಿಕೊಳ್ಳಲು ಒಳ್ಳೆಯದು. ಪ್ರತಿಯೊಬ್ಬರೂ ತಮ್ಮ ಮನೆಯ ಹಿತ್ತಲಲ್ಲಿ ನಾಲ್ಕೈದು ಬೀಜಗಳನ್ನೂರಿ, ಬಳ್ಳಿಯನ್ನು ಬೆಳೆದು, ಅದರ ವಿವಿಧ ಭಾಗಗಳ ರುಚಿಯನ್ನು ಸವಿದಾಗಲೇ ರೆಕ್ಕೆ ಅವರೆಯ ಮಹತ್ವದ ಅರಿವಾಗುವದು.

# ವಿಜ್ಞಾನ v/s ಪರಂಪರೆ

೧

ನಿಮ್ಮ ಅಗಸ್ಟ ಸಂಚಿಕೆ ಅರ್ಥಗರ್ಭಿತವಾಗಿದೆ. ಅದರಲ್ಲಿ ಶ್ರೀ ಕಿರ್ಲೋಸ್ಕರ್ ಅವರ 'ವಿಜ್ಞಾನ v/s. ಪರಂಪರೆ' ನಮ್ಮನ್ನು ಯೋಚಿಸುವಂತೆ ಮಾಡುತ್ತದೆ. ಲೇಖನದ ಉತ್ತರಾರ್ಧವನ್ನು ನಾವು ತಾರ್ಕಿಕ ಆಧಾರಗಳ ಮೇಲೆ ಒಪ್ಪಬಹುದಾದರೂ ಪೂರ್ವಾರ್ಧದ ಬಗ್ಗೆ ಬಹಳಷ್ಟು ಸಂಶಯಗಳೇಳುತ್ತವೆ. ಲೇಖಕರು ಹೇಳುವಂತೆ ಪರಂಪರೆ ಯಾವುದೇ ಪ್ರಯೋಗಕ್ಕೊಳಪಟ್ಟು ಸಾಧಿಸಲು ಸಾಧ್ಯವಿಲ್ಲ ಹಾಗೂ ಹಿಂದಿನವರು ಪ್ರಕೃತಿಯ ಬಗ್ಗೆ ಜ್ಞಾನವಿಲ್ಲದೆ ದೇವರನ್ನು ಮೊರೆ ಹೊಕ್ಕರು ಎಂದು. ಇಲ್ಲಿ ನಾವು ಸಂಶಯ ವ್ಯಕ್ತಪಡಿಸುವ ಅಗತ್ಯ ಬರುತ್ತದೆ. ಉಳಿದ ಸಂಸ್ಕೃತಿಗಳನ್ನು ಒತ್ತಟ್ಟಿಗಿಟ್ಟು ನಮ್ಮ ಸಂಸ್ಕೃತಿಯ ಗಾಜಿನ ಮೂಲಕ ಈ ಲೇಖನವನ್ನು ವೀಕ್ಷಿಸಿದಾಗ ಕೆಳಗಿನ ವಿಷಯಗಳನ್ನು ತಿಳಿಯಬಹುದು: ೧) "ಮನುಷ್ಯ ಸಾವಿರಾರು...... ನಿಸರ್ಗಜ್ಞಾನ ಸಿಗಲಿಲ್ಲ........."

ಇಲ್ಲಿ ನಾವು ನಮ್ಮ ಪರಂಪರೆಯನ್ನು ಮೂರು ವಿಭಾಗ ಮಾಡಬೇಕಾಗುತ್ತದೆ. (೧) ವೇದಕಾಲದ ಪರಂಪರೆ (೨) ಮಧ್ಯಕಾಲದ ಪರಂಪರೆ ಮತ್ತು (೩) ಆಧುನಿಕ ಪರಂಪರೆ. ಮೊದಲನೆಯ ಪರಂಪರೆ ನಿಜವಾಗಿ ಭಾರತೀಯ ವಿಜ್ಞಾನದ ಸುವರ್ಣ ಯುಗ. ಎರಡನೆಯದು ಸಂಸ್ಕೃತಿಯ ಅಳಿವು ಉಳಿವಿನ ಕಾಲ ಹಾಗೂ ಮೂರನೆಯದು ಎರಡನೆಯ ಕಾಲದ ವಿಕೃತಿ; ಆದರೆ ಮೊದಲನೆಯದರ ಛಾಯೆ ಇದೆ. ವೇದಕಾಲದ ಭಾರತೀಯರಿಗೆ ಬಹುಶಃ ಈಗಿನ ವಿಜ್ಞಾನಿಗಳಿಗಿಂತ ಹೆಚ್ಚಿನ ಜ್ಞಾನವಿತ್ತು. ವೇದಗಳಲ್ಲಿ ಇದರ ಬಗ್ಗೆ ಸಾಕಷ್ಟು ವಿವರಣೆ ಇದೆ. ಆದರೆ ಏಕೆ ಯಾರಿಗೂ ತಿಳಿದಿಲ್ಲ?

ಎರಡನೆಯ ಮಧ್ಯಕಾಲದಲ್ಲಿ ಉಳಿದ ಧರ್ಮಗಳ ಆಕ್ರಮಣಗಳಿಂದ ನಮ್ಮದನ್ನು ರಕ್ಷಿಸಿಕೊಳ್ಳಲು ನಮ್ಮವರು ಪುರಾಣಗಳ ಮೊರೆಹೋದರು. ಈಗಿನವರು–ವಿಶೇಷವಾಗಿ ಪಾಶ್ಚಾತ್ಯರು–ಪುರಾಣಗಳ ಆಧಾರಗಳ ಮೇಲೆ ವೇದಭಾಷ್ಯಗಳನ್ನು ಬರೆಯಲಾರಂಭಿಸಿದರು. ಆಗಲೇ ನಮ್ಮವರು ಇಂದ್ರ, ವರುಣ, ಅಗ್ನಿ ಇತ್ಯಾದಿ ವೇದೋಕ್ತ ಏಕ ದೇವನಾಮಗಳನ್ನು ಸಾಕಾರ ದೇವತೆಗಳೆಂದು ಪುರಾಣಗಳಿಂದ ತಲೆ ತುಂಬಿಸಿಕೊಂಡಿದ್ದು. ತೂಕಡಿಸುವವರನ್ನು ಹಾಸಿಗೆಗೆ ನೂಕಿದಂತಾಯಿತು. ನಮ್ಮ ನಿಜವಾದ ವೇದ ಸಂಸ್ಕೃತಿಯನ್ನು ನಾವು ಮರೆತಿದ್ದಾಗ ಈ ಪಾಶ್ಚಾತ್ಯ ತಪ್ಪು

ಭಾಷ್ಯ ಅವರನ್ನು ಗಾಢಾಂಧಕಾರಕ್ಕೆ ನೂಕಿದೆ. ಹೀಗೆ ನಾವು ದುರಂತಕ್ಕೊಳಗಾದೆವು. ಇಂದು ಯಜ್ಞ ಮಾಡುವವರು, ಪೂಜೆ ಮಾಡುವವರು, ಇನ್ನೆಷ್ಟೊ ಆಚಾರಗಳು ಕಂದಾಚಾರಗಳಾಗಿ ಉಳಿದುಬಂದುವು. ಸ್ವತಃ ವೇದಗಳು ಘೋಷಿಸುತ್ತವೆ:"ಸತ್ಯವಲ್ಲದವುಗಳನ್ನು ತಿರಸ್ಕರಿಸೋಣ" ಎಂದು.

೨) "ಸೂರ್ಯನು.........ಭೂಮಿ ಚಪ್ಪಟೆಯಾಗಿದೆ........' ಇತ್ಯಾದಿ

ಇದು ಕೂಡ ಪುರಾಣಗಳ ಈಸ್ಟ್‌ಮನ್ ಕಲರ್ ಕಲ್ಪನೆಯಿಂದ ಹುಟ್ಟಿದುದು. ವೇದಗಳು ಇದನ್ನು ಸ್ಪಷ್ಟವಾಗಿ ಅಲ್ಲಗಳೆಯುತ್ತವೆ ಮಾತ್ರವಲ್ಲ, ದುಂಡಾಗಿದೆ ಎಂದು ಹೇಳುತ್ತವೆ. ಆದರೆ ವೇದಗಳನ್ನು ತಿಳಿದ ಭಾರತೀಯರಿಗೆ ಇದರ ಅರಿವಿತ್ತು.

"ಆಯಂ ಗೌಃ, ಪುಶ್ನಿರ ಕ್ರಮೀದ ಸದನ್ಮಾತರಂ ಪುರಃ। ಪಿತರಂ ಚ ಪ್ರಯನ್ನತಃ॥

(ಯಜು ೧೧೧,೬)

ಭೂಮಿ ನೀರಿನ ಜೊತೆ ಸೂರ್ಯನ ಸುತ್ತ ತಿರುಗುತ್ತದೆ ಎಂದು ಇದರ ಅರ್ಥ (ದಯಾನಂದ ಸರಸ್ವತಿ–ಸತ್ಯಾರ್ಥ ಪ್ರಕಾಶ)

೩) "ವಿಜ್ಞಾನವು ಅಂತಾರಾಷ್ಟ್ರೀಯವಾಗಿದೆ... ಒಂದೇ ತಂತ್ರ........."ಇತ್ಯಾದಿ.

ಬಹುಶಃ ವಿಜ್ಞಾನದ ಸೂತ್ರ, ತಂತ್ರಗಳು ಒಂದೇ ಆಗಿರುವುದರಿಂದ ಫಲಿತಾಂಶಗಳು ಒಂದೇ ಬರಬಹುದು. ಹಾಗೆಂದು ಇದನ್ನು ನಿಜ ಜೀವನದಲ್ಲಿ ಉಪಯೋಗಿಸಿದಾಗ ಯೋಜಿತ ಫಲಿತಾಂಶ ಕೊಡುತ್ತದೆಂದು ಹೇಳಲಾಗುವುದಿಲ್ಲ. ಆಯಾ ಭಾಗದ ಭೌಗೋಲಿಕ, ಹವಾಮಾನ ಇತ್ಯಾದಿಗಳನ್ನು ಹೊಂದಿಕೊಂಡಿವೆ.ಉದಾಹರಣೆಗೆ ಜಪಾನ್ ಕೃಷಿ ಪದ್ಧತಿಯು ಹೆಚ್ಚು ಇಳುವರಿದಾಯಕವೆಂದು ಕಂಡುಬಂದಿತು. ನಮ್ಮ ದೇಶದಲ್ಲೂ ಇದರ ಅಳವಡಿಕೆ ಕಂಡುಬಂತು. ಆದರೆ ಇಂದು ಈ ಪದ್ಧತಿಯನ್ನು ಹೆಚ್ಚಿನವರು ಉಪಯೋಗಿಸುತ್ತಿಲ್ಲ. ಕಾರಣ ಸ್ಪಷ್ಟವಾಗಿದೆ: ಇದು ಅಲ್ಲಿನ ಭೂಮಿಯ ಹವಾಗುಣ, ಮಣ್ಣಿನ ಸತ್ವಕ್ಕೆ ಹೊಂದಿಕೊಳ್ಳುತ್ತದೆಯೇ ವಿನಾ ನಮ್ಮದಕ್ಕೆ ಹೊಂದಿಕೊಳ್ಳಲು ಕಷ್ಟವಾಗುತ್ತದೆ. ಇದರ ಅರ್ಥ ವಿಜ್ಞಾನ ತಪ್ಪೆಂದಲ್ಲ. ನಮ್ಮ ಭೌಗೋಳಿಕತೆಗೆ ಇದು ಹಿಡಿಸುವುದಿಲ್ಲ ಅಷ್ಟೆ. ಇದೇ ರೀತಿ ಪರಂಪರೆಯೂ ಸಾರ್ವಕಾಲಿಕವಾಗಿರಲು ಸಾಧ್ಯವಿಲ್ಲ. ಆಗಾಗಿನ ಪರಿಸರಕ್ಕೆ ಹೊಂದಿಕೊಂಡು ಬದಲಾವಣೆಗಳಾಗುತ್ತವೆ.

೪) "ಅಂದಾಜು ಉತ್ತರವನ್ನು............ ಅಸಾಧ್ಯವಲ್ಲ.........' ಇತ್ಯಾದಿ

ಪ್ರಯೋಗ ಫಲಿತಾಂಶಗಳನ್ನು ವರ್ತಮಾನ ಸತ್ಯವೆಂದು ಒಪ್ಪಬಹುದೇ ಹೊರತು ನಿತ್ಯ ಸತ್ಯವೆಂದಲ್ಲ. ಉದಾಹರಣೆಗೆ ಹೇಳುವದಾದರೆ ಹಿಂದೆ ಬಳಸುತ್ತಿದ್ದ ಕೀಟನಾಶಕಗಳು ಇಂದು ಫಲಕಾರಿಯಲ್ಲ ಎಂದು ಕೃಷಿಯ ಅನುಭವವುಳ್ಳವರು ಹೇಳಬಲ್ಲರು. ಆದರೆ ನಿಸರ್ಗ ಎಂದೂ ತನ್ನ ಪೂರ್ಣ ರಹಸ್ಯವನ್ನು ಬಿಟ್ಟುಕೊಡುವುದಿಲ್ಲ.

೫) "ಗುರುತ್ವಾಕರ್ಷಣ......"ಇತ್ಯಾದಿ

ಇದರ ಬಗ್ಗೆಯೂ ವೇದಗಳಲ್ಲಿ ಬಹಳ ಮಂತ್ರಗಳು ಬರುತ್ತವೆ. ನಾವಿಂದು ಈ ಜ್ಞಾನಕ್ಕಾಗಿ ಪಾಶ್ಚಾತ್ಯರತ್ತ ಮುಖಮಾಡುವುದು ನಮ್ಮ ದುರಂತ.

ಇಷ್ಟೆಲ್ಲಾ ಹೇಳಿದ ಮೇಲೆ ಕೆಳಗಿನ ಕೆಲವು ಮಾತುಗಳು ಅಗತ್ಯವೆಂದೆನಿಸುತ್ತವೆ- ಪರಂಪರೆ, ರೂಢಿ ಅಥವಾ ಸಂಪ್ರದಾಯಗಳು ಬರೀ ನಂಬಿಕೆಗಳಿಂದ ಬಂದುವಲ್ಲ. ಯಾವುದೋ ಒಂದು ಕಾಲದಲ್ಲಿ ಅದರ ಅನುಭವ ಇರುವವರು ಅದನ್ನು ಒಂದು ರೂಢಿಯಾಗಿ ಜಾರಿಗೆ ತಂದದ್ದು ಇಂದು ಪರಂಪರೆಯಾಗಿ ಉಳಿದು ಬಂದಿದೆ. ಉದಾಹರಣೆಗೆ ನೋಡಿ – ತುಲಸೀ ಪೂಜೆ, ಭ್ರೂಮಧ್ಯ ತಿಲಕ. ಕಿವಿಗೆ ತೂತು, ಸೊಂಟಕ್ಕೆ ದಾರ ಇತ್ಯಾದಿಗಳು ಪರಂಪರೆಯಾಗಿ ಉಳಿದು ಬಂದಿವೆ. ಇವುಗಳನ್ನು ಒಂದು ಕಾಲದಲ್ಲಿ ನಾವುಗಳು ಕಂದಾಚಾರವೆಂದು ತಿರಸ್ಕರಿಸಿದ್ದೇವೆ. ಅಶ್ವತ್ಥ ಪ್ರದಕ್ಷಿಣೆ, ಯಜ್ಞಯಾಗಾದಿಗಳು, (ವೇದೋಕ್ತ) ಷೋಡಶ ಕರ್ಮಗಳು ಇತ್ಯಾದಿಗಳು ಕೂಡ ಹೇಗೆ ಫಲದಾಯಕ ಎಂದು

ತಿಳಿಯುವ ಅಗತ್ಯವಿದೆ. ಆದರೆ ಪರಂಪರಾನುಗತ ರೂಢಿಗಳ ಬಗ್ಗೆ ಅಸಡ್ಡೆ ಇರಬಾರದು. ವಿಜ್ಞಾನವೆಂದರೆ "ವಸ್ತುಗಳ ಬಗೆಗಿನ ಒಳ್ಳೆಯ ಜ್ಞಾನ". ಪರಂಪರೆ ನಿಂತ ನೀರಲ್ಲ. ಒಳ್ಳೆಯ ವಿಷಯಗಳು ನಮ್ಮ ಪರಂಪರೆಯಲ್ಲಿ ಸೇರುತ್ತ ಹೋಗುತ್ತವೆ. ಇನ್ನು ಪರಂಪರೆ ವಿಕೃತಿಗಳು: ಎಲ್ಲಾ ಕ್ಷೇತ್ರಗಳಲ್ಲೂ ಸಾಮಾನ್ಯ. ವಿಜ್ಞಾನವೂ ಇಂದು ಸಾಕಷ್ಟು ದುರುಪಯೋಗವಾಗುತ್ತಿದೆ. ರೂಢಿಯ ದುರುಪಯೋಗದಿಂದ ಒಂದು ಕುಟುಂಬ ಹಿಂದುಳಿದೀತು. ವಿಜ್ಞಾನದ ದುರುಪಯೋಗ ಹೀಗೆಯೆ ಮುಂದುವರೆದರೆ ಪ್ರಪಂಚವೆ ನಾಶವಾದೀತು. ನಾವಿಂದು ನೈಜ ವೇದ ಪರಂಪರೆಯತ್ತ ಸಾಗುವ ಅವಶ್ಯಕತೆ ಹೆಚ್ಚಾಗಿದೆ.

ಒಟ್ಟಿನಲ್ಲಿ ಆ ಲೇಖನ ವಿಚಾರವನ್ನು ಪ್ರಚೋದಿಸುವಲ್ಲಿ ಯಶಸ್ವಿಯಾಗಿದೆ.

**ಪೆರ್ನಡಕ ಶ್ಯಾಮಭಟ್ಟ**

೨

ಕಳೆದ ತಿಂಗಳ 'ಕಸ್ತೂರಿ'ಯಲ್ಲಿ ಪ್ರಕಟವಾದ ಎಂ. ಎಸ್. ಕಿರ್ಲೋಸ್ಕರ ಅವರ ಲೇಖನವನ್ನೋದಿ ನನಗೆ ಹೊಳೆದ ಕೆಲವು ವಿಚಾರಗಳನ್ನು ಇಲ್ಲಿ ವ್ಯಕ್ತಪಡಿಸುತ್ತಲಿದ್ದೇನೆ.

ಶ್ರೀ ಕಿರ್ಲೋಸ್ಕರ ಅವರ ಲೇಖನವು ಒಬ್ಬ ಶಾಲಾ ವಿದ್ಯಾರ್ಥಿಯು ಬರೆದ ನಿಬಂಧದಂತಿದೆ. ಅದರಲ್ಲಿ ಆಳವಾದ ವಿಚಾರವಾಗಲೀ ಸುಸಂಬದ್ಧವಾದ ಪ್ರತಿಪಾದನೆಯಾಗಲೀ ಇಲ್ಲ. ಪ್ರಾಚೀನ ಕಾಲದಲ್ಲಿ ಪ್ರಯೋಗಸಾಧನಗಳಿಲ್ಲದಿದ್ದುದರಿಂದ ಮಾನವನು ಬರೀ ತರ್ಕದಿಂದಲೇ ತತ್ವಜ್ಞಾನವನ್ನೂ ದೇವರನ್ನೂ ಸೃಷ್ಟಿಸಿದನೆಂದು ಲೇಖಕರು ಹೇಳಿ, ಅದಕ್ಕಾಗಿ ತತ್ವಜ್ಞಾನ ಹಾಗೂ ದೇವರು ನಂಬುಗೆಗೆ ಅರ್ಹವಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಇಂದಿನ ವಿಜ್ಞಾನಿಗಳು ವಿಶ್ವದ ಉತ್ಪತ್ತಿಯ ಬಗ್ಗೆ ಜೀವದ ಉತ್ಪತ್ತಿಯ ಬಗ್ಗೆ ಪ್ರತಿಪಾದಿಸುವ ಸಿದ್ಧಾಂತಗಳೆಲ್ಲ ಬರೀ ಕಲ್ಪನಾ ಸೃಷ್ಟಿಗಳೇ ಆಗಿವೆ. ಉದಾಹರಣೆಗೆ ಮಹಾಸ್ಫೋಟವಾದ(Big Bang Theory)ವನ್ನೇ ನೋಡಬಹುದು. ಈ ವಿಶ್ವದ ಉತ್ಪತ್ತಿಯು ಮಹಾಸ್ಫೋಟದಿಂದ ಪ್ರಾರಂಭವಾಯಿತು ಎಂದು ಬಹಳಷ್ಟು ವಿಜ್ಞಾನಿಗಳ ಮತವಾಗಿದೆ. ಆದರೆ ಇದು ಪ್ರಯೋಗದಿಂದ ಸಿದ್ಧವಾದ ಸಂಗತಿಯಲ್ಲ. ನಮ್ಮ ಪುರಾಣಗಳಲ್ಲಿ ಬರುವ ವಿಶ್ವೋತ್ಪತ್ತಿಯ ವಿವರಣೆಯು ಇದಕ್ಕಿಂತಲೂ ಹೆಚ್ಚು ಸಮಂಜಸವಾಗಿದೆ.

ದೇವರ ಬಗ್ಗೆ ಹೇಳಬೇಕೆಂದರೆ ಇಂಥ ಅದ್ಭುತವಾದ ಸುವ್ಯವಸ್ಥಿತವಾದ ನಿಯಮಬದ್ಧವಾದ ವಿಶ್ವವನ್ನು ಒಂದು ಜಡ ಪ್ರಕೃತಿ ನಿರ್ಮಾಣ ಮಾಡಿದೆಯೆಂಬುದು ತೀರ ಅವೈಜ್ಞಾನಿಕವಾದ ವಿಚಾರವಾಗಿದೆ. ಈ ವಿಶ್ವದ ಹಿಂದೆ ಒಬ್ಬ ವಿಚಾರವಂತನ ಕೈವಾಡವಿದೆಯೆಂಬುದಕ್ಕೆ ಈ ಸೃಷ್ಟಿಯಲ್ಲಿ ಅನೇಕ ಸಂಗತಿಗಳು ಆಧಾರವಾಗಿವೆ. ಹೀಗಿದ್ದು ಇಂದು ವಿಜ್ಞಾನಿಗಳು ದೇವರನ್ನು ಬರೀ ಒಂದು ಕಲ್ಪನೆಯೆಂದು ಸಾಧಿಸುತ್ತಿರುವದು ವಿಜ್ಞಾನವು ನಿಜವಾದ ಸತ್ಯಶೋಧನೆಯಲ್ಲಿ ತೊಡಗಿಲ್ಲವೆಂಬುದನ್ನು ಸೂಚಿಸುತ್ತದೆ. ಆದುದರಿಂದ ವಿಜ್ಞಾನವು ನಂಬುಗೆಗೆ ಅರ್ಹವಾಗುವುದಿಲ್ಲ.

ವಿಜ್ಞಾನವು ಸಾಪೇಕ್ಷವಾದ ಸತ್ಯವನ್ನು ಪ್ರತಿಪಾದಿಸುತ್ತದೆಯೆಂದು ಲೇಖಕರು ಹೇಳುತ್ತಾರೆ. ಅಂದರೆ ವಿಜ್ಞಾನದಲ್ಲಿ ಇಂದು ಸತ್ಯವೆನಿಸಿದ್ದು ನಾಳೆ ಅಸತ್ಯವೆಂದು ಸಿದ್ಧವಾಗುತ್ತದೆ. ಈಗ ಎರಡು ಶತಮಾನಗಳಲ್ಲಿ ಅನೇಕ ವೈಜ್ಞಾನಿಕ ಸಿದ್ಧಾಂತಗಳು ಅಸತ್ಯವೆಂದು ಸಿದ್ಧವಾಗಿದೆ.

ವಿಜ್ಞಾನವು ಅಸತ್ಯವನ್ನೇ ಸತ್ಯವೆಂದು ನಂಬಲು ಜನರನ್ನು ಪ್ರೇರಿಸುತ್ತದೆಂಬುದು ವ್ಯಕ್ತವಾಗುತ್ತದೆ. ಇದರಿಂದ ವೈಜ್ಞಾನಿಕರ ಸತ್ಯವು ನಿಜವಾದ ಸತ್ಯವೇ ಆಗಿಲ್ಲವೆಂದು ಬೇರೆಯಾಗಿ ಹೇಳುವ ಅವಶ್ಯಕತೆಯೇ ಇಲ್ಲ.

ನಮ್ಮ ಸಂಪ್ರದಾಯವಾದಿಗಳಿಗೆ ಈ ಸೃಷ್ಟಿಯ ಬಗ್ಗೆ ಸರಿಯಾದ ಜ್ಞಾನವೇ ಇರಲಿಲ್ಲ. ವೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಅವರೆ ಭಾರತದ ಪ್ರಾಚೀನ ಶಾಸ್ತ್ರಗಳನ್ನು ಓದಿದರೆ ಈ ಮಾತು ಅಪ್ಪಟ ಸುಳ್ಳು ಎಂಬುದು ಗೊತ್ತಾಗುತ್ತದೆ. ಇದಕ್ಕೆ ಚರಕ ಸುಶ್ರುತರ ಸಂಹಿತೆಗಳೂ ಆರ್ಯಭಟನ ಖಗೋಲ ವಿಜ್ಞಾನದ ಬಗ್ಗೆ ಇರುವ ಸಿದ್ಧಾಂತಗಳೂ ಸಾಕ್ಷಿಯಾಗಿವೆ. ಆಧುನಿಕವೆನಿಸಿರುವ ಶಸ್ತ್ರಚಿಕಿತ್ಸೆಯಿಂದ ಪ್ರಸೂತಿ ಮಾಡಿಸುವ ಪದ್ಧತಿ (ಸಿಸೇರಿಯನ್ ಆಪರೇಷನ್) ಆಫ್ರಿಕದ ಮಾಂತ್ರವಾದಿ ವೈದ್ಯರಿಗೆ (ವಿಚ್ ಡಾಕ್ಟರ್) ಗೊತ್ತಿತ್ತು ಎಂಬುದು ಡಾಕ್ಟರರಾದ ಕಿರ್ಲೋಸ್ಕರ ಅವರಿಗೆ ತಿಳಿದಿರಬೇಕು. ಒಬ್ಬ ಆಧುನಿಕ ವೈದ್ಯನಿಗೆ ಇಷ್ಟು ಜ್ಞಾನಸಾಧನವಿರಬೇಕಾದರೆ ಸಾಂಪ್ರದಾಯವಾದಿಗಳಿಗೆ ಪರಂಪರೆಯನ್ನು ನಂಬುವವರಿಗೆ ಸೃಷ್ಟಿಯ ನಿಜವಾದ ಜ್ಞಾನವೇ ಇರಲಿಲ್ಲವೆಂದು ಹೇಳುವುದು ಬುದ್ಧಿವಂತರಿಗೆ ಶೋಭಿಸುವ ಮಾತಾಗುವುದಿಲ್ಲ.

ಕೊನೆಯದಾಗಿ, ಶ್ರೀ ಕಿರ್ಲೋಸ್ಕರ ವಿಜ್ಞಾನದ ವಿನಾಶಕಾರಿಯಾದ ಗುಣದ ಬಗ್ಗೆ ಒಂದು ಮಾತನ್ನೂ ಹೇಳದಿರುವುದು ಅವರ ಪ್ರತಿಪಾದನೆ ಏಕಪಕ್ಷೀಯವಾಗಿದೆಯೆಂಬುದನ್ನು ವ್ಯಕ್ತಪಡಿಸುತ್ತದೆ. ಇಂದು ಯಾವ ಸಂಪ್ರದಾಯವಾದಿಗಳೂ ಪರಂಪರಾಗತ ಜೀವನ ನಡೆಸುವವರೂ ಜಗತ್ತನ್ನು ವಿಜ್ಞಾನದಷ್ಟು ವಿನಾಶದ ಅಂಚಿಗೆ ತಂದು ನಿಲ್ಲಿಸಿಲ್ಲ. ಇಂದು ವಿಜ್ಞಾನವು ಮಾನವನನ್ನು ಅಷ್ಟೇ ಅಲ್ಲ, ಇಡೀ ಪ್ರಪಂಚವನ್ನೇ ನಾಶ ಮಾಡಲು ಕಾರಣವಾಗಿಬಿಟ್ಟಿದೆ. ವಿಜ್ಞಾನವು ಇಂದು ಜಗತ್ತಿನ ಖನಿಜಸಂಪತ್ತನ್ನೂ ವೃಕ್ಷಸಂಪತ್ತನ್ನೂ ಪ್ರಾಣಿಸಂಪತ್ತನ್ನು ಸಮೂಲವಾಗಿ ನಾಶಮಾಡುತ್ತಲಿದೆ. ನೆಲ, ನೀರು, ಗಾಳಿಗಳನ್ನು ಜೀವಸಕ್ಕೆ ಅಯೋಗ್ಯವನ್ನಾಗಿ ಹಾನಿಕರವಾಗಿ ಪರಿವರ್ತನೆಗೊಳಿಸುತ್ತಲಿವೆ. ಇಂಥ ಅನಿಷ್ಟವಾದ ವಿಜ್ಞಾನವನ್ನೇ ನಂಬಿ ನಡೆಯಬೇಕು ಎಂದು ಪ್ರತಿಪಾದನೆ ಮಾಡುವುದು ವಿವೇಕದ ಮಾತು ಎಂದು ಎನಿಸಲಾರದು.

ಇಂದು ಮಾನವಕುಲವು ಭಸ್ಮಾಸುರನಾಗದೇ ದೇವಮಾನವನಾಗಿ ಬಾಳಬೇಕಾದರೆ ಅಥವಾ ಬರೀ ಮಾನವನಾಗಿಯೇ ಬಾಳಬೇಕಾದರೆ ನಮ್ಮ ಪರಂಪರಾಗತ ಮೌಲ್ಯಗಳಾದ ದೇವರು ಧರ್ಮ ನ್ಯಾಯ ನೀತಿ ಶಾಂತಿ ಅಹಿಂಸೆ ಮೊದಲಾದವುಗಳನ್ನು ನಂಬಲೇಬೇಕು ನ್ಯಾಯ ನೀತಿ ಪ್ರೀತಿಗಳಿಗೆ ಸ್ಥಾನವೇ ಇಲ್ಲದ ಬರೀ ಆಸುರೀ ಗುಣಗಳನ್ನೇ ಬೆಳೆಯಿಸುವ ವಿಜ್ಞಾನವನ್ನು ನಂಬಿದರೆ ಮನುಷ್ಯನು ತಾನೂ ನಾಶವಾಗುವನಲ್ಲದೇ ಜಗತ್ತನ್ನೂ ನಾಶ ಮಾಡುತ್ತಾನೆ. ಆದುದರಿಂದ ವಿನಾಶದ ಮೂಲವಾದ ವಿಜ್ಞಾನವನ್ನು ತ್ಯಜಿಸಿ ಸುಖ ಶಾಂತಿಗಳನ್ನು ಎಲ್ಲರಿಗೂ ನೀಡುವ ನಮ್ಮ ಪರಂಪರೆಯೇ ನಮಗೆ ತಾರಕವಾಗಿದೆ.

**–ಚಿದಂಬರಾನಂದ**



**ಕೊಲಂಬಸ್ ಆಗ ಅಮೇರಿಕವನ್ನು ಶೋಧಿಸಲು ಮಾಡಿದ ಒಟ್ಟು ಖರ್ಚಿನಷ್ಟು ಹಣ ಈಗ ಅಮೇರಿಕನ್ನನೊಬ್ಬನ ಅರ್ಧದಿನದ ವೆಚ್ಚಕ್ಕೆ ಸಮ!**

# ಅಮಿತಾ

**ಅಮಿತಾ ಕಳಿಂಗದ ರಾಜಕುಮಾರಿ. ಆರು ವರ್ಷದ ಬಾಲಿಕೆ. ರಾಜಮಾತೆ ನಂದಾ ಅಧಿಕಾರದಲ್ಲಿ ನಿರಾಸಕ್ತಳಾಗಿ ಜಪತಪ ಸಾಧನೆಯಲ್ಲಿ ನಿರತಳಾದಳೆಂದು ಪುಟ್ಟ ಅಮಿತಾ ಮಹಾರಾಣಿಯು ಪಟ್ಟಕ್ಕೇರಬೇಕಾಯಿತು. ಮಗಧದ ಸಮ್ರಾಟ ಅಶೋಕ ಕಳಿಂಗದ ಮೇಲೆ ದಾಳಿ ಮಾಡಿದಾಗ ಆ ಕಲ್ಲೆದೆಯ ಆಕ್ರಮಣಕಾರನನ್ನು ಈ ಮುಗ್ಧ ಬಾಲೆ ಹೇಗೆ ಪರಿವರ್ತಿಸಿದಳೆಂಬುದು ಈ ಕಥೆಯ ವಸ್ತು.**

**ಇದೊಂದು ಐತಿಹಾಸಿಕ ಕಥೆ; ಇತಿಹಾಸವಲ್ಲ. ಅಶೋಕ ಕಳಿಂಗದ ಮೇಲೆ ದಾಳಿ ಮಾಡಿ, ತತ್ಪರಿಣಾಮವಾಗಿ ಇನ್ನೆಂದೂ ಯುದ್ಧ ಮಾಡುವದಿಲ್ಲವೆಂದು ಪ್ರತಿಜ್ಞೆಗೈದನೆಂಬುದೊಂದೇ ಇಲ್ಲಿರುವ ಸತ್ಯ ಘಟನೆ. ಮೂಲ ಕಾದಂಬರಿಯು ಹಿಂದಿಯ ಅಭಿಜಾತ ಸಾಹಿತ್ಯದಲ್ಲಿ ಮಹತ್ತರವಾದ ಕೃತಿಯೆಂದು ಪರಿಗಣಿಸಲಾಗಿದ್ದು ಈಗಾಗಲೇ ಅದು ಅನೇಕ ಭಾಷೆಗಳಲ್ಲಿ ತರ್ಜುಮೆಗೊಂಡಿದೆ.**

ಸೂರ್ಯೋದಯದ ಸಮಯ. ಎಲ್ಲೆಡೆಗೂ ಆವರಿಸಿದ ದಟ್ಟ ಮಂಜಿನ ತೆರೆಯಲ್ಲಿ ಮುಸುಕಿದ ಕಳಿಂಗ ಪಟ್ಟಣ ಸ್ತಬ್ಧವಾಗಿ ಇನ್ನೂ ನಿದ್ರಿಸುವಂತಿತ್ತು. ಬೆಟ್ಟದ ಮೇಲಿನ ದೇವಾಲಯದಲ್ಲಿನ ವಿಶಾಲ ಅಷ್ಟಲೋಹದ ಗಂಟೆಯ ಟಂಕಾರ ಶಬ್ದ ಗರ್ಜನೆಯಂತೆ ಕೇಳಿಸಿತು. ನಗರದ ಕೆಲವೆಡೆಯಲ್ಲಿ ದೇವಸ್ಥಾನಗಳ ಬೆಳಗಿನ ಆರತಿಯ ಶಂಖ, ಜಾಗಟೆ, ನಗಾರಿ ವಾದ್ಯಗಳ ನಾದ ಪ್ರತಿಧ್ವನಿಸಿತು. ನವೋದಿತ ಸೂರ್ಯನ ಕಿರಣಗಳು ಮಂಜಿನ ತೆರೆಯನ್ನು ಭೇದಿಸಿದಂತೆ ಬೆಟ್ಟದ ಮೇಲಿನ ಉನ್ನತದೇವಾಲಯ ಗುಲಾಬಿ ವರ್ಣ ತಾಳುತ್ತ ಆಕಾಶದಲ್ಲಿ ಥಳಥಳಿಸಿತು.

ಈ ನೂತನ ದೇವಾಲಯ ನಗರದ ಪಶ್ಚಿಮ ಭಾಗಕ್ಕೆ ಪ್ರಾಕಾರದ ಹತ್ತಿರವಿದ್ದಿತು. ಇಬ್ಬನಿ ತುಂಬಿದ ಆಕಾಶದಲ್ಲಿ ಅದರ ಸುಂದರ ಶ್ವೇತ ದ್ವಾರ ಸ್ವಪ್ನಲೋಕದ ಪ್ರಾಸಾದದ ಪ್ರವೇಶ ದ್ವಾರದಂತೆ ಶೋಭಿಸುತ್ತಿತ್ತು. ನಿಬಿಡವಾದ ಮಂಜಿನ ನಿಮಿತ್ತ ತಥಾಗತನ ಮಂತ್ರಪಠನ ದೂರದಿಂದ ಕೇಳಿಸುತ್ತಿರಲಿಲ್ಲ. ಆದರೆ ದೇವಾಲಯ ಸಮೀಪಿಸಿದಂತೆ, ಜಗಲಿಯಲ್ಲಿ ಕುಶಾಸನಗಳ ಮೇಲೆ ಪೀತವಸ್ತ್ರ ಧರಿಸಿ ಪದ್ಮಾಸನಸ್ಥರಾದ ಕೆಲ ವೃದ್ಧ ಭಿಕ್ಷುಗಳು ಕಾಣಿಸುತ್ತಿದ್ದರು.

ದೇವಾಲಯದ ಶುಭ್ರ ಮಹಾದ್ವಾರದ ವರೆಗೆ ಕರಿ ಕಲ್ಲಿನ ಸೋಪಾನ ಮಾರ್ಗವಿದ್ದಿತು. ಮೊದಲಿನ ಮೆಟ್ಟಲಿನ ಮೇಲೆ ನಿಂತಿದ್ದ ರಾಜದಂಡಧಾರಿಯು ಘಂಟಾನಾದ ಕೇಳಿದೊಡನೆ ಸೆಟೆದು ನಿಂತ. ಅನತಿದೂರದಲ್ಲಿ ರಾಜಲಾಂಛನವುಳ್ಳ, ಜರತಾರೀ ವಸ್ತ್ರಾಲಂಕೃತವಾದ ದೊಡ್ಡ ಪಲ್ಲಕ್ಕಿ ಸಿದ್ಧವಿತ್ತು. ಅದರ ಹತ್ತಿರವೇ ಹಳದಿ ಮುಂಡಾಸ, ಕೆಂಪು ಅಂಗಿ, ಹಳದಿ ಸೊಂಟಪಟ್ಟಿಗಳನ್ನು ಧರಿಸಿದ ಎಂಟು ಭೋಯಿಗಳು ಚಳಿಯಿಂದ ನಡುಗುತ್ತ ಮುದುಡಿಯಾಗಿ ಕುಳಿತಿದ್ದರು. ಗಂಟೆ ಬಾರಿಸಿದಂತೆ ಅವರೂ ನೆಟ್ಟಗೆ ಕುಳಿತರು. ಅಚ್ಚುಕಟ್ಟಾದ ಬಟ್ಟೆತೊಟ್ಟ ಸ್ತ್ರೀಪರಿಚಾರಕರು ಪಲ್ಲಕ್ಕಿಯ ಎರಡೂ ಬದಿಯಲ್ಲಿ ಖಡ್ಗ ಹಿಡಿದು ಸಿದ್ಧರಾಗಿ ನಿಂತರು.

ರಾಜಭಟರು ಕಾರ್ಯತತ್ಪರರಾದರು. ಸಕಲ ನೇತ್ರಗಳು ದೇವಾಲಯದ್ವಾರದಲ್ಲಿ ಕೇಂದ್ರೀಕೃತವಾದವು.

ಮಹಾದ್ವಾರದಿಂದ ಸುಮಾರು ಇಪ್ಪತ್ತೈದು ಮೆಟ್ಟಲು ಬಿಟ್ಟು, ದರಿದ್ರರಾದ ಸ್ತ್ರೀ ಪುರುಷರ ಸಣ್ಣ ಗುಂಪೊಂದು ನಿಂತಿತ್ತು. ರಾಜಭಟರು ಅವರನ್ನು ಅಲ್ಲಿಯೇ ಅಡ್ಡಗಟ್ಟಿದ್ದರು. ಅಂಥ ಚಳಿಯಲ್ಲಿ ಸಹ ಆ ದೀನ ಜನರ ಹರಕು ಬಟ್ಟೆಗಳು ಸಂಪೂರ್ಣ ಮೈ ಮುಚ್ಚದಷ್ಟು ಅಲ್ಪವಾಗಿದ್ದವು. ಚಳಿಯಿಂದಲೂ ರಾಜಭಟರ ಭೀತಿಯಿಂದಲೂ ಅವರು ಕುಗ್ಗಿ ಹೋಗಿದ್ದರು.

ಗಂಟೆ ಬಾರಿಸಿದಂತೆ ಮಹಾದ್ವಾರದಲ್ಲಿ ಭುಜದ ಮೇಲೆ ಚಿನ್ನದ ಕಲಶ ಹೊತ್ತ ಪರಿಚಾರಿಕೆ ಪ್ರತ್ಯಕ್ಷಳಾದಳು. ಕೂಡಲೇ ರಾಜದಂಡಧಾರಿ ಘೋಷಿಸಿದ:

"ಪರಮ ಭಗವತಿ ರಾಜರಾಜೇಶ್ವರಿಗೆ ಜಯವಾಗಲಿ! ಪ್ರಜೆಗಳೇ! ಪುರಜನರೇ! ಸಾವಧಾನ! ಮಹಾ ಮಹಿಮಾಮಯಿ ಪ್ರಜಾಪಾಲಕ, ಧರ್ಮರಕ್ಷಕ, ಕಳಿಂಗದ ರಾಜಮಹಾರಾಣಿಗೆ ಭೋ ಪರಾಕ್!"

ಹಿಂದಿನಿಂದ ಕಳಿಂಗದ ಮಹಾರಾಣಿ ನಂದಾ ಕಾಣಿಸಿಕೊಂಡಳು. ಶುಭ್ರವಸ್ತ್ರಧಾರಿಣಿಯಾಗಿ ರಾಜಹಂಸದಂತೆ ಮಂದಗತಿಯಿಂದ ಬರುತ್ತಿದ್ದಳು. ಆಕೆ ನಿರಾಭರಣೆ. ತುಸು ತಲೆ ಬಾಗಿ, ಕೈ ಜೋಡಿಸಿ, ಮಂತ್ರಪಠಣ ಮಾಡುತ್ತ ನಡೆದಿದ್ದಳು. ಅವಳ ಸೌಮ್ಯ ಮುಖಮುದ್ರೆಯು ಸಂಯಮದ ಭಕ್ತಿ ಭಾವನೆಯ ಪ್ರತೀಕವಾಗಿತ್ತು. ಬೌದ್ಧ ಭಿಕ್ಷುವಿಗೆ ಯೋಗ್ಯವಾದ ವಿನಯ, ಶೀಲಗಳ ನಿಯಮಗಳಿಗೆ ಅನುರೂಪವಾದ ಮುಖಭಾವವದು. ಅವಳ ಹಿಂದೆ ಇಬ್ಬರು ದಾಸಿಯರು ದೊಡ್ಡ ಹರಿವಾಣಗಳಲ್ಲಿ ಪೂಜಾಪ್ರಸಾದವನ್ನು ಹಿಡಿದುಕೊಂಡಿದ್ದರು.

ಜನಸ್ತೋಮದಿಂದ ಅಲ್ಲಲ್ಲಿ ಕಂಪಿಸುವ ಧ್ವನಿಗಳು ಕೇಳಿಸಿದವು. "ಮಹಾಮಾತೆಗೆ ಜಯವಾಗಲಿ! ನಮಗೆ ಅಭಯ ದಾನ, ಸಂರಕ್ಷೆ ನೀಡು ತಾಯಿ!"

ಮಂತ್ರೋಚ್ಚಾರದಲ್ಲಿ ಮಗ್ನಳಾಗಿದ್ದರೂ ಮಹಾರಾಣಿಗೆ ಅಸ್ಪಷ್ಟ ಕೋರಿಕೆಗಳ ಧ್ವನಿ ಕೇಳಿಸಿತು. ಭಿಕ್ಷುಕರು ದಾನ ಬೇಡುತ್ತಿರುವರೆಂದು ತಿಳಿದು ಪ್ರಸಾದವನ್ನು ಹಂಚಲು ದಾಸಿಯರಿಗೆ ಸಂಜ್ಞೆ ಮಾಡಿ, ಪಲ್ಲಕಿಯೊಳಗೆ ಹೋಗಿ ಕುಳಿತುಕೊಂಡಳು.

ಜನಜಂಗುಳಿಯಿಂದ ಮತ್ತೆ ಕೂಗಾಟ ಕೇಳಿಸಿತು: "ಪರಮ ಭಗವತಿಗೆ ಜಯವಾಗಲಿ! ನಮಗೆ ಅಭಯದಾನ, ನ್ಯಾಯದಾನ ನೀಡು ಮಹಾತಾಯಿ!"

ಮಹಾರಾಣಿ ಜನಸಮೂಹದತ್ತ ಕಣ್ಣು ಹಾಯಿಸಿ ಚಾಮರಧಾರಿ ದಾಸಿಯರನ್ನು ವಿಚಾರಿಸಿದಳು.

ವೃದ್ಧನೊಬ್ಬ ಮುಂದೆ ಬಂದು, ಥರಥರನೆ ನಡುಗುತ್ತ, ನೆಲ ಮುಟ್ಟಿ ನಮಸ್ಕರಿಸಿ, "ಪರಮ ಭಗವತಿ, ಮಹಾಮಾಯಿ, ನಿರ್ಭಾಗ್ಯರಿಗೆ ನ್ಯಾಯದಾನ ನೀಡು ತಾಯಿ! ಜನಗಳ ಪಿತ್ರಾರ್ಜಿತ ಭೂಮಿಯೇ ಛಿನ್ನವಿಛಿನ್ನವಾಗುತ್ತಿದೆ. ಅವರ ಗುಡಿಸಲುಗಳು ನೆಲಸಮವಾಗುತ್ತಿವೆ. ನಮಗೆ ರಕ್ಷಣೆ ಕರುಣಿಸು ತಾಯಿ!" ಎಂದ.

ಮಹಾರಾಣಿಯ ಸೌಮ್ಯ ಮುಖದ ಮೇಲೆ ಚಿಂತೆಯ ಛಾಯೆ ಮೂಡಿತು. ರಾಜಪರಿವಾರದ ನಾಯಕನನ್ನು ಕೇಳಿದಳು: "ಇದು ನಿಜವೇ? ಇದೇನು ನಡೆದಿರುವುದು? ಯಾರ ಆದೇಶದ ಮೇರೆಗೆ ಹೀಗೆಲ್ಲ ನಡೆದಿದೆ?"

ಜನಜಂಗುಳಿಯಿಂದ ಅನೇಕ ಧ್ವನಿಗಳು ಕೂಗಿಕೊಂಡವು: "ಸೈನ್ಯಾಧಿಕಾರಿಗಳು ನಮ್ಮ ಗ್ರಾಮ ನಿರ್ನಾಮವಾಗಲೆಂದು ಆಜ್ಞೆ ಹೊರಡಿಸಿರುವರಂತೆ. ನಮ್ಮ ಭೂಮಿಯ ಮೇಲೆ ದೊಡ್ಡದೊಂದು ಕೋಟೆ ಮತ್ತು ಅರಮನೆಯನ್ನು ಕಟ್ಟಲಾಗುವದಂತೆ."

ಮಹಾರಾಣಿ ಖಿನ್ನಳಾಗಿ, ಪ್ರಜೆಗಳ ವಿನಂತಿಯನ್ನು ಮನ್ನಿಸಿದಳು. ತಲೆ ಅಲ್ಲಾಡಿಸುತ್ತ, "ಇಲ್ಲ, ಇದು ಸಾಧ್ಯವಿಲ್ಲ. ನಮಗೆ ಕೋಟೆಯ ಅಗತ್ಯವಿಲ್ಲ. ಇನ್ನೊಂದು ಅರಮನೆ ಬೇಕಿಲ್ಲ. ಹೆಚ್ಚು ದುರ್ಗಗಳು, ಪ್ರಾಸಾದಗಳನ್ನು ನಿರ್ಮಿಸುವಲ್ಲಿ ಯಾವ ಸುಖ-ಶಾಂತಿಯೂ ಇಲ್ಲ.

ಅನ್ಯರ ಸ್ವತ್ತನ್ನು ಅಪಹರಿಸುವುದು ಅನ್ಯಾಯ. ನಮ್ಮ ರಾಜ್ಯದಲ್ಲಿ ಯಾರ ಆಸ್ತಿಪಾಸ್ತಿಯ ಅಪಹರಣವೂ ಆಗಲಾರದು. ಇದು ನಮ್ಮ ಆದೇಶ."

ದೀನದಲಿತರ ಭೀತಿ ಸಂಕಟವೆಲ್ಲ ಮಾಯ ವಾಗಿ ಗೆಲುವಿನಿಂದ ಮಹಾರಾಣಿಯ ಜಯ ಘೋಷ ಮಾಡಿದರು. ರಾಣಿಯ ಪಲ್ಲಕ್ಕಿ ದೇವಾ ಲಯದಿಂದ ಅರಮನೆಯತ್ತ ಸಾಗಿತು.

ಅರಮನೆಯ ಅಂತಃಪುರದ ವಿಶಾಲ ಪ್ರಾಂಗಣದಿಂದ ಉದ್ಯಾನದ ವರೆಗೂ ಅಗಲ ವಾದ ಅಮೃತಶಿಲೆಯ ಸೋಪಾನಮಾರ್ಗ ವಿದ್ದಿತು. ಅಲ್ಲಿ ರಾಜಕುಟುಂಬದ ಸೇವೆಯಲ್ಲಿರುವ ದಾಸಿ ಪಿತಾ ರಾಜಕುಮಾರಿಯ ಪ್ರತೀಕ್ಷೆ ಯಲ್ಲಿ ನಿಂತಿದ್ದಳು. ಪಿತಾ ಇಪ್ಪತ್ತರ ತರುಣಿ. ಸುಲಕ್ಷಣ ಅಂದವಾದ ಮುಖ. ಅಚ್ಚುಕಟ್ಟಾದ ವೈಮಾಟ. ಹಣೆಯ ಮೇಲೆ ರಾಜಕುಟುಂಬದ ವಿಶಿಷ್ಟ ಸೇವೆಯ ಚಿಹ್ನವಾದ ಬೆಳ್ಳಿಯ ನಕ್ಷತ್ರ ಗೋಲ ಧರಿಸಿದ್ದಳು. ಬಲಗೈಯಲ್ಲಿ ಬಲಿಷ್ಠ ನಾಯಿ ಬಭ್ರುವನ್ನು ಬಂಧಿಸಿದ ಸರಪಣಿ ಹಿಡಿದಿದ್ದಳು.

ಪಿತಾಳನ್ನು ಕಂಡರೆ ಬಭ್ರುವಿಗೆ ತುಂಬಾ ಪ್ರೀತಿ. ಅವರಿಬ್ಬರ ಪ್ರೇಮ ಅನ್ಯೋನ್ಯ ವಾಗಿತ್ತು. ಭಿನ್ನಜಾತಿಯವರಾಗಿದ್ದರೂ ಅವ ರಿಬ್ಬರಲ್ಲಿ ಅನೇಕ ನೈಸರ್ಗಿಕ ಸಾಮ್ಯಗಳಿದ್ದವು. ಸುಪುಷ್ಟ ಅಂಗಾಂಗಗಳು. ತೆಳುವಾದ ಸೊಂಟ. ತೀಕ್ಷ್ಣ ಕಣ್ಣುಗಳು. ಚುರುಕು ಬುದ್ಧಿ. ಇವ ರಿಬ್ಬರೂ ಅಂತಃಪುರದ ದ್ವಾರದೆಡೆಗೆ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು.

ಒಮ್ಮೆಲೆ ಬಭ್ರು ನೆಗೆದು ಬಿದ್ದು ಸರಪಣಿ ಹಿಡಿದ ಪಿತಾಳನ್ನು ಎಳೆದುಕೊಂಡು ಜಗಲಿ ಯತ್ತ ಓಡಿತು. ಅದೇ ಕ್ಷಣ ಅಂತಃಪುರ ದ್ವಾರದಲ್ಲಿ ರಾಜಕುಮಾರಿ ಹಾರುತ್ತ, ಜಿಗಿ ಯುತ್ತ ಪ್ರತ್ಯಕ್ಷಳಾದಳು. ಅವಳ ಶುಭ್ರ ದುಂಡಗಿನ ಮುಖದ ಸುತ್ತಲೂ ಕಪ್ಪು, ಬಣ್ಣದ ನುಣುಪಾದ ಗುಂಗುರು ಕೂದಲು ಕುಣಿಯು ತ್ತಿತ್ತು. ಮೆತ್ತಗಿನ ಕೆಂಪು ಉಣ್ಣೆಯ ಜರ ತಾರಿ ಅಂಗಿಯನ್ನು ತೊಟ್ಟಿದ್ದಳು. ನಡುಮಧ್ಯ ಹಳದಿ ವರ್ಣದ ರೇಶಿಮೆಯ ಸೊಂಟಪಟ್ಟಿಯ ಮೇಲೆ ಚಿನ್ನದ ಸರ ಕಟ್ಟಿತ್ತು. ಕೈಯಲ್ಲಿ ಚಿಕ್ಕ ರತ್ನಖಚಿತ ಕಂಕಣಗಳು, ಕೊರಳಲ್ಲಿಯ ಚಿಂಪು ಹಾರ ಅವಳ ಕುಣಿದಾಟಕ್ಕೆ ಭುಜದ ಮೇಲೆ ವಾಲಿ ಬಿದ್ದಿತ್ತು.

ರಾಜಕುಮಾರಿ ಅಮಿತಾ ಆರು ವರ್ಷದ ಬಾಲಿಕೆ. ಬಲು ತುಂಟಿ. ಹಟಮಾರಿ. ಎರಡೆ–ರಡು ಮೆಟ್ಟಲು ಜಿಗಿಯುತ್ತ ಇಳಿಯುತ್ತಿದ್ದಳು. ಅವಳ ಹಿಂದೆ ವೃದ್ಧ ಕಂಚುಕಿ ಉದ್ದಾಲ ಏದು ಸಿರು ಬಿಡುತ್ತ ಬೆನ್ನುಹತ್ತಿದ್ದ. ಆತನ ಹಿಂದೆ ಹಿತಾಳ ತಾಯಿ, ದಾಸಿ, ವಾಪಿ ಕೈಯಲ್ಲಿ ರಾಜ ಕುಮಾರಿಯ ಕೆಂಪು ಚರ್ಮದ ಪಾದರಕ್ಷೆಗಳನ್ನು ಹಿಡಿದುಕೊಂಡು ಬರುತ್ತಿದ್ದಳು. ಹುಲ್ಲಿನ ಮೇಲಿನ ಕಲ್ಲು ಮುಳ್ಳುಗಳು ಅವಳ ಕೋಮಲ ಪಾದ ಗಳಿಗೆ ಚುಚ್ಚುವವೆಂದು ಎಷ್ಟು ಮೊರೆಯಿ ಟ್ಟರೂ ಅಮಿತಾ ಅವುಗಳನ್ನು ಧರಿಸಲು ಒಪ್ಪುತ್ತಿರಲಿಲ್ಲ. ಬಭ್ರುವಿನ ಹತ್ತಿರ ಓಡುತ್ತ ಹೋಗಿ, ಕೆಳಗೆ ಕುಳಿತು, ಅದರ ತಲೆ ಯನ್ನು ಮಮತೆಯಿಂದ ನೇವರಿಸಹತ್ತಿದಳು. ನಾಯಿಯೂ ಅಷ್ಟೇ ಒಲವಿನಿಂದ ನಾಲಿಗೆ ಚಾಚಿ ಅವಳ ಮುಖ ನೆಕ್ಕಲು ಹಾತೊರೆಯುತ್ತಿತ್ತು. ಇಬ್ಬರ ಹೃದಯಗಳಲ್ಲೂ ಪ್ರೇಮ ಉಕ್ಕಿ ಹರಿಯುತ್ತಿತ್ತು.

ರಾಜಕುಮಾರಿ ಅಮಿತಾ ಕಳಿಂಗದ ಮಹಾ ರಾಜಾಧಿರಾಜ ಕರವೇಲನ ಏಕಮೇವ ಪುತ್ರಿ. ಸಿಂಹಾಸನಾರೂಢನಾಗಿ ಎಂಟು ವರ್ಷ ಕಳೆದ ನಂತರ ಮಹಾರಾಜಾ ಕರವೇಲ ಹಾಗೂ ಮಹಾರಾಣಿ ನಂದಾರಿಗೆ ಬೌದ್ಧ ಸ್ಥವಿರ ಜೀವಕನ ಅನುಗ್ರಹದಿಂದ ಸಂತಾನ ಪ್ರಾಪ್ತಿ ಯಾಗಿತ್ತು. ರಾಜಕುಮಾರಿಯು ಅಪರಿಮಿತ ವೈಭವಯುತಳೂ ಕೀರ್ತಿಶಾಲಿಯೂ ಆಗುವ ಳೆಂದು ರಾಜಜ್ಯೋತಿಷಿ ಭವಿಷ್ಯ ನುಡಿದ. ಅದಕ್ಕೆಂದೇ ಅವಳಿಗೆ "ಅಮಿತಾ" ಎಂದು ಹೆಸರಿಡಲಾಯಿತು. ಆದರೆ ರಾಜಕುಮಾರಿ ಜನಿಸಿದ ದಿನವೇ ಮಹಾರಾಜಾ ಕರವೇಲನು ಯುದ್ಧಕ್ಕೆ ತೆರಳುವ ಪ್ರಸಂಗ ಬಂದೊದಗಿತು. ಸಮರದಲ್ಲಿ ಗಾಯಗೊಂಡಾತ ಪುನಃ ಚೇತ

ಸಿಕೊಳ್ಳಲಿಲ್ಲ. ಕೊನೆಯುಸಿರೆಳೆಯುವದಕ್ಕೆ ಮೊದಲು ತನ್ನ ವಿಶ್ವಾಸಪಾತ್ರರಾದ ಮಹಾಮಾತ್ಯ ಆಚಾರ್ಯ ಸುಕಂತ, ಮಹಾಸೇನಾಪತಿ ಆರ್ಯ ಭದ್ರಕೀರ್ತಿ ಹಾಗೂ ನ್ಯಾಯಮೂರ್ತಿ ಆರ್ಯ ಪ್ರಜಿತರನ್ನು ಕರೆಕಳಿಸಿ ರಾಜ್ಯದ ಕಾರ್ಯಭಾರ ಹಾಗೂ ಸುರಕ್ಷತೆಯ ಹೊಣೆಯನ್ನು ಅವರಿಗೆ ಒಪ್ಪಿಸಿದ. ರಾಜಕುಮಾರಿ ಅಮಿತಾಳನ್ನು ಕಳಿಂಗರಾಜ್ಯದ ಉತ್ತರಾಧಿಕಾರಿಯೆಂದು ಘೋಷಿಸಲಾಯಿತು.

ಪತಿಯ ಮರಣದಿಂದ ತುಂಬು ಯವ್ವನದ ಮಹಾರಾಣಿಗೆ ಅತೀವ ಆಘಾತವಾಯಿತು. ಸಕಲ ರಾಜವೈಭವ ಲೌಕಿಕಸುಖಗಳನ್ನೂ ಆಕೆ ತ್ಯಜಿಸಿದಳು. ಸಂಸಾರದಿಂದ ವಿರಕ್ತಳಾದರೂ ರಾಜ್ಯದ ಯೋಗಕ್ಷೇಮ, ರಾಜಕುಮಾರಿಯ ಸಂರಕ್ಷಣೆಯಲ್ಲಿ ನಿರತ ದರ್ಶನವನ್ನು ಸ್ವೀಕರಿಸಿ, ನಿಷ್ಕಾಮ, ನಿಃಸಂಗ ಜೀವನ ಸಾಗಿಸುತ್ತ, ಶಾಂತಿ ಹಾಗೂ ನಿರ್ವಾಣಗಳ ಪ್ರಾಪ್ತಿಯಲ್ಲಿ ನಿರತಳಾಗಿದ್ದಳು.

ಅಮೃತಶಿಲೆಯ ಮೆಟ್ಟಲುಗಳನ್ನು ಜಿಗಿಯುತ್ತ ಅಮಿತಾ ಪ್ರಾಸಾದದ ಉದ್ಯಾನದಲ್ಲಿ ಇಳಿದಳು. ಅಲ್ಲಿ ಪಾರಿವಾಳಗಳಿಗೆ ತಾನೇ ಧಾನ್ಯ ಹಾಕುವನೆಂದು ಹಟ ಹಿಡಿದಳು. ಹಿತಾ ಪಕ್ಷಿಗಳನ್ನು ಕರೆದಳು. ಅನೇಕ ಪಾರಿವಾಳಗಳು ಹಾರಿ ಬಂದು ಅಮಿತಾಳ ತಲೆ, ಭುಜಗಳ ಮೇಲೆ ಕುಳಿತವು. ಅವಳ ಕೈಯಲ್ಲಿದ್ದ ಧಾನ್ಯ ತಿನ್ನಬೇಕೆಂದಾಗ ಭಬ್ರು ಒಮ್ಮೆಲೆ ಬೊಗಳ ಹತ್ತಿತು. ತನ್ನ ನೆಚ್ಚಿನ ರಾಜಕುಮಾರಿಗೆ ಕಚ್ಚುವವೆಂದು ತಿಳಿದು ಪಕ್ಷಿಗಳನ್ನು ಬೆದರಿಸಿ ಓಡಿಸಿತದು. ಇದರಿಂದ ಅಮಿತಾ ಕುಪಿತಳಾದಳು.

"ಪಾಪ, ಪಾರಿವಾಳಗಳನ್ನು ಏಕೆ ಬೆದರಿಸಿದೆ ? ಬಭ್ರು. ನೀನು ಭಾರಿ ಕೀಟಲೆಯವ. ಅಮ್ಮ ಹೇಳಲ್ಲದೆ ಯಾರನ್ನೂ ಬೆದರಿಸಕೂಡದು

ಯಾರಿಂದಲು ಅಪಹರಿಸಬಾರದು, ಯಾರಿಗೂ ಹಾನಿ ಮಾಡಬಾರದು, ಎಂದು? ನಿನ್ನನ್ನು ಶಿಕ್ಷಿಸುವೆ. ಮಾಮಾ, ಈ ಸರಪಣಿಯಿಂದ ಈ ದುಷ್ಟ ಬಭ್ರುವನ್ನು ಬಂಧಿಸು," ಎಂದು ಉದ್ಧಾಲನಿಗೆ ಹೇಳಿದಳು. ನಾಯಿಯನ್ನು ಕಟ್ಟಿದ ಸರಪಣಿಯನ್ನು ಎಳೆಯುತ್ತ ಅಮಿತಾ ತಾಯಿಯ ಹತ್ತಿರ ಹೊರಟಳು.

ಮಹಾರಾಣಿಯ ಕೋಣೆ ವಿಶಾಲವಾಗಿದ್ದರೂ ವೈಭವಹೀನವಾಗಿದ್ದರಿಂದ ಬರಿದಾಗಿ ತೋರುತ್ತಿತ್ತು. ಎದುರುಗಡೆಯ ಗೋಡೆಯ ಮುಂದಿನ ವೇದಿಕೆಯ ಮೇಲೆ ದೂರದ ನಾಲಂದದಿಂದ ತಂದ ಭಗವಾನ್ ಬುದ್ಧನ ಭಸ್ಮಾವಶೇಷಗಳಿರುವ ಚಿನ್ನದ ಕಲಶವೊಂದಿತ್ತು. ಅದರ [illegible] ಅಷ್ಟಲೋಹದ ಪಾತ್ರೆ[illegible] ಸುಗಂಧ ಧೂಪದ ಧೂಮ ನಿಧಾನವಾಗಿ [illegible]ರುತ್ತಿತ್ತು. ಮುಂದೊಂದು ತುಪ್ಪದ ದೀಪ ಉರಿಯುತ್ತಿತ್ತು. ವೇದಿಕೆಯ ಹತ್ತಿರ ಒಂದು ಪೀಠದ ಮೇಲೆ ಪವಿತ್ರ ತೀರ್ಥ ತುಂಬಿದ ಚಿನ್ನದ ಕೊಡ, ಮತ್ತೊಂದು ಪೀಠದ ಮೇಲೆ ಪೂಜಾ ಸಾಮಾಗ್ರಿಯ ತಟ್ಟೆಯಿತ್ತು.

ಪೂಜಾಗೃಹವಲ್ಲಿ ನಾಯಿಯನ್ನು ತರ ಕೂಡದೆಂದು ಮಹಾರಾಣಿ ಮಗಳಿಗೆ ಹೇಳಿದಳು: "ಪಾಪ ಬಭ್ರುವನ್ನು ಏಕೆ ಬಂಧಿಸಿದೆ? ಹೊರಗೆ ಆಡಲಿ ಬಿಡು, ಮಗು," ಎಂದಳು.

"ಅಮ್ಮಾ, ಬಭ್ರು ಬಹಳೇ ತುಂಟನಾಗಿದ್ದಾನೆ. [illegible] ಹೆದರಿಸಿ ಹಿಡಿದಿದ್ದ. ಅದಕ್ಕೆಂದೆ ಅವನಿಗೆ ಈ ಶಿಕ್ಷೆ. ಯಾರನ್ನೂ ಬೆದರಿಸಬಾರದು, ಯಾರಿಗೂ ಹಾನಿಮಾಡಬಾರದೆಂದು ಅವನಿಗೆ ತಿಳಿಸಿ ಹೇಳು ಅಮ್ಮಾ!"

"ನನ್ನ ಚಿನ್ನ," ಎಂದು ಮಹಾರಾಣಿ ಮಗಳ ಕೆನ್ನೆಯನ್ನು ಮಮತೆಯಿಂದ ನೇವರಿಸಿದಳು, "ನನ್ನ [illegible] ಹೀಗೇ ಧರ್ಮನಿಷ್ಠೆಯಾಗಲೆಂದು ನನ್ನ ಆಸೆ. ಆದರೆ, ಮಗು, ಕರುಣೆಯು, ಆ [illegible] ಪ್ರಾಣಿಯನ್ನು ಕ್ಷಮಿಸು. ಇದೋ, ಈ ತೀರ್ಥ ತೆಗೆದುಕೋ ಎಂದು ಅಮಿತಾಳನ್ನು [illegible] ತೀರ್ಥವನ್ನು ಕೊಟ್ಟಳು. ಅನಂತರ ಉದ್ದಾಲನನ್ನು ಕರೆದು, ಆ ಹೊಸ ದುರ್ಗ ಹಾಗೂ ಪ್ರಾಸಾದಗಳನ್ನು ಕಟ್ಟುವ ವಿಷಯವನ್ನು ಕುರಿತು "ಪರಮ ಭಗವತಿ, ಪ್ರಾಕಾರದ ಹೊರಗಡೆಹೊಸ ದುರ್ಗ ಕಟ್ಟಲಿರುವ ಸಮಾಚಾರ ಕೇಳಿರುವೆ" ವಿಚಾರಿಸಿದಳು. 'ಮತ್ತೊಂದು ಮಹಾಯುದ್ಧ ಹಾಗುವದೆಂಬ ವದಂತಿ ಇದೆ' ಎಂದು ಉದ್ದಾಲ ವಿನಯಪೂರ್ವಕವಾಗಿ ಉತ್ತರಿಸಿದ.

"ಆದರೆ ಇದು ಅನ್ಯಾಯ, ಪ್ರಜೆಗಳ ಮನೆ ಮಾರುಗಳನ್ನು ಕೆಡವಿ ಕೋಟೆ ಕಟ್ಟುವುದು ಪಾಪಕಾರ್ಯ. ಅಲ್ಲಿಗೆ ಹೋಗಿ ಇದು ಯಾರ ಕಾರಭಾರವೆಂದು ತಿಳಿದುಕೊಂಡು ಬರಬೇಕು," ಎಂದು ಆಜ್ಞಾಪಿಸಿದಳು.



ವೇಣುಕ ಗ್ರಾಮ ಕಳಿಂಗನಗರದ ಉತ್ತರ ದಿಕ್ಕಿನಲ್ಲಿ ಪ್ರಾಕಾರದ ಸಮೀಪದಲ್ಲಿರುವ ಬೆಟ್ಟದ ತುದಿಯಲ್ಲಿತ್ತು. ಸುತ್ತಲೂ ಬಿದಿರು ಮೆಳೆ. ಆ ಚಿಕ್ಕ ಹಳ್ಳಿಯ ಮಧ್ಯೆ ಒಂದು ದೊಡ್ಡ ಆಲದ ಮರ. ಅದರ ಕೆಳಗೆ ಹಾಸುಕಲ್ಲಿನ ಕಟ್ಟೆ. ಮಧ್ಯಾಹ್ನ ಮೂರು ಗಂಟೆಯ ಸಮಯ. ಕಟ್ಟೆಯ ಮೇಲೆ ಕೆಲವು ಜನರು ಚಾಪೆಗಳ ಮೇಲೆ ಅಡ್ಡಾಗಿದ್ದರು. ಅವರು ಕಾವಲು ಪಡೆಯ ಸೈನಿಕರಂತೆ ಉಡುಪು ಧರಿಸಿದ್ದರು. ಅವರಲ್ಲಿ ಒಬ್ಬ ಎದ್ದು ಕುಳಿತು, ಆಕಳಿಸುತ್ತ, "ಏನೋ, ಇನ್ನೂ ಎಷ್ಟು ಹೊತ್ತು ಮಲಗು-ತ್ತೀರಿ? ಸೂರ್ಯ ಆಗಲೆ ಪಶ್ಚಿಮದತ್ತ ಸಾಗಿದ್ದಾನೆ," ಅಂದ.

ಮತ್ತೊಬ್ಬ ಉತ್ತರಿಸಿದ: "ಎಷ್ಟು ಹೊತ್ತು ಮಲಗಿದರೇನು? ಕೆಲಸವಂತೂ ಇಲ್ಲವಲ್ಲ! ಮಹಾರಾಣಿ ಅವರ ಮನೆಮಾರು ಸುರಕ್ಷಿತವಾಗಿರುವವೆಂದು ಗ್ರಾಮಸ್ಥರಿಗೆ ಭರವಸೆ ನೀಡಿದ್ದಾರೆ. ಅದಕ್ಕೆಂದೆ ನಮ್ಮ ಕಾರ್ಯ ನಿಂತು ಬಿಟ್ಟಿತು. ನಿಧಾನವಾಗಿ ತಿರುಗಿ ಹೋಗೋಣ."

ಅಷ್ಟರಲ್ಲಿ ಕುದುರೆಯ ಖುರಪುಟದ ಶಬ್ದ ಹಾಯಿತು. ಅಶ್ವಾರೋಹಿಯಾದ ಸೇನಾನಾಯಕ ಭರದಿಂದ ಬರುತ್ತ ಕೋಪಾವೇಶದಿಂದ ಕೂಗಿದ: "ಇದೇನು ಪ್ರಮಾದ! ಮೂರ್ಖರೇ! ಇಲ್ಲಿ

ತಮಾಷೆಗೆಂದು ಬಂದಿರುವಿರಾ? ಇದೇನು ವನ ವಿಹಾರವೇ? ಗಾನ, ನೃತ್ಯ ಕಾರ್ಯಕ್ರಮವೇ? ಅಥವಾ ದುರ್ಗದ ಕಾರ್ಯಕ್ಕಾಗಿ ನಿಮ್ಮನ್ನು ಇಲ್ಲಿ ಕಳಿಸಿರುವೆನೋ?"

ಸೈನಿಕನೊಬ್ಬ ವಿನಯದಿಂದ ಉತ್ತರಿಸಿದ: "ಸ್ವಾಮಿ ಗ್ರಾಮವಾಸಿಗಳಿಗೆ ಮಹಾರಾಣಿಯ ಆಶ್ವಾಸನ ಲಭಿಸಿದೆ–ಈ ಸ್ಥಳದಲ್ಲಿ ದುರ್ಗವನ್ನು ಕಟ್ಟಲಾಗುವದಿಲ್ಲ ಎಂದು. ಅವರ ಮನೆಮಾರುಗಳನ್ನು ಕೆಡವತಕ್ಕದ್ದಲ್ಲವಂತೆ. ಅದಕ್ಕೆ ಸ್ವಾಮೀ..."

ಸೇನಾನಾಯಕ ರೋಷಗೊಂಡು ಕುದುರೆಯಿಂದ ಜಿಗಿದ, "ಮಹಾರಾಣಿಯ ಆಜ್ಞೆ ನನಗೆ ಗೊತ್ತಿಲ್ಲವೇ? ಮಹಾಸೇನಾಪತಿಗೆ ಗೊತ್ತಿಲ್ಲವೆ? ನಾಳೆಯಿಂದ ಇಲ್ಲಿ ಕೋಟೆ ಕಟ್ಟುವ ಕಾರ್ಯ ಖಂಡಿತ ಆರಂಭವಾಗುವದು. ತಿಳಿಯಿತೇ? ಈ ಗುಡಿಸಲುಗಳನ್ನೆಲ್ಲ ಸುಟ್ಟು ಹಾಕಿ. ಯಾರಾದರೂ ಅಡ್ಡಗಟ್ಟಿದರೆ ಅವರನ್ನು ಕಟ್ಟಿಹಾಕಿ ಚಬುಕದಿಂದ ಥಳಿಸಿ!" ಎಂದು ಗರ್ಜಿಸಿದ.

ಸೈನಿಕರೆಲ್ಲ ಸಿದ್ಧರಾದರು. ಗ್ರಾಮಸ್ಥರು ಕೈ ಮುಗಿದು, ಕಾಲು ಹಿಡಿಯುತ್ತ, ಕೃಪೆಗಾಗಿ ದೈನ್ಯದಿಂದ ಕೋರಿದರು. ಸೇನಾನಾಯಕ ಮತ್ತಷ್ಟು ಕ್ರೋಧಾವಿಷ್ಟನಾದ. ತಕ್ಷಣ ಅವರ ಗುಡಿಸಲುಗಳಿಗೆ ಕಿಚ್ಚಿಡಲು ಸೈನಿಕರಿಗೆ ಆದೇಶ ನೀಡಿದ. ಗ್ರಾಮದ ಸ್ತ್ರೀ ಪುರುಷರು, ಮಕ್ಕಳು ಮರಿಗಳು ಅಳುತ್ತ ಗೋಳಾಡಿದರು. ಸೈನಿಕರು ಒಬ್ಬ ಗ್ರಾಮಸ್ಥನನ್ನು ಹಿಡಿದು ಅವನ ಕೈಕಾಲು ಕಟ್ಟಿ, ಚಬುಕದಿಂದ ಥಳಿಸಹತ್ತಿದರು. ನಂತರ ಗುಡಿಸಲಿನ ಚಪ್ಪರವೊಂದಕ್ಕೆ ಕೊಳ್ಳಿಯಿಟ್ಟರು.

ಅಷ್ಟರಲ್ಲಿ ಆನೆಯ ಗಂಟೆಗಳು ಬಾರಿಸಿದ ಶಬ್ದವಾಯಿತು. ಆನೆಯ ಮೇಲಿದ್ದ ಕಂಚುಕಿ ಗಟ್ಟಿಯಾಗಿ ಕೂಗಿದ. "ತಡೆಯಿರಿ! ತಡೆಯಿರಿ!

ಈ ನೀಚಚರಿತರಿಗೆ ಅನ್ಯಾಯವಾಗಕೂಡದು! ಇದು ಮಹಾರಾಣಿಯ ಆಜ್ಞೆ!"

ಅಲ್ಲಿ ನೆರೆದ ಜನರೆಲ್ಲ ಸ್ತಂಭೀಭೂತರಾದರು. ಆನೆಯಿಂದ ಕೆಳಗಿಳಿದು, ಉದ್ದಾಲ ಮತ್ತು ಅಮಿತಾ ಮುಂದೆ ಬಂದರು. ಆ ಭೀಕರ ದೃಶ್ಯವನ್ನು ಕಂಡು ಅಮಿತಾಳ ಕಣ್ಣುಗಳು ಭಯಪೂರಿತವಾದವು. ಅವಳ ಎಳೆಯ ದುಂಡು ಮುಖ ವಿವರ್ಣವಾಗಿತ್ತು.

"ಸೈನಿಕರು ಜನರನ್ನೇಕೆ ಬೆದರಿಸುತ್ತಿರುವರು? ಅವರನ್ನು ಏಕೆ ಹೊಡೆಯುತ್ತಿದ್ದಾರೆ?" ಎಂದು ಆಶ್ಚರ್ಯದಿಂದ ಕೇಳಿದಳು.

ಸೇನಾನಾಯಕ ನಮ್ರತೆಯಿಂದ ಮೆಲ್ಲನೆ ನುಡಿದ: "ಯುವರಾಜ್ಞಿಗೆ ಜಯವಾಗಲಿ! ಇದು ಬೆದರಿಸುವುದು, ಹೊಡೆಯುವುದು ಅಲ್ಲ. ರಾಜಕುಮಾರಿ. ನಾವು ರಾಜ್ಯದ ಸುರಕ್ಷಿತತೆಗಾಗಿ ಏರ್ಪಾಟು ಮಾಡುತ್ತಿದ್ದೇವೆ."

ಅಮಿತಾ ಬಾಲಿಶಭಾವದಿಂದ ಪ್ರತಿಭಟಿಸಿದಳು: "ಇಲ್ಲ ಇಲ್ಲ. ನೀವು ಅವರನ್ನು ಹೊಡೆಯುತ್ತಿದ್ದೀರಿ! ಇದೆಂಥ ಸಂರಕ್ಷಣೆ?"

"ಇಲ್ಲ ಯುವರಾಜ್ಞಿ. ಮಹಾರಾಣಿಯವರ ಆಜ್ಞೆಯ ಪ್ರಕಾರ ಇದು ಯುದ್ಧದ ಪೂರ್ವಸಿದ್ಧತೆ."

ಅಮಿತಾಳಿಗೆ ನಂಬಿಕೆ ಆಗಲಿಲ್ಲ. "ಓಹ್, ಹಾಗಾದರೆ ಇದು ಒಂಥರ ಆಟ! ಸರಿ, ನಾನೂ ಈ ಆಟ ಆಡುವೆ," ಎನ್ನುತ್ತ ಸೈನಿಕನ ಕೈಯಿಂದ ಚಬುಕ ತೆಗೆದುಕೊಂಡು ಸೇನಾನಾಯಕನ ಬೆನ್ನ ಮೇಲೆ ಏಟು ಹಾಕಲು ಪ್ರಯತ್ನಿಸಿದಳು.

ಸೇನಾನಾಯಕ ಸ್ಕಂದ ಅಸಹಾಯಕನಾಗಿ ನಿಂತಿದ್ದ. ಇದು ಅವನಿಗೆ ಅಸಹನೀಯ ಅಪಮಾನವಾಗಿತ್ತು. ಸುಮ್ಮನೆ ಅಧೋಮುಖನಾಗಿ ನಿಂತಿದ್ದ. ಸೈನಿಕರು, ಗ್ರಾಮಸ್ಥರೆಲ್ಲ ಭಯಾಕ್ರಾಂತರಾಗಿದ್ದರು. ಅಮಿತಾ ಮಾತ್ರ ಈ ಹೊಸ

ಆಟವಲ್ಲಿ ತಲ್ಲೀನಳಾಗಿದ್ದಳು. ಅನಂತರ ಸ್ಕಂದ ನಿಗೆ ಹೇಳಿದಳು: "ಈಗ ನಿನ್ನ ಸರತಿ. ಇನ್ನು ನನ್ನ ಬೆನ್ನ ಮೇಲೆ ನೀನು ಏಟು ಹಾಕು; ಆಟ ಹೇಗಿದೆ. ನೋಡುವಾ."

ಎಲ್ಲರೂ ದಿಗ್ಭ್ರಾಂತರಾದರು. ಗ್ರಾಮಸ್ಥರು ಥರಥರ ನಡುಗಿದರು. ಸೇನಾನಾಯಕ ಕಣ್ಣು ತಗ್ಗಿಸಿ, "ಭಗವತಿ ರಾಜಕುಮಾರಿ, ಈ ದಾಸ ಅಯೋಗ್ಯ ರೀತಿಯಲ್ಲಿ ವರ್ತಿಸಲಾರ," ಎಂದ.

ಅಮಿತಾ ಮತ್ತೊಬ್ಬ ಸೈನಿಕನನ್ನು ಕೇಳಿದಳು. ಆತನೂ ಅವಳ ಬೇಡಿಕೆಯನ್ನು ಪೂರೈಸಲಾರದೆ ಕ್ಷಮಾಪಣೆ ಕೋರಿದ. ಕೊನೆಗೆ, "ಸರಿ. ನಾನೊಬ್ಬಳೇ ಆಡುವೆ," ಅನ್ನುತ್ತ ಅಮಿತಾ ಚಬುಕದಿಂದ ತನ್ನ ಬೆನ್ನಿಗೆ ಬಡಿದುಕೊಂಡಳು.

ತಕ್ಷಣ ವಿಪರೀತ ವೇದನೆಯಿಂದ ಒದ್ದಾಡಿ ಕಣ್ಣೀರು ಸುರಿಸಹತ್ತಿದಳು. ಸೇನಾನಾಯಕನತ್ತ ಕೋಪದಿಂದ ನೋಡುತ್ತ, "ಇದು ತುಂಬಾ ಕೆಟ್ಟ ಆಟ. ನೀನು ಭಾರಿ ದುಷ್ಟ. ಅವರನ್ನು ಬೆದರಿಸಿ ಹೊಡೆಯುವಿ. ನಿನ್ನನ್ನು ಶಿಕ್ಷಿಸುವೆ. ಬಭ್ರುವಿನಂತೆ ನಿನ್ನನ್ನು ಸರಪಣಿಯಿಂದ ಬಂಧಿಸುವೆ."

ಹಿತಾ ರಾಜಕುಮಾರಿಯನ್ನು ಎತ್ತಿಹಿಡಿದಳು. ಸೇನಾನಾಯಕ ಸ್ಕಂದನ ಕೊರಳಿಗೆ ಅಮಿತಾ ನಾಯಿಯ ಸರಪಣಿಯನ್ನು ಬಿಗಿದು ಆನೆಯತ್ತ ಎಳೆದುಕೊಂಡು ನಡೆದಳು. ಕೋಪ, ಅಪಮಾನಗಳಿಂದ ಸ್ಕಂದ ಕಂಪಿಸಿದ. ನಿಸ್ಸಹಾಯನಾಗಿ ಈ ವಿಧಿವಿಲಾಸವನ್ನು ಸಹಿಸಿದ ಅವನಿಗಿದು ಮರಣಕ್ಕಿಂತ ಮಿಗಿಲಾದ ಯಾತನೆಯಾಗಿತ್ತು.

ಸಂಧ್ಯಾಸಮಯ. ಮಹಾರಾಣಿ ಪ್ರಾರ್ಥನೆಯಲ್ಲಿ ನಿರತಳಾಗಿದ್ದಳು. ಭಗವಾನ್ ಬುದ್ಧನ ಅವಶೇಷಗಳಿರುವ ಕಲಶದ ಮುಂದೆ ಸುಗಂಧ ಧೂಪ, ತುಪ್ಪದ ದೀಪ ಹಚ್ಚಿಟ್ಟು ಆರತಿ ಬೆಳಗಿದ್ದಳು. ಅನಂತರ ಧರ್ಮಗ್ರಂಥಗಳ ಪಠಣಮಾಡಲು ಚಾಪೆಯ ಮೇಲೆ ಕುಳಿತಳು. ಆ ವೇಳೆ ಅಮಿತಾ ನಗುತ್ತ, ನೆಮ್ಮದಿಯಿಂದ ಕೋಣೆಯಲ್ಲಿ ಧುಮುಕಿದಳು. ಅವಳ ಹಿಂದೆ ಸರಪಣಿಯಿಂದ ಬಂಧಿತನಾದ ಸ್ಕಂದ ಅಸಹಾಯಕನಾಗಿ ಎಳೆಯಲ್ಪಡುತ್ತಿದ್ದ. ಅವನ ಅವನತ ಮುಖ ಬಿಳಿಚಿಕೊಂಡಿತ್ತು. ಅಮಿತಾ ಆತನನ್ನು ಬಂಧಿಸಿದ ಕಾರಣವನ್ನು ತಾಯಿಗೆ ವಿವರಿಸಿದಳು.

ಮಹಾರಾಣಿಯ ಮುಖ ವಿಸ್ಮಯಗೊಂಡಿತು. "ಮಗು, ನಿನಗೆ ಹುಚ್ಚು ಹಿಡಿದಿದೆಯೋ? ಬಿಟ್ಟು ಬಿಡು. ಸದ್ಯ ಬಿಟ್ಟು ಬಿಡು. ಅತ ಹೋಗಲಿ," ಎಂದು ಆದೇಶಿಸಿದಳು.

"ಇಲ್ಲಮ್ಮಾ. ಅತ ಭಾರಿ ದುಷ್ಟ. ಪಾಪ ಜನರನ್ನು ಹೊಡೆದು ಬಡಿದು ಬೆದರಿಸುವನು." ಅಮಿತಾ ಸಾಧಿಸಿದಳು.

"ಅವರೆ ಮಗೂ, ಇಂದೆಂಥ ಮೂರ್ಖತನ?" ಎಂದು ಮಹಾರಾಣಿ ಆಕ್ಷೇಪಿಸಿದಳು, "ಮನುಷ್ಯರನ್ನು ಪಶುಗಳಂತೆ ಬಂಧಿಸಬಾರದು. ಉದ್ದಾಲ ಆಕೆ ಮಗು, ನೀನಾದರೂ ಇದಕ್ಕೆ ಹೇಗೆ ಸುಮ್ಮನಿದ್ದೆ? ಕೂಡಲೆ ಸರಪಣಿ ಬಿಚ್ಚಿಬಿಡು."

ಉದ್ದಾಲ ಸ್ಕಂದನನ್ನು ಬಂಧವಿಮುಕ್ತಗೊಳಿಸಿದ ನಂತರ, ಮಹಾರಾಣಿ ವಿಚಾರಿಸಿದಳು: "ಸರಿ ಏನು ಸಮಾಚಾರ? ಪ್ರಜೆಗಳ ನ್ಯಾಯ ವಿಷಯ ಏನಾಯಿತು?"

ಅತ ತಲೆ ಬಾಗಿ ಎಲ್ಲವನ್ನೂ ವಿವರಿಸಿದ. ವೇಣುಕ ಗ್ರಾಮದಲ್ಲಿ ನಡೆದ ಆ ಭೀಷಣ ವೃತ್ತಾಂತವನ್ನು ಕೇಳಿ, ಮಹಾರಾಣಿ ಅಸಮಾಧಾನ ಪಟ್ಟಳು. "ಇಲ್ಲ ಇಲ್ಲ, ಅನ್ಯಾಯ ಮಾರ್ಗದಿಂದ ರಾಜ್ಯ ಹಾಗೂ ಪ್ರಜೆಗಳ ರಕ್ಷಣೆ ಸಲ್ಲದು. ಯುದ್ಧ ಮತ್ತು ಹಿಂಸೆ ನಡೆಯಲಾರದು. ಭಗವಂತನ ಕೃಪೆಯ ಮೇಲೆ ಭರವಸೆ ಇಡತಕ್ಕದ್ದು. ಕಳಿಂಗದೇಶದಲ್ಲಿ ಹಿಂಸೆ ಆಗಲಾರದು. ಧರ್ಮಪಾಲನೆ ಆಗತಕ್ಕದ್ದು. ಇದು ನಮ್ಮ ಆಜ್ಞೆ. ಭಗವಾನ್ ಬುದ್ಧನ ಆದೇಶ."

ಮಧ್ಯರಾತ್ರಿಯ ವೇಳೆ ಮಹಾಸೇನಾಪತಿ ಆರ್ಯ ಭದ್ರಕೀರ್ತಿಯು ಮಹಾಮಾತ್ಯ ಆಚಾರ್ಯ ಸುಕಂಠನ ನಿವಾಸಕ್ಕೆ ಆಗಮಿಸಿದ. ಮಹಾರಾಜ ಕರವೇಲನ ತಂದೆಯ ಕಾಲದಿಂದಲೂ ಆಚಾರ್ಯ ಸುಕಂಠ ರಾಜ್ಯಾಡಳಿತದ ಹೊಣೆ ನಿರ್ವಹಿಸುತ್ತಿದ್ದ. ಮುಂಬರುವ ಯುದ್ಧದ ಆಪತ್ತಿನ ನಿಮಿತ್ತ ಆರ್ಯ ಭದ್ರಕೀರ್ತಿ ಆಗಾಗ್ಗೆ ಅತನ

ಸಲಹೆ ಕೇಳಲು ಬರುತ್ತಿದ್ದ. ಆದರೆ ಹೆಚ್ಚಾಗಿ ಮಧ್ಯಾಹ್ನದ ಹೊತ್ತಿನಲ್ಲಿ ಬರುವುದೇ ವಾಡಿಕೆ.

ಅಂದು ರಾತ್ರಿ ಅವನು ಬಂದ ಕಾರಣವೇನೆಂದರೆ ಆತನನ್ನು ಆವರಿಸಿದ್ದ ವಿಶೇಷ ಚಿಂತೆ. ಪ್ರಕ್ಷುಬ್ಧ ಮನಸ್ಸಿನಲ್ಲಿ ಮಹಾಮಾತ್ಯನನ್ನು ವಿಚಾರಿಸಿದ, "ಆಚಾರ್ಯ ಅಶೋಕನ ವಿರುದ್ಧ ನಾವು ರಾಜ್ಯವನ್ನು ಹೇಗೆ ಸಂರಕ್ಷಿಸುವದು? ಹೋದ ಸಲಕ್ಕಿಂತ ಆತನ ಸೈನ್ಯ ನಾಲ್ಕು ಪಟ್ಟು ಹೆಚ್ಚಾಗಿದೆ. ನಮಗೆ ಯುದ್ಧ ಮಾಡಲು ಸರಿಯಾದ ನಿಲುವು ಇಲ್ಲದಿದ್ದರೆ,ನಮ್ಮ ಗತಿಯೇನು?"

ಆಚಾರ್ಯ ಸುಕಂಠ ಆತನಿಗೆ ಭರವಸೆ ನೀಡಿದ. ಆರ್ಯ," ಚಾಲುಕ್ಯ ಹಾಗೂ ದಕ್ಷಿಣಾಪಥಗಳಿಂದ ಅಧಿಕ ಶಸ್ತ್ರಾಸ್ತ್ರಗಳನ್ನೂ ಸೈನಿಕರನ್ನೂ ತರಿಸುವ ವ್ಯವಸ್ಥೆ ಮಾಡಿರುವೆ. ಅವು ಇನ್ನು ಬಹುಬೇಗನೇ ಬಂದುಬಿಡುವವು."

ಧರ್ಮಕೀರ್ತಿ ಅತ್ಯಂತ ವ್ಯಾಕುಲತೆಯಿಂದ ಕೈಕೈ ಹಿಸುಕಿಕೊಂಡ."ಆಚಾರ್ಯ, ಕೇವಲ ಶಸ್ತ್ರಾಸ್ತ್ರಗಳು, ಸೈನಿಕರಿಂದ ಏನು ಪ್ರಯೋಜನ? ಪಟ್ಟಣದ ಒಳಗೆ ಐವತ್ತು ಯೋಜನಗಳಷ್ಟು ದೂರದಿಂದ ಆತನ ಆಕ್ರಮಣವನ್ನು ನಾವು ಹೇಗೆ ತಡೆಗಟ್ಟುವದು? ನಗರದ ಪ್ರಾಕಾರದ ಹೊರಗಡೆಯೇ ನಾವು ಆತನ ಬಲವನ್ನು ಎದುರಿಸಬೇಕು. ಅದಕ್ಕೆ ಉತ್ತರದ್ವಾರದ ದುರ್ಗವೇ ನಮಗೆ ಮೂಲಾಧಾರ... ಆದರೆ ಆಚಾರ್ಯ, ನೀವೇನೂ ಸಮಾಚಾರ ಕೇಳಿಲ್ಲವೆ?"

ಆಚಾರ್ಯ ಸುಕಂಠ ಸುಮ್ಮನೆ ಅವನತ್ತ ಪ್ರಶ್ನಾರ್ಥಕ ನೋಟ ಬೀರಿದ.

"ಇದೇನು ವಿಚಿತ್ರ! ನೀವು ಕೇಳಿಲ್ಲವೆ?" ಧರ್ಮಕೀರ್ತಿ ಹೇಳಿದ, "ವೇಣುಕ ಗ್ರಾಮದಲ್ಲಿ ಸೈನಿಕ ಶಿಬಿರವನ್ನು ರಚಿಸುವ ಏರ್ಪಾಟನ್ನು ನೀವೂ ಒಪ್ಪಿದ್ದಿರಿ. ಸದ್ಯ ಮಹಾರಾಣಿ ಅಲ್ಲಿ ಕೋಟೆ ಕಟ್ಟುವದನ್ನು ನಿರ್ಬಂಧಿಸಿದ್ದಾರಂತೆ."

ಮಹಾಮಾತ್ಯ ಹುಬ್ಬು ಏರಿಸಿದ. ಆತನ ಹಣೆಯ ಮೇಲಿನ ರೇಖೆಗಳು ಇನ್ನಷ್ಟು ಆಳವಾದವು. "ಆರ್ಯ, ಇದೇನು ಹೇಳುತ್ತಿರುವಿರಿ. ಮಹಾರಾಣಿಗೆ ತಥಾಗತನ ಧರ್ಮಪಾಲನೆ, ಹಾಗೂ ಸಂಘದ ಸೇವೆಯೊಂದೇ ಜೀವನ ಧ್ಯೇಯ. ಸೈನಿಕ ಶಿಬಿರದ ವಿಷಯಗಳಲ್ಲಿ ಅವರಿಗೆಂಥ ಆಸಕ್ತಿ?"

ಭದ್ರಕೀರ್ತಿ ಸ್ಪಷ್ಟಪಡಿಸಿದ: "ಇಂದು ಬೆಳಿಗ್ಗೆ ವೇಣುಕ ಗ್ರಾಮನಿವಾಸಿಗಳು ದೇವಾಲಯಕ್ಕೆ ಹೋಗಿ ಮಹಾರಾಣಿಯವರಿಗೆ ಮೊರೆಯಿಟ್ಟರಂತೆ. ಮಹಾರಾಣಿ ಅವರಿಗೆ ಭರವಸೆ ನೀಡಿ, ಕಂಚುಕಿಯ ಮುಖಾಂತರ ಗ್ರಾಮದ ಗುಡಿಸಲುಗಳನ್ನು ಕೆಡವದಂತೆ ನಿಷೇಧಾಜ್ಞೆ ಕಳಿಸಿದರಂತೆ. ಆಚಾರ್ಯ. ಮತ್ತೇನಾಯಿತು ಗೊತ್ತೆ? ಮಹಾರಾಣಿಯವರು ಕಂಚುಕಿಯೊಡನೆ ರಾಜಕುಮಾರಿಯನ್ನೂ ಕಳಿಸಿದರು. ಆಕೆ ಸೇನಾನಾಯಕ ಸ್ಕಂದನ ಕೊರಳಿಗೆ ನಾಯಿಸರಪಣಿ ಬಿಗಿದು ಎಳೆದುಕೊಂಡು ಹೋದಳು. ಸ್ಕಂದನಿಗೆ ಆತ್ಮಹತ್ಯೆ ಮಾಡಿಕೊಳ್ಳುವಷ್ಟು ವಿಪರೀತ ಅವಮಾನವಾಯಿತು. ಆ ಮುಗ್ಧ ಬಾಲಿಕೆಯ ಏನೋ ಹುಚ್ಚಾಟವೆಂದು ನಾನೇ ಅವನನ್ನು ಸಂತೈಸಿದೆ. ಆಚಾರ್ಯ, ಮಹಾರಾಣಿ ಹೀಗೆ ಸೈನಿಕರನ್ನು ಅವಮಾನಿಸಿದರೆ ರಾಜ್ಯ ಹೇಗೆ ಸುರಕ್ಷಿತವಾಗಿರುವದು? ಮಹಾರಾಣಿ ಸಂನ್ಯಾಸಿಗಳನ್ನು ಬೇಕಾದಷ್ಟು ಆದರಿಸಬಹುದು. ಆದರೆ ಸೈನಿಕರನ್ನು ಅವಮಾನಿಸುವದೇಕೆ?"

ಆಚಾರ್ಯ ಸುಕಂಠ ಚಿಂತೆಗೊಳಗಾಗಿದ್ದರೂ ಶಾಂತವಾಗಿ ನುಡಿದ, "ಆಚಾರ್ಯ, ಬೌದ್ಧ ಶ್ರಮಣರು ಪರಲೋಕದ ಚಿಂತೆಯಷ್ಟೇ ಅಲ್ಲದೆ ಇಹಲೋಕದ ಕಾರ್ಯಭಾರವನ್ನೂ ನಿರ್ವಹಿಸಬಯಸುವರು. ಅವರೇ ವೇಣುಕಗ್ರಾಮಸ್ಥರಿಗೆ ಚಿತಾವಣೆ ಮಾಡುತ್ತಿರಬಹುದು. ಈ ಘಟನೆಯ ಮೂಲಸೂತ್ರವನ್ನು ಶೋಧಿಸಲೇಬೇಕು. ಅಜ್ಞಾತ ಶತ್ರುವೇ ಅಧಿಕ ಅಪಾಯಕಾರಿ, ಅಲ್ಲವೆ?"

"ಆಚಾರ್ಯ, ನಗರದ ರಕ್ಷಣೆಗೆ ಆ ಬೆಟ್ಟದ ಮೇಲೊಂದು ದುರ್ಗ ಅತ್ಯವಶ್ಯ. ದೇಶರಕ್ಷಣೆ ಮಾಡುವವರು ಯಾರು? ಯೋಧರೋ ಅಥವಾ ಭಿಕ್ಷಾಪಾತ್ರೆ ಹಿಡಿದುಕೊಂಡ ಬೌದ್ಧ ಶ್ರಮಣರೋ?'

ಆಚಾರ್ಯ ವಿಚಾರಮಗ್ನನಾಗಿದ್ದ. ರಾಜ್ಯಾಡಳಿತದಲ್ಲಿ ಮಹಾರಾಣಿಯ ಧರ್ಮತತ್ವಗಳು ಅಡ್ಡ ಬಂದರೆ ರಾಜ್ಯಪಾಲನೆಗೆ ಆತಂಕ ಉಂಟಾಗುವದು. ಆರ್ಯ, ನಾನು ಇಂದೇ ಈ ವಿಷಯ ಕುರಿತು ಮಹಾರಾಣಿಯೊಡನೆ ಚರ್ಚಿಸುವೆ." ಎಂದು ಸೇನಾಪತಿಗೆ ಭರವಸೆ ನೀಡಿದ.

ಅರಮನೆಯ ಸಭಾಭವನದಲ್ಲಿ ಆಚಾರ್ಯ ಸುಕಂಠನು ಮಹಾರಾಣಿಯ ಪ್ರತೀಕ್ಷೆಯಲ್ಲಿದ್ದ. ಕೆಲ ಹೊತ್ತಿನ ಮೇಲೆ ಮಹಾರಾಣಿ ಅಲ್ಲಿಗೆ ಆಗಮಿಸಿ ಸಿಂಹಾಸನದ ಮೇಲೆ ಸಂಕೋಚದಿಂದ ಆಸೀನಳಾದಳು. ಮಹಾಮಾತ್ಯ ಅವಳಿಗೆ ಅಭಿನಂದಿಸಿ ಆಶೀರ್ವದಿಸಿದ. ಮಹಾರಾಣಿ ಕ್ಷಣಮಾತ್ರ ಯೋಚಿಸಿ ಅಂದಳು: "ಮಹಾಮಾತ್ಯ ಆಚಾರ್ಯರೇ ರಾಜ್ಯಾಡಳಿತದಲ್ಲಿ ಅನ್ಯಾಯ ಸಾಗುತ್ತಿರುವದು ತಿಳಿದು ನನಗೆ ದುಃಖವೂ ಅವಿಸ್ಮಯವೂ ಆಯಿತು. ಪ್ರಜೆಗಳು ತಮ್ಮ ಭೂಮಿ ಮನೆಮಾರುಗಳೆಲ್ಲ ನಾಶವಾಗುವವೆಂದು ಭಯಾಕ್ರಾಂತರಾಗಿದ್ದರು. ನಮಗೆ ದುರ್ಗದ ಆಗತ್ಯವಿಲ್ಲ. ಇಂಥ ಅನ್ಯಾಯವನ್ನು ನಿಷೇಧಿಸಿರುವೆ."

ಮಹಾಮಾತ್ಯ ನಮ್ರತೆಯಿಂದ ಉತ್ತರಿಸಿದ: "ಪರಮ ಭಗವತಿ. ಯುದ್ಧದಲ್ಲಿ ಸ್ವರಕ್ಷಣೆಗಾಗಿ ಭದ್ರವಾದ ದುರ್ಗವೇ ರಾಜ್ಯದ ಬಲ ಮತ್ತು ಆಧಾರ. ಪ್ರಬಲ ಅಶೋಕನ ದಾಳಿಯನ್ನು ತಡೆಯಲು ಉತ್ತರ ಬೆಟ್ಟದ ಮೇಲೆ ಕೋಟೆ ಅತ್ಯವಶ್ಯ. ಇಲ್ಲವಾದರೆ ಸಮಗ್ರ ರಾಜಧಾನಿಯನ್ನೇ ಆತ ಕಾಲ ಕೆಳಗೆ ಮೆಟ್ಟಿಬಿಡುತ್ತಾನೆ.'

ಮಹಾರಾಣಿಗೆ ಯುದ್ಧ ವಿಷಯಗಳಲ್ಲಿ ಆಸ್ಥೆಯಿರಲಿಲ್ಲ. "ಆಚಾರ್ಯ. ರಾಜ್ಯದಲ್ಲಿ ಸಾಕಷ್ಟು ಭೂಮಿಯಿದೆ. ನಿಮಗೆ ಬೇಕಾದ ದುರ್ಗ ಅಥವಾ ಶಿಬಿರವನ್ನು ರಚಿಸಬಹುದು. ಆದರೆ ಜನರ ವಾಸಸ್ಥಾನದಲ್ಲಿ, ಅವರ ಮನೆಗಳನ್ನು ನಾಶ ಮಾಡುವದಕ್ಕೆ ನನ್ನ ನಿರ್ಬಂಧವಿದೆ."

"ಪರಮ ಭಗವತಿ, ಸುಮ್ಮನೆ ಎಲ್ಲಿಯಾದರೂ ಕೋಟೆ ಕಟ್ಟಿದರೆ ಅದು ನಿರರ್ಥಕವೆ. ಕೋಟೆ

ಶಿಬಿರಗಳನ್ನು ವಿಶಿಷ್ಟ ಸ್ಥಳಗಳಲ್ಲಿ ರಚಿಸಬೇಕಾಗುವದು. ಅಲ್ಲದೆ, ನಗರದೊಳಗೆ ಇಪ್ಪತ್ತು ಸಾವಿರದಷ್ಟು ಹೆಚ್ಚಿನ ಸೈನಿಕರಿಗೆ ನಾವು ಸ್ಥಳವನ್ನು ಒದಗಿಸಬೇಕಾಗುವದು. ಕಾರಣ ಮಹಾರಾಣಿಗೆ ನನ್ನ ವಿನಂತಿ ಏನೆಂದರೆ–ಪಟ್ಟಣದಲ್ಲಿಯ ಹಳೆಯ ಕೋಟೆಯು ಸೈನಿಕರಿಗೆ ಉಪಲಬ್ಧವಾಗಲಿ. ಸದ್ಯ ಅಲ್ಲಿರುವ ಬೌದ್ಧ ಭಿಕ್ಷುಗಳು ಯುದ್ಧ ಮುಗಿಯುವ ವರೆಗೆ ನಗರದ ಬೇರೆಡೆಗಳಿಗೆ ಸ್ಥಳಾಂತರಗೊಳ್ಳಬಹುದು."

ಮಹಾರಾಣಿ ತಲೆ ಅಲ್ಲಾಡಿಸುತ್ತ, "ಇಲ್ಲ, ಇಲ್ಲ. ಆಚಾರ್ಯ, ಇದು ಸಾಧ್ಯವಿಲ್ಲ. ಶ್ರಮಣರು, ಅರ್ಹಂತರು, ತಪಸ್ಸು, ಧ್ಯಾನ, ಸಾಧನೆಯಲ್ಲಿ ಯಾವ ಆತಂಕವನ್ನೂ ಅನುಭವಿಸಬಾರದು."

ಆಚಾರ್ಯ ಕೆಲ ನಿಮಿಷ ಮೌನವಾಗಿದ್ದ ರಾಣಿಯ ಈ ಛಲದಿಂದ ಆತ ವ್ಯಸನಪಟ್ಟ. ಇಷ್ಟು ವರ್ಷ ಆತನ ಆಡಳಿತದಲ್ಲಿ ಸ್ವರ್ಗಸ್ಥನಾದ ಮಹಾರಾಜನಾಗಲಿ ಆತನ ತಂದೆಯಾಗಲಿ ತನ್ನ ಸಲಹೆಯನ್ನು ಎಂದೂ ಮೀರಿದ್ದಿಲ್ಲ. ತನ್ನ ಭಾವನೆಗಳನ್ನು ಹತ್ತಿಕ್ಕಿ, ಇನ್ನಿಷ್ಟು ವಿನಂತಿಸಿದ: "ಆಧ್ಯಾತ್ಮಿಕ ಧ್ಯಾನ, ಚಿಂತನ, ಮರಗಳ ಕೆಳಗೊ, ಗುಹೆಗಳೊಳಗೊ ಸಾಧಿಸಬಹುದೆಂದು ಪರಮಭಗವತಿ ಬಲ್ಲರು. ಭಗವಾನ್ ಬುದ್ಧ ಆಲದ ಮರದ ಕೆಳಗೆ ಕುಳಿತು ನಿರ್ವಾಣ ಪಡೆದ. ಆದರೆ ಸೈನಿಕನು ದುರ್ಗದ ವಿನಾ ಶಕ್ತಿಹೀನನಾಗುವನು. ದಯಾಮಯಿ, ಪ್ರಜೆಗಳ ರಕ್ಷಣೆಗಾಗಿ ಆ ಕೋಟೆ ಅತ್ಯವಶ್ಯ. ಇಲ್ಲವಾದರೆ ಪ್ರಚಂಡ ಅಶೋಕನ ಪ್ರಬಲ ಸೈನ್ಯ ರಾಜ್ಯದ ಸರ್ವನಾಶ ಮಾಡುವದು."

ಮಹಾರಾಣಿ ದೃಢನಿಶ್ಚಯದಿಂದ ನುಡಿದಳು: "ಆಚಾರ್ಯ, ಅಶೋಕ ನಾಳೆ ಮಾಡುವದನ್ನು ನೀವು ಇಂದೇ ಮಾಡಬೇಕೆನ್ನುವಿರಲ್ಲ! ಅಶೋಕ ಪಾಪಕೃತ್ಯ ಮಾಡಿದರೆ ತನ್ನ ಪಾಪಕರ್ಮದ

ಫಲ ಅನುಭವಿಸುವನು. ಆದರೆ ಆತನ ಹಿಂಸಾತ್ಮಕಕೃತ್ಯವನ್ನು ವಿರೋಧಿಸಲು ನಾನು ಮಾತ್ರ ಪಾಪಕೃತ್ಯ ಮಾಡಲಾರೆ. ಆಚಾರ್ಯ, ಪರಮಾತ್ಮನ ಕೃಪೆಯಲ್ಲಿ ವಿಶ್ವಾಸವಿಡಿ."

ಮಹಾಮಾತ್ಯ ಬಹಳ ಹೊತ್ತು ಮೌನವಾಗಿದ್ದ. ಬಳಿಕ, "ಪರಮಭಗವತಿ, ದೇವರ ಮಹಾಮಾಯೆಯನ್ನು ಯಾರೂ ಉಪೇಕ್ಷಿಸಲಾರರು. ಪರಮಾತ್ಮ ಒಪ್ಪಿಸಿದ ಕಾರ್ಯವನ್ನು ಪೂರೈಸುವದೇ ಮಾನವನ ಕರ್ತವ್ಯ. ಇದೇ ಧರ್ಮ, ಕರ್ಮಮಾರ್ಗವೆಂದು ಜ್ಞಾನಿಗಳು ನುಡಿದಿದ್ದಾರೆ. ಈ ಮಾರ್ಗದಿಂದ ಇಹಲೋಕ ಪರಲೋಕ, ಎರಡೂ ಪ್ರಾಪ್ತವಾಗುವವು," ಎಂದ.

"ಇಹಲೋಕ, ಅಥವಾ ಪರಲೋಕಕ್ಕೆ ಆಸೆ ಪಡುವುದು ಲೋಭ. ಅದು ಕರ್ಮನಿಷ್ಠೆ ಅಲ್ಲ; ಕೇವಲ ಮಾಯೆ. ಜ್ಞಾನೋದಯವು ಲೋಭದಿಂದ ಲಭಿಸುವದಿಲ್ಲ. ಅದು ನಿರ್ಲಿಪ್ತತೆಯಿಂದ ಪ್ರಾಪ್ತವಾಗುವ ಪರಮಾನಂದ.

"ಪರಮ ಭಗವತಿ, ಸ್ವರ್ಗೀಯ ಮಹಾರಾಜರು ತಮ್ಮ ರಾಜ್ಯವನ್ನು ರಕ್ಷಿಸಲು ಪ್ರಾಣಾರ್ಪಣೆ ಮಾಡಿದರು. ಈಗ ನಾವು ಕಳಿಂಗವನ್ನು ಅಲಕ್ಷಿಸಿದರೆ ಸ್ವರ್ಗಸ್ಥರಿಗೆ ಸಂತಾಪವಾಗಲಾಗದೆ?" ಎಂದ– ಆಚಾರ್ಯ ಮಹಾರಾಜರ ಸ್ಮರಣೆಯಿಂದ ಮಹಾರಾಣಿಯ ಮನ ಕರಗಿಸಬೇಕೆಂದು.

ಆದರೆ ಆಕೆ ಮತ್ತಷ್ಟು ದೃಢಸಂಕಲ್ಪದಿಂದ ನುಡಿದಳು: "ಆಚಾರ್ಯ, ನೀವು ಭಯದಿಂದ ವಿಮುಕ್ತರಾಗಬೇಕು. ಅಶೋಕ ಸಮಸ್ತ ಲೋಕವನ್ನೂ ಜಯಿಸಬಹುದು. ಆದರೆ ಆತ ಭಯವಿಮುಕ್ತನಾಗಲಾರ. ಆತ ಪರಾಜಿತನೆ. ಕಾಮ, ಲೋಭಗಳನ್ನು ಜಯಿಸಿ, ನಿರ್ಭೀತನಾದವನೇ ನಿಜವಾದ ವಿಜಯಿ...ಈ ಆಪತ್ತನ್ನು ನಿವಾರಿಸಲು ನಾನು ಒಂದು ಸಾವಿರ ಯತಿಗಳಿಂದ ರಕ್ಷಾಮಂತ್ರ ಪಠಣವನ್ನು ಏರ್ಪಡಿಸುವೆ."

ಆಚಾರ್ಯ ಮತ್ತೆ ಮುಂದುವರೆದ : "ಕಳಿಂಗ ಸಾಮ್ರಾಜ್ಯವನ್ನು ರಕ್ಷಿಸುವುದು ನನ್ನ ಕರ್ತವ್ಯ; ಅದು ಲೋಭವಲ್ಲ. ಅದಕ್ಕೆ ಪರಮ ಭಗವತಿ ನನ್ನ ಕಾರ್ಯಪಥದಲ್ಲಿ ಆತಂಕಪಡಿಸಬಾರದೆಂದು ಪ್ರಾರ್ಥಿಸುವೆ..."

ಮಹಾರಾಣಿ ಮಧ್ಯೆ ಬಾಯಿ ಹಾಕಿದಳು, "ಆಚಾರ್ಯ, ಹಿಂಸೆಗೆ ಪ್ರತಿಹಿಂಸೆ ಕರ್ತವ್ಯ ಅಲ್ಲ. ನಿಮ್ಮ ಕರ್ತವ್ಯ ಪಾಲಿಸಿ, ಆದರೆ ಈ ರಾಜ್ಯ ಪಾಪಕೃತ್ಯದಲ್ಲಿ ಭಾಗವಹಿಸಲಾರದು... ಆಕೆಯ ಕಣ್ಣುಗಳು ಹನಿಗೂಡಿದವು. ಕಣ್ಣು ಮುಚ್ಚಿ ಕರ ಜೋಡಿಸಿ, ಮೆಲ್ಲನೆ ಮಂತ್ರ ಪಠಣ ಆರಂಭಿಸಿದಳು.

ಆಚಾರ್ಯ ಸುಕಂಠ ಏನು ಮಾತಾಡಲೂ ಏನೂ ಮಾಡಲೂ ಅಸಮರ್ಥನಾಗಿ ಸುಮ್ಮನೆ ರಾಜಸಭಾಭವನದಿಂದ ನಿರ್ಗಮಿಸಿದ.

೩

ರಾಜಕುಮಾರಿ ಅಮಿತಾ ಮಧ್ಯಾಹ್ನ ಊಟವಾದ ಮೇಲೆ ನಿದ್ರಿಸುತ್ತಿದ್ದಳು. ಅವಳ ದಾಸಿ ಹಿತಾ ತಾಯಿ ಮಾಪಿಗೆ ಹೇಳಿದಳು.

"ಅಮ್ಮಾ. ರಾಜಕುಮಾರಿ ಎದ್ದ ಬಳಿಕ ನಾವು ಗೊಂಬೆಗಳ ಮದುವೆ ಆಟ ಆಡುವುದಿದೆ. ಅದಕ್ಕೆ ನಾನು ವಿಠಲನ ಅಂಗಡಿಗೆ ಹೋಗಿ ಒಂದು ಹೊಸ ಗೊಂಬೆ ತರುವೆ. ನಾನು ಬರುವುದು ಸ್ವಲ್ಪ ತಡವಾದರೆ ರಾಜಕುಮಾರಿಯನ್ನು ಹೇಗಾದರೂ ಸಂತೈಸುವಿಯಾ?"

ವಿಠಲನ ಅಂಗಡಿಗೆ ಹೋಗುವೆನೆಂದು ಹಿತಾ ಹೇಳಿದಾಗಲೆಲ್ಲ ಮಾಪಿಯ ಮನಸ್ಸು ಚಿಂತಾಕುಲವಾಗುತ್ತಿತ್ತು. ಕಾರಣ ಅಲ್ಲಿ ಹಿತಾಳ ಪ್ರಿಯತಮ, ಮೋದ ಎಂಬ ತರುಣ ದಾಸ ಕೆಲಸಕ್ಕಿದ್ದ. ವಿಠಲ ಕಲಾತ್ಮಕ ವಸ್ತುಗಳ ವ್ಯಾಪಾರಿ. ಮೋದ ಅಂಥ ವಸ್ತುಗಳನ್ನು ತಯಾರಿಸುವ ಕಲಾವಿದ, ರೂಪವಂತ ಯುವಕ. ಗೌರವರ್ಣ, ಎತ್ತರ ನಿಲುವು, ದಷ್ಟಪುಷ್ಟ ಮೈಕಟ್ಟು. ಅಂತಃಪುರದಲ್ಲಿಯೊಂದು ದೇವಸ್ಥಾನ ಕಟ್ಟುವ ಕಾರ್ಯವನ್ನು ಮಹಾರಾಣಿ ವಿಠಲನಿಗೆ ಒಪ್ಪಿಸಿದ್ದಳು. ಅದರ ಚಿತ್ರಣ ಕಾರ್ಯವೆಲ್ಲ ಮೋದನದೇ ಕೈಚಳಕ. ಆತ ಅಲ್ಲಿ ಕಾರ್ಯನಿರತನಾಗಿರುವಾಗ, ಅಮಿತಾಳೊಡನೆ ಹಿತಾ ನಿಂತು ನೋಡುತ್ತಿದ್ದಳು. ಹೀಗೆ ಹಿತಾ

ಹಾಗೂ ಮೋದನ ಹೃದಯಗಳಲ್ಲಿ ಪ್ರೇಮಾಂಕುರವಾಗಿತ್ತು. ಆದರೆ ಅವರಿಬ್ಬರೂ ದಾಸ-ದಾಸಿಯರು. ಅವರಿಗೆ ಮದುವೆಯಾಗಿ ಜೀವಿಸುವ ಸ್ವಾತಂತ್ರ್ಯವಿರಲಿಲ್ಲ.

ಮೋದನನ್ನು ನೋಡಲು ಹಿತಾ ದಾಸ ಉತ್ಸುಕಳಾಗಿದ್ದಳು. ಆತನನ್ನು ಕಂಡು ಅನೇಕ ದಿನಗಳಾಗಿದ್ದರಿಂದ ಆಕೆ ಬಹು ಅಸಹನೀಯವಾದ ಯಾತನೆಪಡುತ್ತಿದ್ದಳು. ಅದಕ್ಕೆ ಗೊಂಬೆ ತರುವ ನೆಪ ಮಾಡಿಕೊಂಡು ವಿಠಲನ ಅಂಗಡಿಗೆ ಹೊರಟಳು. ಮೋದ ಚಿತ್ರಣಕಾರ್ಯದಲ್ಲಿ ತೊಡಗಿದ್ದ. ಹಿತಾಳನ್ನು ಕಂಡೊಡನೆ ಆತ ಹೊಸ ಕುಂಚ ತರುವ ನೆಪದಿಂದ ಕೆಲಸದಿಂದ ಜಾರಿಕೊಂಡು ಆಕೆಯನ್ನು ಹಿಂಬಾಲಿಸಿದ. ಇಬ್ಬರೂ ಒಂದು ನಿರ್ಜನವಾದ ಬೀದಿಗೆ ಹೋಗಿ ತಮ್ಮ ಸಮಸ್ಯೆಯನ್ನು ಕುರಿತು ಮಾತನಾಡಿದರು.

“ಅಶೋಕನು ಕಳಿಂಗದ ಮೇಲೆ ಭಾರಿ ದಾಳಿ ಮಾಡಿ ಸಮಸ್ತ ಪಟ್ಟಣವನ್ನು ಸುಟ್ಟು, ಜನರೆಲ್ಲರನ್ನೂ ಬಂಧಿಸುವನೆಂಬ ವದಂತಿಯಿದೆ, ನಿನಗೆ ಧೈರ್ಯವಿದ್ದರೆ ಅರಮನೆಯಿಂದ ಪಾರಾಗು. ನಾವಿಬ್ಬರೂ ಪರಾರಿಯಾಗಿ ಎಲ್ಲಿಯಾದರೂ ಪ್ರಾಣ ಉಳಿಸಿಕೊಳ್ಳುವ ಉಪಾಯ ಮಾಡುವಾ, ನಾನು ಸೈನ್ಯದಲ್ಲಿ ಸೇರುವೆ. ಯುದ್ಧ ಮುಗಿದ ಬಳಿಕ ಸೈನ್ಯಕ್ಕೆ ಸೇರಿದ ಎಲ್ಲ ದಾಸರನ್ನೂ ಮುಕ್ತಮಾಡುವರೆಂದು ಕೇಳಿದ್ದೇನೆ,” ಎಂದು ಮೋದ ಹೇಳಿದ.

ಹಿತಾ ವ್ಯಾಕುಲಗೊಂಡಳು. ಮೋದ ಸೈನ್ಯ ಸೇರುವನೆಂದರೆ ಅವಳಿಗೆ ದೇಹದಲ್ಲಿ ಚೂರಿ ಇರಿದಂತಾಯಿತು. “ಬೇಡ ಬೇಡ” ಎಂದು ಮೊರೆಯಿಟ್ಟಳು, “ನೀನು ಹಾಗೆ ಮಾಡಿದರೆ ನಾನು ಸಾಯುವೆ. ದೇವರ ದಯೆ, ಪರಮಾತ್ಮನ ಶಕ್ತಿಯಿಂದ ಕಳಿಂಗ ಸುರಕ್ಷಿತವಾಗಿರುವುದು. ಸಾವಿರ ಸಂನ್ಯಾಸಿಗಳು ರಕ್ಷಣಾ ಮಂತ್ರ ಜಪಿಸುವರೆಂದು ಮಹಾರಾಣಿಯವರ ಆದೇಶವಾಗಿದೆ. ಕೆಲವೇ ದಿನ ತಡೆ. ದೇವಸ್ಥಾನದ ಚಿತ್ರಣದ ಕಾರ್ಯ ಮುಗಿದೊಡನೆ ನಿನ್ನ ಸ್ವಾತಂತ್ರವನ್ನು ಕುರಿತು ಯೋಚಿಸುವೆಯಂತೆ.”

ಅವರ ಮಾತು ಮುಗಿದು ಹಿತಾ ತಿರುಗಿ ಬರುವಷ್ಟರಲ್ಲಿ ತುಂಬಾ ವೇಳೆಯಾಯಿತು. ಅಷ್ಟರಲ್ಲಿ ರಾಜಕುಮಾರಿ ಅಮಿತಾ, ಎದ್ದು “ಹಿತಾ ಎಲ್ಲಿ? ನನ್ನ ಹೊಸ ಗೊಂಬೆ ಎಲ್ಲಿ?” ಎಂದು ರಂಭಾಟ ನಡೆಸಿದ್ದಳು. ದಾಸಿ ಆಕೆಯನ್ನು ಎಷ್ಟು ಸಂತೈಸಿದರೂ ಸಮಾಧಾನಗೊಳ್ಳಲಿಲ್ಲ. ಕೊನೆಗೆ ಕಣ್ಣೀರು ಸುರಿಸುತ್ತ, ಹಿತಾ ಇನ್ನೂ ಬರಲಿಲ್ಲವೆಂದು ಕಿರುಚಾಡ ಹತ್ತಿದಳು. ಹಿತಾಳ ಅವಿವೇಕತನ, ಬೇಜವಾಬುದಾರಿಯ ವರ್ತನೆಗಾಗಿ ಅವಳಿಗೆ ಶಿಕ್ಷೆಯಾಗುವದು ಖಂಡಿತ.

ಹಿತಾ ಪ್ರಾಸಾದದ್ವಾರಕ್ಕೆ ಬಂದು ಮುಟ್ಟಿದಾಗ, ವಿಳಂಬವಾಯಿತೆಂದು ಭಯಾಕ್ರಾಂತಳಾಗಿದ್ದಳು. ಮುಖ ವಿವರ್ಣವಾಗಿ, ಥರಥರನೆ ಕಂಪಿಸುತ್ತಿದ್ದಳು. ಅಂತಃಪುರದ ಪ್ರವೇಶ ದ್ವಾರದಲ್ಲಿ ದ್ವಾರಪಾಲಕ ಆಕೆಯನ್ನು ತಡೆದು, “ಎಲ್ಲಿ ಹೋಗಿದ್ದೆ ಚಾಂಡಾಲಿ? ದಾಸನಾಯಕ ದಂಡಕ ನಿನ್ನನ್ನು ಸರಿಯಾಗಿ ದಂಡಿಸುವನು. ನಿನಗೆ ಕಠೋರ ಶಾಸನ ಕಾದಿದೆ ಹೋಗು.” ಅಂದ.

ದಾಸನಾಯಕ ದಂಡಕ ಕ್ರೋಧಾವಿಷ್ಟನಾಗಿದ್ದ. ಹಿತಾ ತನ್ನನ್ನು ತಿರಸ್ಕರಿಸುತ್ತಿದ್ದಾಳೆಂದು ಅವನಿಗೆ ಇನ್ನಿಷ್ಟು ಹೊಟ್ಟೆಯುರಿ. ಹಿತಾಳನ್ನು ಕಾಮಪೂರಿತ ನೇತ್ರಗಳಿಂದ ಅವಲೋಕಿಸುತ್ತ, ಅವಳ ಮುಂಗೈಯನ್ನು ಹಿಡಿದೆಳೆದು “ಓಹೋ! ರಾಜಕುಮಾರಿಯ ಆಪ್ತದಾಸಿ ಎಂದು ನಿನಗೆ ಇಷ್ಟೊಂದು ಗರ್ವ, ಅಲ್ಲವೇ! ನಿನ್ನ ದಾರಿ ನೋಡುತ್ತಲೆ ಇದ್ದೆ. ಸರಿ, ಈಗ ನೀನು ಸಿಕ್ಕಿರುವೆ,” ಅಂದ.

ಹಿತಾ ಭೀತಿಯಿಂದ ಕೈ ಕೊಸರಿಕೊಂಡು ಆತನನ್ನು ದೂರ ತಳ್ಳಿದಳು. ದಂಡಕ ತಪ್ತನಾಗಿ ಹಲ್ಲು ಕಡಿಯುತ್ತ, “ಓಹ್! ನನ್ನನ್ನು ತಿರಸ್ಕರಿಸಿದರೆ ನಿನ್ನ ಗತಿ ಏನೆಂದು ಇಂದು ತಿಳಿಯುವದು... ಯವನಿ, ಅವಳನ್ನು ಥಳಿಸು, ಬೆನ್ನ ಮೇಲೆ ನಾಲ್ಕು ಏಟು ಬಿಗಿ,” ಎಂದು ಗರ್ಜಿಸಿದ.

ಹಿತಾ ನಡುಗಿದಳು. ಯವನಿಕೆಯು ಚಬಕದಿಂದ ಅವಳ ಬೆನ್ನ ಮೇಲೆ ಒಂದೇಟು

ಬಾರಿಸಿದಳು. ಚಬುಕ ಅವಳ ಮುಖಕ್ಕೂ ತಾಗಿ ರಕ್ತ ಚಿಮ್ಮಿತು. ಹಿತಾ ನೆಲದ ಮೇಲೆ ಕುಸಿದು ಬಿದ್ದು, "ಅಮ್ಮಾ, ನನ್ನ ಕಾಪಾಡು!" ಎಂದು ನೋವಿನಿಂದ ಅರಚಿದಳು.

ಅಷ್ಟರಲ್ಲಿ ರಾಜಕುಮಾರಿ ಹಿತಾ! "ಹಿತಾ" ಎಂದು ಕರೆಯುವ ಧ್ವನಿ ಕೇಳಿಸಿತು. ಹೊಡೆಯುವುದನ್ನು ನಿಲ್ಲಿಸಬೇಕೆಂದು ದಂಡಕ ಸಂಜ್ಞೆ ಮಾಡಿದ. ಅಮಿತಾ ಓಡಿ ಬಂದು ಹಿತಾಳ ತೋಳತೆಕ್ಕೆಯಲ್ಲಿ ಬಿದ್ದಳು. ಹಿತಾಳ ಅಶ್ರು ಪೂರಿತ ನೇತ್ರಗಳು, ಗದ್ದದ ಮೇಲಿನ ಗಾಯವನ್ನು ಕಂಡು, ಮೆಲ್ಲನೆ ಕೇಳಿದಳು, "ದಂಡಕ ನಿನಗೆ ಹೊಡೆದನೆ? ನೀನೇನು ತಪ್ಪು ಮಾಡಿದೆ? ಯಾರನ್ನಾದರೂ ಹೊಡೆದೆಯಾ? ಬೆದರಿಸಿದೆಯಾ?"

"ಇಲ್ಲ ರಾಜಕುಮಾರಿ, ನಾನು ಆಟವಾಡಲು ಹೋಗಿದ್ದೆ."

"ಯಾರೊಡನೆ?"

"ನನ್ನ ಪ್ರಿಯತಮನೊಡನೆ."

"ಅದೆಂಥ ಆಟ?" ಅಮಿತಾ ಕುತೂಹಲದಿಂದ ಕೇಳಿದಳು.

"ಅದು ಪ್ರೇಮದ ಆಟ."

"ಓಹ್, ನನಗೂ ಪ್ರೇಮದ ಆಟ ಕಲಿಸು ಹಿತಾ. ನಾನೂ ಆ ಆಟ ಆಡೂವೆ."

ಹಿತಾ, ಅವಳ ಕೆನ್ನೆ ನೇವರಿಸುತ್ತ,

"ಪ್ರಿಯ ರಾಜಕುಮಾರಿ, ಸಮಯ ಬಂದಾಗ ನೀನೂ ಆ ಆಟ ಆಡುವದನ್ನು ಕಲಿಯುವೆ." ಎಂದಳು.

ಅಮಿತಾಳ ಮುಗ್ಧ ಮುಖ ವ್ಯಾಕುಲಗೊಂಡಿತು. "ಆವಾಗ ನನಗೂ ಏಟು ಬೀಳುವವೇ?"

ಹಿತಾ ಮಗುವನ್ನು ಎದೆಗವಚಿಕೊಂಡು, "ಇಲ್ಲ ರಾಜಕುಮಾರಿಗೆ ಯಾರೂ ಅಪಾಯ ಮಾಡದ ಹಾಗೆ ಈ ದಾಸಿ ತನ್ನ ಪ್ರಾಣಾರ್ಪಣೆ ಮಾಡುವಳು."

"ಹಾಗಾದರೆ ದಂಡಕ ನಿನ್ನನ್ನೇಕೆ ಹೊಡೆದ?"

"ನಾನು ದಾಸಿ."

ಅಮಿತಾ ಕಾತರದಿಂದಹೇಳಿದಳು: "ಹಿತಾ. ಈ ಪ್ರೇಮದಾಟವನ್ನು ನೀನು ಮತ್ತೊಮ್ಮೆ ಆಡ ಕೂಡದು. ಏನು? ಮತ್ತೆ ಆಡುವಿಯಾ?"

ಹಿತಾ ಸಸುನಕ್ಕು ನುಡಿದಳು: "ಹೌದು ರಾಜಕುಮಾರಿ, ನಾನು ಆಡುವೆ."

"ಆದರೆ ದಂಡಕ ಮತ್ತೆ ಹೊಡೆಯುತ್ತಾನೆ?"

"ರಾಜಕುಮಾರಿ, ಪ್ರೇಮದಾಟದಲ್ಲಿ ಏಟು ಗಳು ಸಹ ರುಚಿಯಾಗಿರುತ್ತವೆ."

"ಓಹ್, ಹಾಗಾದರೆ ನಾನು ಆ ಆಟ ಆಡಲೇ ಬೇಕು" ಅಮಿತಾ ಆತ್ಮಾಶ್ಚರ್ಯದಿಂದ ಅಂದಳು.

"ಆಡುವಿಯಂತೆ ರಾಜಕುಮಾರಿ ಸಮಯ ಬಂದಾಗ ಆಡದಿರಲಾರೆ," ಹಿತಾ ಮಮತೆಯಿಂದ ನುಡಿದಳು.

೪

ಅಶೋಕನ ಆಕ್ರಮಣವನ್ನು ವಿರೋಧಿಸುವ ಬಗೆಯನ್ನು ಕುರಿತು ಮಹಾಮಾತ್ಯ ಆಚಾರ್ಯ ಸುಕಂಠ ಹಾಗೂ ದಂಡನಾಯಕ ಆರ್ಯ ಭದ್ರಕೀರ್ತಿ ಹಗಲಿರುಳೂ ಚಿಂತಿಸುತ್ತಿದ್ದರು. ಕೆಲವು ಸೇನಾನಾಯಕರ ನೇತೃತ್ವದಲ್ಲಿ ರಾಜ್ಯದ ವಾಯುವ್ಯ ದಿಕ್ಕಿಗೆ ಸಾವಿರಾರು ಸೈನಿಕ ರನ್ನು ರವಾನಿಸಲಾಗಿತ್ತು. ಕಳಿಂಗದ ಎಲ್ಲ ನಗರಗಳಲ್ಲಿ ಕಬ್ಬಿಣ, ತಾಮ್ರ ಮಿಶ್ರಿತರ ಲೋಹಗಳ ಕಾರ್ಮಿಕರು ಅವಿರತವಾಗಿ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕಾರ್ಯದಲ್ಲಿ ತೊಡಗಿದ್ದರು. ಬಡಿಗರು, ಚಮ್ಮಾರರು, ಬಿದಿರುಕೆಲಸಗಾರರು, ಹಗ್ಗ ಹೊಸೆಯುವವರು ಯುದ್ಧೋಪಕರಣಗಳನ್ನು ನಿರ್ಮಿಸುತ್ತ ದಿನ ವಿಡೀ ದುಡಿಯುತ್ತಿದ್ದರು. ಪ್ರಜೆಗಳೆಲ್ಲರೂ ಸ್ವರಕ್ಷಣೆಗಾಗಿ ಆತ್ಮವಿಶ್ವಾಸದಿಂದ ಯುದ್ಧ ಸಿದ್ಧತೆ ನಡೆಸಿದ್ದರು.

ಮಹಾರಾಣಿಗೂ ಆಕ್ರಮಣದ ಬಗ್ಗೆ ಶಂಕೆ. ರಾಜ್ಯವನ್ನು ರಕ್ಷಿಸುವ ಚಿಂತೆ. ಆದರೆ ಮಹಾಬೋಧಿ ವಿಹಾರದ ಗುರುಗಳ ಉಪ ದೇಶದ ಪ್ರಭಾವದಿಂದ ಹಿಂಸೆ ಹಾಗೂ ಶಸ್ತ್ರಗಳ ಶಕ್ತಿಯಲ್ಲಿ ತಿರಸ್ಕಾರಭಾವ ಉಂಟಾಗಿತ್ತು. ದೇಶ ಭೀತಿಯಿಂದ ವಿಮುಕ್ತಳಾಗಿರ ಲಿಲ್ಲ. ದೈವೀಶಕ್ತಿಯ ಪ್ರಭಾವದಿಂದಲೇ ಕಳಿಂಗ ದೇಶ ಸುರಕ್ಷಿತವಾಗಿರುವದೆಂದು ಆಕೆ ಭಾವಿ ಸಿದ್ದಳು.

ಪ್ರತಿ ಪೌರ್ಣಿಮೆ ಹಾಗೂ ಅಮಾವಾಸ್ಯೆಯ ದಿನ ಮಹಾರಾಣಿ ಮಹಾಬೋಧಿ ವಿಹಾರಕ್ಕೆ ಅಲ್ಲಿರುವ ಭಿಕ್ಷುಗಳಿಗೆ ಅನ್ನ ವಸ್ತ್ರಾದಿಗಳನ್ನು ನೀಡುತ್ತಿದ್ದಳು. ಅಲ್ಲಿಯ ಮುಖ್ಯಸ್ಥ ಸ್ಥವಿಕ ಜೀವಕನನ್ನು ಅತೀವವಾಗಿ ಗೌರವಿಸುತ್ತಿದ್ದಳು. ಆತನ ಉಪದೇಶವನ್ನು ಮನ್ನಿಸಿ ಆಶೀರ್ವಾದ ವನ್ನು ಪಡೆಯುತ್ತಿದ್ದಳು.

ಒಂದು ದಿನ ಅಲ್ಲಿಗೆ ಹೋದಾಗ, ಗುರು ಗಳಿಗೆ ನಮ್ರತೆಯಿಂದ ನಮಸ್ಕರಿಸಿ, ಮಹಾ ರಾಣಿ ವಿಹ್ವಲ ಕಂಠದಿಂದ ಪ್ರಶ್ನಿಸಿದಳು: 'ಪೂಜ್ಯರೆ, ದೇಶವು ಭಯವಿಮುಕ್ತವಾಗುವ ದೆಂದು? ಈ ಭಕ್ತಳ ಸಾಧನೆ ಪೂರ್ತಿಗೊಂಡು, ದಿವ್ಯಜ್ಞಾನ ಪ್ರಾಪ್ತವಾಗುವದೆಂದು?"

ಸ್ಥವಿಕ ಆಕೆಯನ್ನು ಸ್ಥಿರದೃಷ್ಟಿಯಿಂದ ನೋಡುತ್ತ ಎಂದ "ಭಕ್ತಳ ಮನಸ್ಸು ನಿರ್ಮಲ ವಾಗಿರಬೇಕು. ಪೂರ್ಣತ್ಯಾಗದ ಸಂಕಲ್ಪದ ನಂತರ ಮೌನ ಹಾಗೂ ಧ್ಯಾನಾವಸ್ಥೆಯಲ್ಲಿ ಮೂವತ್ತಾರು ಗಂಟೆ ಕಾಲ ಕಳೆಯಬೇಕು. ಬಳಿಕ ಮಧ್ಯರಾತ್ರಿಯ ಸಮಯ ಯಾವ ಆಡಂಬರ ವಿಲ್ಲದೆ ಮಠ ಪ್ರವೇಶಮಾಡಬೇಕು. ಅಂದರೆ ಸಿದ್ಧಿ ಪ್ರಾಪ್ತವಾಗುವದು."

ಮಹಾರಾಣಿಯ ಪಲ್ಲಕ್ಕಿಯು ತಿರುಗಿ ಅರಮನೆಯನ್ನು ತಲುಪಿದೊಡನೆ, ಆಕೆ ತನ್ನ ಸಂಕಲ್ಪವನ್ನು ಪ್ರಕಟಿಸಿದಳು: "ಬರುವ ಮೂವ ತ್ತಾರು ಗಂಟೆ ಕಾಲ ನಾನು ಮೌನವಾಗಿ ಧ್ಯಾನಸ್ಥಳಾಗಿರುವೆ. ಅನಂತರ ಮಧ್ಯರಾತ್ರಿ ಕಳೆದು ಅರ್ಧ ಗಂಟೆಯಾದ ಮೇಲೆ ಮಠಕ್ಕೆ ಹೊರಡಲು ಸಿದ್ಧಳಾಗುವೆ. ನನ್ನೊಡನೆ ಯಾವ ಸೇವಕರೂ ರಾಜ ಪಹರೆಯವರೂ ಬರ ಕೂಡದು."

ಈ ಘೋಷಣೆಯಿಂದ ಇಡೀ ನಗರ ತಲ್ಲಣಿ ಸಿತು. ಆದರೆ ಆಚಾರ್ಯ ಸುಕಂಠನ ಮನಸ್ಸು

ಮಾತ್ರಿಷ್ಟು ಪ್ರಕ್ಷುಬ್ಧಗೊಂಡಿತು. ಅಶೋಕನ ಪ್ರಚಂಡ ದಂಡು ಆಕ್ರಮಣಕ್ಕೆ ಅಣಿಯಾಗಿತ್ತು. ರಾಜ್ಯ ಅತ್ಯಂತ ಕೋಲಾಹಲದಲ್ಲಿ ಮುಳು ಗಿತ್ತು. ಇಂಥ ವೇಳೆಯಲ್ಲಿ ಮಹಾರಾಣಿಯ ವರ್ತನೆ ಆತನನ್ನು ಚಿಂತೆಗೀಡು ಮಾಡಿತು. ರಾಣಿಯನ್ನೂ ರಾಜ್ಯವನ್ನೂ ರಕ್ಷಿಸಲು ಆತ ತನ್ನ ಪ್ರಾಣಾರ್ಪಣೆ ಮಾಡಲು ಸಹ ಸಿದ್ಧನಿದ್ದ. ಆದರೆ ಮಹಾರಾಣಿಯು ತನ್ನ ಈ ವರ್ತನೆ ಯಿಂದ ತನ್ನ ಜೀವವಲ್ಲದೆ ರಾಜ್ಯದ ವಿನಾಶ ಕ್ಕೂ ಕಾರಣಳಾಗುತ್ತಿದ್ದಾಳೆಯೇ? ರಾಜ್ಯ ವನ್ನೂ ಇಬ್ಬರನ್ನೂ ಸಂರಕ್ಷಿಸುವ ಯೋಜನೆ ಯನ್ನು ಆತ ಚಿಂತಿಸತೊಡಗಿದ.

ಮಧ್ಯರಾತ್ರಿಯ ಗಂಟೆ ಬಾರಿಸಿತು. ನಿಃಶಬ್ದ ಕತ್ತಲೆಯನ್ನು ಭೇದಿಸುತ್ತ ಎಲ್ಲರ ಹೃದಯ ಗಳನ್ನೂ ಬಾಣದಂತೆ ಇರಿಯಿತು. ಎಲ್ಲರೂ ವೇದನೆಯಿಂದ ತಳಮಳಿಸುತ್ತಿದ್ದರು. ನಿದ್ರಿಸುತ್ತಿ ರುವ ಅಮಿತಾಳನ್ನು ಪಿತಾ ಎದೆಗವಚಿಕೊಂಡಿ ದ್ದಳು.

ಮಹಾರಾಣಿಯ ಕೊಠಡಿಯ ದ್ವಾರ ತೆರೆ ಯಿತು. ಆಕೆಯ ಮುಖ ಗಂಭೀರವೂ ತೇಜಃ ಪುಂಜವೂ ಆಗಿತ್ತು. ತಲೆಬಾಗಿ ಮೆಲ್ಲನೆ ಮಂತ್ರ ಪಠಣ ಮಾಡುತ್ತಿದ್ದಳು. ಅಂತಃಪುರದ ಒಳಾಂ ಗಣವನ್ನು ಪ್ರವೇಶಿಸಿ, ತಡೆದು ನಿಂತಳು. ತಿರುಗಿ ಸುತ್ತಲೂ ದೃಷ್ಟಿ ಹಾಯಿಸಿದಳು. ಪಿತಾ ಮುಂದೆ ಬಂದಳು. ಮಹಾರಾಣಿ ಮಲ ಗಿದ ರಾಜಕುಮಾರಿಯ ಹಣೆ ಮುಟ್ಟಿ ಮೌನ ವಾಗಿ ಆಶೀರ್ವದಿಸಿದಳು. ಅನಂತರ ಪಲ್ಲಕ್ಕಿ ಯಲ್ಲಿ ಹೋಗಿ ಕುಳಿತಳು. ಬೋವಿಗಳು ಹೊರಟರು.

ಪಲ್ಲಕ್ಕಿಯ ಹಿಂದೆ ಅಲ್ಲಿ ಹಾಜರಿದ್ದ ಮಹಾ ಮಾತ್ಯ, ಮಹಾಸೇನಾಪತಿ ಮಂತ್ರಿತರ ಸಾಮಂತ ಸೇನಾನಾಯಕರು ಹಾಗೂ ಸಶಸ್ತ್ರ ಅಶ್ವಾರೂಢ

ಸೈನಿಕರ ಕಾವಲು ಪಡೆಯುವರು ನಡೆದರು. ಆ ಸ್ತಬ್ಧರಾತ್ರಿಯಲ್ಲಿ ಮಹಾರಾಣಿಯ ಪಲ್ಲಕ್ಕಿ ಅನೇಕ ಬೀದಿಗಳನ್ನು ಕ್ರಮಿಸಿತು. ಒಳಗೆ ಆಕೆ ಸುಮ್ಮನೆ ಕಣ್ಣು ಮುಚ್ಚಿಕೊಂಡು ಕುಳಿತು ಗುರುಗಳ ಧ್ಯಾನ, ಮಂತ್ರಜಪದಲ್ಲಿ ತನ್ಮಯಳಾಗಿದ್ದಳು. ಕೊನೆಗೊಮ್ಮೆ ಪಲ್ಲಕ್ಕಿಯನ್ನು ಇಳಿಸಲಾಯಿತು. ಮಹಾರಾಣಿ ಕಣ್ಣು ತೆರೆದು ಹೊರ ಇಳಿದಳು. ಒಂದು ಕ್ಷಣ ಸುಮ್ಮನೆ ನಿಂತು ಸುತ್ತಲೂ ವಿಸ್ಮಯದಿಂದ ನೋಡಿದಳು. ಈ ಸ್ಥಳವನ್ನು ಆಕೆ ಎಂದೂ ಕಂಡಿರಲಿಲ್ಲ. ತನ್ನ ಸುತ್ತಲೂ ಪೀತವಸ್ತ್ರಧಾರಿ ಬೌದ್ಧ ಸಂನ್ಯಾಸಿಗಳಿಲ್ಲದೆ, ಶಸ್ತ್ರಧಾರಿ ಸೈನಿಕರು, ಸೇನಾನಾಯಕರು, ಮಹಾಸೇನಾಪತಿ ಮತ್ತು ಮಹಾಮಾತ್ಯ ನಿಂತಿದ್ದರು. ಕೊನೆಗೆ ಮಹಾರಾಣಿ ಮೌನವನ್ನು ಮುರಿದು ಆಚಾರ್ಯರನ್ನು ಕೇಳಿದಳು: "ನಾವು ಎಲ್ಲಿಗೆ ಬಂದಿರುವೆವು? ಮಠಕ್ಕೆ ಏಕೆ ಹೋಗಲಿಲ್ಲ?"

ಆಚಾರ್ಯ ನಮ್ರತೆಯಿಂದ ನಮಸ್ಕರಿಸಿ ಉತ್ತರಿಸಿದ:

"ಪರಮ ಭಗವತಿ, ಅರಮನೆಯಲ್ಲಿರಲು ಇಚ್ಛಿಸಲಿಲ್ಲ. ಇದು ಶ್ರೇಷ್ಠ ದುರ್ಗ. ಇಲ್ಲಿಯ ಏಕಾಂತತೆಯಲ್ಲಿ ನಿರಾತಂಕದಿಂದ ತಮ್ಮ ಧರ್ಮ ಸಾಧನೆ ನಡೆಸಬಹುದು."

ಮಹಾರಾಣಿಯ ಹಣೆಯ ಮೇಲೆ ರೋಷದ ರೇಖೆಗಳು ಮೂಡಿದವು. "ನಾನು ದುರ್ಗದಲ್ಲಿರಲು ಇಚ್ಛಿಸುವುದಿಲ್ಲ. ಸಂನ್ಯಾಸಿ ವಿಹಾರದಲ್ಲಿರಲು ಇಚ್ಛಿಸುವೆ. ಆಚಾರ್ಯ, ನೀವು ನನ್ನನ್ನು ವಂಚಿಸಿದ್ದೀರಿ."

ಆಚಾರ್ಯ ವಿನಮ್ರವಾಗಿ ಉತ್ತರಿಸಿದ: "ಪರಮಭಗವತಿ. ಈ ದಾಸನ ಅವಿನಯದ ಕೃತ್ಯವನ್ನು ಕ್ಷಮಿಸಿ, ಮಹಾರಾಣಿಯ ಸ್ಥಾನ ಮಠದಲ್ಲಿ ಅಲ್ಲ. ಮಠದಲ್ಲಿ ರಾಜತ್ವಗುಣ ಕ್ಷಯಿಸುವುದು, ಅಗ್ನಿಜ್ವಾಲೆಯ ಮೇಲಿನ ಜಲಬಿಂದುವಿನಂತೆ ನಶಿಸುವುದು."

ಮಹಾರಾಣಿ ಕ್ರೋಧಾವಿಷ್ಟಳಾದಳು. "ನಾನು ಆಶ್ರಮಕ್ಕೆ ಹೋಗುವೆ. ಅದು ನನ್ನ ದೃಢ ನಿರ್ಧಾರ. ರಾಜ್ಯ ನನ್ನದು. ಆಚಾರ್ಯ ಕೇವಲ ಒಬ್ಬ ದೇಶಸೇವಕ."

ಮಹಾಮಾತ್ಯ ಗೌರವದಿಂದ ನುಡಿದ: "ರಾಜರಾಜೇಶ್ವರಿಯ ಮಾತು ತುಂಬಾ ಸತ್ಯ. ಆಚಾರ್ಯ ಕೇವಲ ಈ ರಾಜ್ಯ ಮತ್ತು ರಾಜವಂಶದ ಸೇವಕ. ರಾಜ್ಯವನ್ನು ಸಂರಕ್ಷಿಸುವುದು ಸೇವಕನ ಕರ್ತವ್ಯ. ಆಚಾರ್ಯ ತಮ್ಮನ್ನು ವಂಚಿಸಿಲ್ಲ. ತನ್ನ ಕರ್ತವ್ಯಪಾಲನೆ ಮಾಡಿದನಷ್ಟೆ. ಪರಮ ಭಗವತಿ, ರಾಜ್ಯವು ಪ್ರಜೆಗಳ ಸ್ವತ್ತು. ಅದನ್ನು ಸುಮ್ಮನೆ ಯಾರಿಗಾದರೂ ಬಿಟ್ಟು ಬಿಡಲಾಗದು. ರಾಜಕುಮಾರಿಯು ಸಿಂಹಾಸನಕ್ಕೆ ಉತ್ತರಾಧಿಕಾರಿ. ಅದಕ್ಕೆ ಬರುವ ತಿಂಗಳು ಪೂರ್ಣಿಮೆಯ ಶುಭದಿನದಂದು ರಾಜಕುಮಾರಿಯ ಪಟ್ಟಾಭಿಷೇಕವಾಗಲೆಂದು ಮಹಾರಾಣಿಯವರ ಅಪ್ಪಣೆಯಾಗಬೇಕು. ಈ ಕ್ಷಣದಿಂದ ಅಮಿತಾ ಕಳಿಂಗದ ಮಹಾರಾಣಿಯೆಂದು ಪ್ರಜೆಗಳನ್ನು ಆಳುವಳು."

※

ರಾಜಕುಮಾರಿ ಅಮಿತಾಳ ಪಟ್ಟಾಭಿಷೇಕಕ್ಕೆ ಪಟ್ಟಣದ ಜನರೆಲ್ಲ ಆನಂದೋತ್ಸಾಹದಿಂದ ನೆರೆದರು. ನಗರದ ಪ್ರತಿಯೊಂದು ಪ್ರಾಸಾದ, ಭವನ, ಮಂದಿರಗಳಿಂದ ಮೃದಂಗನಾದದ ನೂಪುರ ನಿನಾದ, ಭೇರಿ–ನಗಾರಿಗಳ ತೂರ್ಯನಾದ ಕೇಳಿಬರುತ್ತಿತ್ತು. ಎಲ್ಲ ರಾಜಪಥಗಳಲ್ಲಿ, ಅಂಗಡಿ ಬೀದಿಗಳಲ್ಲಿ ಕಮಾನು ದ್ವಾರಗಳು ಪುಷ್ಪ ತೋರಣಗಳಿಂದ ಅಲಂಕೃತವಾಗಿದ್ದವು. ರಸ್ತೆಗಳಲ್ಲಿ ಸಾರ್ವಜನಿಕ ಮನೋರಂಜನೆಗೋಸ್ಕರ ವೇದಿಕೆಗಳನ್ನು ರಚಿಸಲಾಗಿತ್ತು. ಮನೆಗಳ ಬಾಗಿಲುಗಳಲ್ಲಿ ವಿವಿಧವರ್ಣಗಳ ರಂಗೋಲಿಯನ್ನು ಬರೆಯಲಾಗಿತ್ತು. ನಗರದ ತುಂಬೆಲ್ಲ ಸುಗಂಧಧೂಪದ ಪರಿಮಳ ಹರಡಿತ್ತು. ಎಲ್ಲೆಡೆಗೂ ಎಣ್ಣೆ ತುಪ್ಪದಲ್ಲಿ ಕರಿದ ಪಾಕ ಪರಮಾನ್ನದ ಪರಿಮಳ ಆವರಿಸಿತ್ತು. ರಾಜ್ಯಾಭಿಷೇಕದ ಸಮಾರಂಭ ಸಕಲರಿಗೂ ವಿನೋದಮಯ, ಆಹ್ಲಾದಕರ ಉತ್ಸವವಾಗಿತ್ತು.

ರಾಜಕುಮಾರಿ ಅಮಿತಾಳಿಗೆ ಮಾತ್ರ ಅದೊಂದು ಅಸಹ್ಯ ಯಾತನೆಯಾಗಿತ್ತು. ಸಿಂಹಾ

ಸನದ ಮೇಲೆ ಸುಮ್ಮನೆ ಕೂಡುವುದಕ್ಕಿಂತ ಹಿತಾಳ ಕೈ ಹಿಡಿದುಕೊಂಡು ಒಳಾಂಗಣದಲ್ಲಿ ಓಡಾಡುವುದು. ಉದ್ಯಾನದಲ್ಲಿ ಬಭ್ರುವಿನ ಹಿಂದೆ ಓಡುವುದು ಅವಳಿಗೆ ಹೆಚ್ಚು ರುಚಿಸುತ್ತಿತ್ತು. ರಾಜ್ಯದ ಮಹಾರಾಣಿಯಾಗಿ ಸಿಂಹಾಸನಾರೂಢಳಾಗುವುದು ಅವಳಿಗೇನೂ ಹಿಡಿಸಲಿಲ್ಲ. ರಾಜ್ಯಾಭಿಷೇಕದ ವಿಧಿಗಳೆಲ್ಲ ಅವಳಿಗೊಂದು ಆಟವೆಂದೆನಿಸಿತು. ರಾಜಪುರೋಹಿತ ಅವಳ ಮೇಲೆ ಸಪ್ತನದಿ ಹಾಗೂ ಸಪ್ತಸಮುದ್ರಗಳ ಪವಿತ್ರಜಲವನ್ನು ಸಂಪ್ರೋಕ್ಷಿಸುತ್ತಿರುವಾಗ ತಾನೂ ಆ ಜಲವನ್ನು ಅವರ ಮೇಲೆಲ್ಲ ಸಿಂಪಡಿಸಿದಳು. ತಲೆಯ ಮೇಲೆ ಭಾರವಾದ ರತ್ನಖಚಿತ ಕಿರೀಟವನ್ನು ಇರಿಸಿದಾಗ ಅಳಲಾರಂಭಿಸಿದಳು. ಸಿಂಹಾಸನದ ಮೇಲೆ ಗಂಟೆಗಟ್ಟಲೆ ಕುಳಿತು ಬೇಸತ್ತು ಸಿಡುಕಿನಿಂದ ಕೆಳಗೆ ಇಳಿದು ಓಡಿ ಹೋಗಬೇಕೆಂದಳು.

ಮಹಾರಾಣಿಯ ಪಟ್ಟಾಭಿಷೇಕದ ನಿಮಿತ್ತ ನಗರದಲ್ಲಿ ಒಂದು ದಿನ ಮೆರವಣಿಗೆ ಸಮಾರಂಭ ಏರ್ಪಟ್ಟಿತು. ಊರೆಲ್ಲ ಅಲಂಕೃತವಾಗಿತ್ತು. ವೈಭವದ ಮೆರವಣಿಗೆಯನ್ನು ವೀಕ್ಷಿಸಲು ಮನೆಮನೆಗಳ ಮಾಳಿಗೆ ಉಪ್ಪರಿಗೆಗಳಲ್ಲಿ ಸ್ತ್ರೀಯರು ಕಿಕ್ಕಿರಿದು ನೆರೆದಿದ್ದರು.

ಮೆರವಣಿಗೆಯ ಮುಂದೆ ಒಂಟೆ ಸವಾರರು ರಾಜಪತಾಕೆ ಹಿಡಿದು ರಾಣಿಯ ಜಯಘೋಷ ಮಾಡುತ್ತಿದ್ದರು. ಅವರ ಹಿಂದೆ ಕಹಳೆ ಊದುವವರು, ನಗಾರಿ ಬಾರಿಸುವವರು, ತಾಳ ಮದ್ದಲೆಯವರು ಅವರ ಹಿಂದೆ ಜನರ ಮನೋರಂಜನೆಗಾಗಿ ಎತ್ತಿನ ಬಂಡಿಗಳಲ್ಲಿ ದೊಡ್ಡ ವೇದಿಕೆಯ ಮೇಲೆ ನರ್ತಿಸುತ್ತಿರುವ ನರ್ತಕಿಯರು, ತಮಾಷೆ ಮಾಡುತ್ತಿರುವ ವಿದೂಷಕರು ತರು

ವಾಯು ಅಶ್ವಾರೂಢ ಸೈನಿಕರು, ಆನೆಗಳ ಸಾಲಿನ ಎರಡೂ ಪಾರ್ಶ್ವಕ್ಕೆ ಸಶಸ್ತ್ರ ಸೇನಾನಾಯಕರು.

ಜರತಾರಿ ವಸ್ತ್ರಾಲಂಕೃತವಾದ ಮುಂದಿನ ದೊಡ್ಡ ಆನೆಯ ಮೇಲೆ ಚಿನ್ನದ ಅಂಬಾರಿಯಲ್ಲಿ ಸಿಂಹಾಸನ. ಅದರಲ್ಲಿ ಮಹಾರಾಣಿ ಅಮಿತಾ. ಅವಳ ಇಬ್ಬರು ಅಂಗರಕ್ಷಕರು. ಕಂಚುಕಿ ಉದ್ದಾಲ ಹಾಗೂ ಚಾಮರಧಾರಿ ಜಿತಾ ಕುಳಿತಿದ್ದರು. ಅವರ ಹಿಂದುಗಡೆ ಆನೆಗಳ ಮೇಲೆ ಮಹಾಮಾತ್ಯ ಆಚಾರ್ಯ, ಸುಕಂಠ, ಮಹಾಸೇನಾಪತಿ ಆರ್ಯ ಭದ್ರಕೀರ್ತಿ, ರಾಜ ಪುರೋಹಿತ, ಮುಖ್ಯ ನ್ಯಾಯಾಧೀಶ, ಕೋಶಾಧಿಕಾರಿ ಮತ್ತು ರಾಜಸಭಾ ಸದಸ್ಯರು. ಹಿಂದುಗಡೆ ಗಾಡಿ, ಮೇಣೆಗಳಲ್ಲಿ ಪ್ರಮುಖ ಪುರಜನರು ಹೊರಟಿದ್ದರು. ಪ್ರಜೆಗಳಿಗೆ ಮಹಾರಾಣಿಯ ವೈಭವವನ್ನು ಪ್ರದರ್ಶಿಸಿ, ಮಹಾಮಾತ್ಯ ಅವರಲ್ಲಿ ಆಕೆಯ ಶಕ್ತಿ ಪ್ರಭಾವದ ಬಗ್ಗೆ ವಿಶ್ವಾಸ ಮೂಡಿಸಬೇಕೆಂದಿದ್ದ.

ಮೆರವಣಿಗೆ ಹೊರಟಂತೆ ಜನಸ್ತೋಮ 'ಮಹಾರಾಣಿಗೆ ಜಯವಾಗಲಿ' ಎಂದು ಘೋಷಿಸಿತು. ಮನೆಗಳ ಮಾಳಿಗೆ, ಉಪ್ಪರಿಗೆಗಳಿಂದ ಜನರು ಹೂಮಾಲೆ, ಅಕ್ಷತೆಗಳನ್ನು ಅವಳ ಮೇಲೆ ಎಸೆಯುತ್ತಿದ್ದರು. ಅಮಿತಾ ಹರ್ಷಗೊಂಡಳು. ಪ್ರತಿಯಾಗಿ ಅವರಿಗೂ ಹೂಮಾಲೆಗಳನ್ನು ಎಸೆಯುತ್ತಿದ್ದಳು. ಅನಂತರ ತಾನು ಆ ಹೂಮಾಲೆಗಳನ್ನು ಧರಿಸುತ್ತ, ಜನರತ್ತ ತನ್ನ ರತ್ನಾಭರಣಗಳನ್ನು ಬೀಸಹತ್ತಿದಳು. ಆಕೆಯ ಔದಾರ್ಯಕ್ಕಾಗಿ ಜನರು ಮತ್ತಷ್ಟು ಜಯ ಘೋಷ ಮಾಡಿದರು. ಪುಷ್ಪಗಳ ಬದಲಾಗಿ ಅಮೂಲ್ಯ ರತ್ನಾಭರಣಗಳನ್ನು ಎಸೆಯಬಾರದೆಂದು ಉದ್ದಾಲ ಅವಳಿಗೆ ಉಪದೇಶ ಮಾಡಿದ. ಆದರೆ ಆಕೆ ಆತನ ಮಾತು ಕೇಳಲಿಲ್ಲ.

"ಹೂವುಗಳು ಮೃದುವಾಗಿ ಸುವಾಸಿತವಾಗಿರುವವು. ರತ್ನಗಳು ಬಲು ಗಟ್ಟಿ. ಅವಕ್ಕೆ ಪರಿಮಳವೇ ಇಲ್ಲ," ಎಂದಳು.

ಮೆರವಣಿಗೆ ಹೊರಟು ಮೂರು ಗಂಟೆಯಾಗಿತ್ತು. ಆನೆಯ ಮೇಲೆ ಕುಳಿತು ಕುಳಿತು ಅಮಿತಾಳಿಗೆ ಬೇಸರವಾಯಿತು. ಮೈಕೈ ತುಂಬಾ ನೋವಾಗಿತ್ತು. ಕೆಳಗಿಳಿಯುತ್ತೇನೆಂದು ಹಟ ಹಿಡಿದಳು. ಅವಳ ಮಾತಿಗೆ ಯಾರೂ ಒಪ್ಪದಿದ್ದಾಗ ಕಟ್ಟಕಡೆಗೆ ಅಳಲಾರಂಭಿಸಿದಳು. ಮಹಾಮಾತ್ಯ ಅವಳ ಹಟಕ್ಕೆ ಮಣಿಯಬೇಕಾಯಿತು. ಆನೆಯನ್ನು ಕೆಳಗೆ ಕೂಡಿಸಲು ಅಪ್ಪಣೆ ಆಯಿತು. ಅಮಿತಾ ಕೆಳಗಿಳಿದು ಜನರ ಮಧ್ಯೆ ನಿಂತು ಅವರಿಂದ ಪುಷ್ಪಹಾರಗಳನ್ನು ಸ್ವೀಕರಿಸುತ್ತ ಅವರೊಂದಿಗೆ ಉಲ್ಲಾಸದಿಂದ ನಕ್ಕು ನಲಿದಾಡಿದಳು. ಜನಸಮೂಹದಲ್ಲಿ ತನ್ನ ಸಮವಯಸ್ಕರಾದ ಅನೇಕ ಮಕ್ಕಳನ್ನು ಕಂಡು ಅವರನ್ನು ಮುಂದೆ ಕರೆದು ಮಾತನಾಡಿಸಿದಳು. ಅವರನ್ನೆಲ್ಲ ತನ್ನ ಜತೆ ಆನೆಯ ಮೇಲೆ ಕೂಡಿಸಿಕೊಂಡು ನಡೆಯಬೇಕೆಂದು ಹಟ ಹಿಡಿದಳು. ಇದು ಅನುಚಿತವೆಂದು ಎಷ್ಟು ತಿಳಿಸಿ ಹೇಳಿದರೂ ಆಕೆ ಒಪ್ಪಲಿಲ್ಲ. ಕೊನೆಗೆ ಮಕ್ಕಳನ್ನೆಲ್ಲ ಆನೆ ಸವಾರಿ ಮಾಡಿಸಿಕೊಂಡು ಮೆರವಣಿಗೆ ಅರಮನೆಗೆ ಹಿಂತಿರುಗಿತು.

ಜನತೆಗೆ ತಮ್ಮ ಮಹಾರಾಣಿಯ ಬಗ್ಗೆ ಭಾರಿ ಅಭಿಮಾನವೆನಿಸಿತು. ಅವರ ಹೃದಯಗಳಲ್ಲಿ ಅವಳಿಗೋಸ್ಕರ ಅನ್ಯೋನ್ಯಭಾವ ಮೂಡಿತು. ಕಳಿಂಗದ ಕಲ್ಯಾಣಾರ್ಥ ಆದಿಶಕ್ತಿಮಾತೆ ಬಾಲಿಕೆಯ ರೂಪದಲ್ಲಿ ಸಿಂಹಾಸನವೇರಿದ್ದಾಳೆಂದು ನಂಬಿದರು.

೬

ಪಟ್ಟಾಭಿಷೇಕ ಸಮಾರಂಭದ ಉತ್ಸವಗಳೆಲ್ಲ ಮುಗಿಯುಷ್ಟರಲ್ಲಿಯೇ ಕಳಿಂಗದ ಜನರು ಅಶೋಕನ ವಿರುದ್ಧ ಹೋರಾಟದ ಸಿದ್ಧತೆಗಳನ್ನು ಆರಂಭಿಸಬೇಕಾಯಿತು. ಗಡಿ ಪ್ರದೇಶಕ್ಕೆ ಮಹಾಸೇನಾಪತಿ ದೊಡ್ಡ ಸೈನ್ಯದೊಡನೆ ದಂಡಯಾತ್ರೆ ನಡೆಸಿದ. ವಿಜಯದ: ಅಭಿಮಾನದ ಪ್ರಾರಂಭ ಸೂಚಿಸಲು ಎಲ್ಲೆಡೆಗೆ ಕಹಳೆ ಊದಲಾಯಿತು. ಭೇರಿ ನಗಾರಿ ಬಾರಿಸಲಾಯಿತು. ದೇಶ ಸಂರಕ್ಷಣೆಗಾಗಿ_ ಮುಂದೆ ಬರಲು ಎಲ್ಲರಿಗೆ ಉತ್ತೇಜನ ನೀಡಲಾಯಿತು. ತಮ್ಮ ನೆಚ್ಚಿನ ಮಹಾರಾಣಿಗೋಸ್ಕರ ಗೌರವ, ಭಕ್ತಿಭಾವದಿಂದ ಜನಪ್ರವಾಹ ವಾಯುವ್ಯದಿಕ್ಕಿನತ್ತ ಸಾಗಿತು.

ಮಹಾರಾಣಿ ಅಮಿತಾ ತನ್ನ ತಾಯಿಯನ್ನು ಸದಾ ನೆನೆಸುತ್ತಿದ್ದಳು. ಆಕೆಯನ್ನು ಬೇಗನೆ ಕಾಣಲು ಹಂಬಲಿಸುತ್ತಿದ್ದಳು. ಆಕೆ ತೀರ್ಥಯಾತ್ರೆಗೆ ತೆರಳಿರುವಳೆಂದು ಅವಳಿಗೆ ಸಮಾಧಾನ ಹೇಳಿದ್ದರು. ಆದರೂ, "ತಾಯಿಯನ್ನು ನೋಡುವೆ. ತೀರ್ಥಯಾತ್ರೆಯಿಂದ ಎಂದು ತಿರುಗಿ ಬರುವಳು?" ಎಂದು ಪ್ರಶ್ನಿಸುತ್ತಿದ್ದಳು. ಆಕೆಯನ್ನು ಸಂತೈಸಲು ಹಿತಾ, ಪಾಪಿ ಮತ್ತು ಉದ್ದಾಲ ಬಹಳೇ ಪ್ರಯತ್ನ ಪಡುತ್ತಿದ್ದರು. ಹೊಸ ಹೊಸ ಗೊಂಬೆ ಆಟಗಳಿಂದ ಆಕೆಯ ಮನ ರಂಜಿಸಲು ಯತ್ನಿಸುತ್ತಿದ್ದರು. ಕೆಲವೊಮ್ಮೆ ಪಟ್ಟಣದಲ್ಲಿ ಸುತ್ತಾಡುವುದಕ್ಕೆ ಹೋಗಬೇಕೆನ್ನುತ್ತಿದ್ದಳು. ಪ್ರಜೆಗಳು ಆಕೆಯ ಜಯಘೋಷ ಮಾಡುವುದರಿಂದ ಆಕೆಗೆ ಆನಂದ, ಆಶ್ಚರ್ಯವಾಗುತ್ತಿತ್ತು.

ಹೀಗೊಮ್ಮೆ ಮಹಾರಾಣಿಯು ಪಲ್ಲಕ್ಕಿ ಮುಖ್ಯ ಬೀದಿಯಲ್ಲಿ ಹಾಯುತ್ತಿರುವಾಗ ಸೈನಿಕರ ಗುಂಪೊಂದು ನಗರಕ್ಕೆ ಹೊರಟಿತ್ತು. ಕೆಲವರು ಕುಂಟುತ್ತ ಬಡಿಗೆಯ ಸಹಾಯದಿಂದ ನಡೆಯುತ್ತಿದ್ದರು. ಮತ್ತೆ ಕೆಲ ಗಾಯಾಳುಗಳನ್ನು ತೂಗುಕಟ್ಟುಗಳಲ್ಲಿ ಹೊತ್ತುಕೊಂಡು ಹೋಗುತ್ತಿದ್ದರು. ಅವನ್ನು ಕಂಡು, ಅಮಿತಾ ಕುತೂಹಲದಿಂದ. "ಇದೆಂಥ ಪಲ್ಲಕ್ಕಿ?" ಎಂದು ಕೇಳಿದಳು.

"ರಾಜೇಶ್ವರಿ ಇದು ಪಲ್ಲಕ್ಕಿ ಅಲ್ಲ, ಗಾಯಾಳುಗಳನ್ನು ಹೊರುವ ಡೋಲಿ", ಎಂದು ರಾಜಪಹರೆಯ ನಾಯಕ ತಿಳಿಸಿಹೇಳಿದ.

ಅಮಿತಾ ಕೆಲ ನಿಮಿಷ ಮೌನವಾಗಿದ್ದು. "ನಾನಿದನ್ನು ನೋಡಬೇಕು," ಎಂದು ಪಲ್ಲಕ್ಕಿಯಿಂದ ಇಳಿದಳು.

ಡೋಲಿಯಲ್ಲಿದ್ದ ಸೈನಿಕನ ಗಾಯದ ಮೇಲೆಲ್ಲ ರಕ್ತ ಹೆಪ್ಪುಗಟ್ಟಿತ್ತು. ಆತನ ಹರಕು ಬಟ್ಟೆಗಳ ಮೇಲೂ ರಕ್ತದ ಕಲೆಗಳಿದ್ದವು. ಚಿಕ್ಕ ಮಹಾರಾಣಿಯ ಹೃದಯ ಕನಿಕರದಿಂದ ತಳಮಳಿಸಿತು. ಉಳಿದೆಲ್ಲ ಸೈನಿಕರನ್ನು ನೋಡಿ ಗಾಬರಿಗೊಂಡು ಕೇಳಿದಳು: "ಏನಿದು? ಇವರನ್ನು ಯಾರು ಹೊಡೆದಿದ್ದಾರೆ?"

ಸೇನಾನಾಯಕ ನಮಸ್ಕರಿಸಿ ನುಡಿದ, "ಮಹಾರಾಣಿ, ಆಕ್ರಮಣಕಾರಿ ಕ್ರೂರ ಅಶೋಕ ಇವರನ್ನು ಹೊಡೆದಿದ್ದಾನೆ."

ಎಳೆಯ ಅಮಿತಾಳಿಗೆ ಅವನ ಮಾತಿನ ಅರ್ಥವಾಗಲಿಲ್ಲ. ಗಾಬರಿಯಿಂದ ಕೇಳಿದಳು: "ಯಾರವನು ಅಶೋಕ? ಎಲ್ಲಿದ್ದಾನೆ?"

ಸೇನಾನಾಯಕ ಹೇಳಿದ, "ಸದ್ಯ ಕಳಿಂಗದ ಮೇಲೆ ದಾಳಿ ಮಾಡಲು ಬರುತ್ತಿದ್ದಾನೆ."

"ಅವನೇನು ಮಾಡುವನು?" ಆಶ್ಚರ್ಯಚಕಿತಳಾಗಿ ಕೇಳಿದಳು ಅಮಿತಾ.

"ರಾಜೇಶ್ವರಿ ಆತ ಪರಮ ನೀಚ. ಮಹಾರಾಣಿಯ ಪ್ರಜೆಗಳನ್ನು ಸುಲಿದು ಕೊಂದು ಹಾಕುವನು."

"ಹಾಗಾದರೆ ಆತನನ್ನು ಕಟ್ಟಿಹಾಕಿ" ಅಮಿತಾ ಆದೇಶಿಸಿದಳು. "ಸರಪಣಿಯಿಂದ ಕಟ್ಟಿ ಇಲ್ಲಿಗೆ ಎಳೆದುಕೊಂಡು ಬಾ. ನಾನು ಆತನನ್ನು ನೋಡಬೇಕು. ಆತ ಇಲ್ಲಿಗೆ ಬರುವನೇ?"

"ಭಗವಂತ ಬಲ್ಲ. ಆದರೆ ಇಲ್ಲಿಗೆ ಬಂದರೆ ಮಹಾರಾಣಿಯ ಪ್ರಜೆಗಳು ಆತನನ್ನು ಖಂಡಿತವಾಗಿ ಕೊಂದುಹಾಕುವರು."

"ಇಲ್ಲ ಇಲ್ಲ." ಅಮಿತಾ ತಲೆ ಅಲ್ಲಾಡಿಸಿದಳು, "ಯಾರನ್ನೂ ಕೊಲ್ಲಬಾರದು. ಹಾಗೆಂದು ಅಮ್ಮ ಹೇಳಿದ್ದಾಳೆ. ಆ ದುಷ್ಟ ಅಶೋಕ ಇಲ್ಲಿಗೆ ಬಂದರೆ ಸುಮ್ಮನೆ ಬಭ್ರುವಿನ ಸರಪಣಿಯಿಂದ ಕಟ್ಟಿಹಾಕಿ ಬಿಡೋಣ." ಸೇನಾನಾಯಕ ತಲೆಬಾಗಿ ಮೌನವಾಗಿದ್ದ.

## ೭

ಅಶೋಕನ ಅಪಾರಸೇನೆ ಕಳಿಂಗದ ಸೈನಿಕರನ್ನು ಪರಾಭವಗೊಳಿಸುತ್ತಲಿತ್ತು. ರಾಜಧಾನಿಯಿಂದ ಕೇವಲ ಎರಡು ಮೈಲಿ ಅಂತರದಲ್ಲಿ ಕಳಿಂಗದ ಸೈನ್ಯ ಠಾಣ್ಯ ಹೂಡಿತ್ತು. ಮಗಧ ಸೈನ್ಯದ ಬಲ ನಿಸ್ಸೀಮವಾಗಿತ್ತು. ಕಳಿಂಗದ ಸೇನಾಬಲ ಕ್ಷೀಣವಾಗುತ್ತಿದ್ದರೂ ನಗರದಿಂದ ಪ್ರತಿದಿನ ಸೈನಿಕರು ಅಧಿಕ ಸಂಖ್ಯೆಯಲ್ಲಿ ಆಗಮಿಸುತ್ತಿದ್ದರು.

ಕಳಿಂಗ ಸೇನೆಯ ಅವಶೇಷವಾದ ಮೂವತ್ತು ಸಾವಿರ ಸೈನಿಕರು ಪೂರ್ತಿ ಒಂದು ವಾರ

ಅವಿರತವಾಗಿ ಹಗಲಿರಳೂ ಹೋರಾಡಿದರು. ಅಸಂಖ್ಯಾತ ಮಾಗಧ ಸೈನಿಕರನ್ನು ಕೊಂದು ಹಾಕಿದರು. ಜತೆಗೆ ತಾವು ರಣರಂಗದಲ್ಲಿ ಜರ್ಜರಿತರಾದರು. ಮಹಾಸೇನಾಪತಿಯ ದೃಢ ನಿಲುವಿನಿಂದ ಅಶೋಕ ತವಕಪಟ್ಟ. ವಿಶ್ರಾಂತಿಗಾಗಿ ತನ್ನ ಯುದ್ಧದ ಆನೆಯ ಮೇಲಿಂದ ಕೆಳಗಿಳಿಯಲಾರೆನೆಂದು ಪ್ರತಿಜ್ಞೆ ಮಾಡಿದ.

ಕಳಿಂಗದ ದಂಡನಾಯಕ ಭದ್ರಕೀರ್ತಿ ಶರಣಾಗತನೂ ಆಗಲಿಲ್ಲ, ಹಿಮ್ಮೆಟ್ಟಲೂ ಇಲ್ಲ. ಆನೆಸವಾರಿಯನ್ನು ತ್ಯಜಿಸಿ ಸಮರದಲ್ಲಿ ತ್ವರಿತ ಚಲನವಲನಕ್ಕಾಗಿ ಅಶ್ವಾರೂಢನಾದ. ಹಗಲಿರುಳು ಲೆಕ್ಕಿಸದೆ ಹೋರಾಡಿದ. ಕೊನೆಗೊಂದು ದಿನ ಸೂರ್ಯಾಸ್ತವಾದ ನಂತರ ಸ್ಮೃತಿ ತಪ್ಪಿ ಕುದುರೆಯ ಮೇಲಿಂದ ಕುಸಿದು ಕೆಳಗೆ ಬಿದ್ದ. ಕೂಡಲೇ ಮಾಗಧದ ಸೇನಾಪತಿ ಆತನನ್ನು ಬಂಧಿಸಲು ಆದೇಶಿಸಿದ.

ಆರ್ಯ ಭದ್ರಕೀರ್ತಿಗೆ ಸ್ಮೃತಿ ಮರಳಿದಾಗ ತಾನು ಮಗಧಸೇನೆಯ ಮಧ್ಯೆ ಇರುವುದರ ಅರಿವಾಯಿತು. ಭಾರಿ ಆನೆಯ ಮೇಲೆ ಚಿನ್ನದ ಕವಚ, ಶಿರಸ್ತ್ರಾಣ ಧರಿಸಿದ ಸಮ್ರಾಟ ಅಶೋಕ ಅಂಬಾರಿಯಲ್ಲಿ ಕುಳಿತು ನೆಟ್ಟ ದೃಷ್ಟಿಯಿಂದ ಭದ್ರಕೀರ್ತಿಯನ್ನು ದಿಟ್ಟಿಸುತ್ತ ನುಡಿದ:

"ಕಳಿಂಗದ ಸೇನಾಪತಿ ಕಳಿಂಗದ ಸ್ತ್ರೀ ಸಾಮ್ರಾಜ್ಯವನ್ನು ಬಲು ಧೈರ್ಯಶೌರ್ಯದಿಂದ ರಕ್ಷಿಸಿದ್ದೀರಿ. ಆದರೆ ಸಮ್ರಾಟನ ಪ್ರಭುತ್ವವನ್ನು ತಿರಸ್ಕರಿಸಿದ್ದಕ್ಕಾಗಿ ಕಳಿಂಗಕ್ಕೆ ಶಾಸ್ತಿಯಾಗಿದೆ. ಕಳಿಂಗವು ಸಮ್ರಾಟನ ಪ್ರಭುತ್ವವನ್ನು ಸ್ವೀಕರಿಸಿದರೆ ನಾವು ಕಳಿಂಗದ ಮಹಾರಾಣಿ, ರಾಜ್ಯ ಹಾಗೂ ಪ್ರಜೆಗಳಿಗೆ ಸಂರಕ್ಷಣೆ ಆಶ್ರಯ ನೀಡುವ ವಾಗ್ದಾನ ಮಾಡುವೆವು."

ಕಳಿಂಗದ ಸೇನಾಪತಿ ತಲೆಯೆತ್ತಿ ಉತ್ತರಿಸಿದ: "ಕಳಿಂಗದ ಸೇನಾಪತಿ ಪರಾಭವಗೊಂಡಿಲ್ಲ, ರಣರಂಗದಲ್ಲಿ ಗಾಯಗೊಂಡಿದ್ದಾನಷ್ಟೆ. ಸಮರದಲ್ಲಿ ಆತ ಮಡಿದರೂ ಪರಾಜಿತನಾಗಲಾರ. ಅಜೇಯ ಕಳಿಂಗದ ರಾಜರಾಜೇಶ್ವರಿಗೆ ದೈವೀ ಸಂರಕ್ಷಣೆ ಉಂಟು. ಕಳಿಂಗ ದೇಶದ ದೇಹ ವಿಚ್ಛಿನ್ನವಾದರೂ ಅದರ ಆತ್ಮ ಸ್ವಾತಂತ್ರ್ಯ ರಕ್ಷಣೆ ಮಾಡುವದು. ಕಳಿಂಗದ ಜನತೆ ಪ್ರಜಾ ಹಿಂಸಕನಿಗೆ ತಲೆಬಾಗಲಾರದು."

ಸಮ್ರಾಟ ಅಶೋಕ ಮುಖ ಹೊರಳಿಸಿ ತನ್ನ ಸೇನಾಪತಿಗೆ ಆದೇಶಿಸಿದ: "ಮಹಾವೀರ, ಕಳಿಂಗಪಟ್ಟಣವನ್ನು ವಶಪಡಿಸಿಕೋ. ಅರಮನೆಯನ್ನು ಸುತ್ತುಗಟ್ಟಿ ಕಳಿಂಗದ ಮಹಾರಾಣಿಯನ್ನು ಸೆರೆ ಹಿಡಿ."

ಅಂದು ರಾತ್ರಿ ಕಳಿಂಗ ಪಟ್ಟಣಕ್ಕೆ ಭಾರಿ ಆಪತ್ತು ಬಂದೊದಗಿತ್ತು. ಆಚಾರ್ಯ ಸುಕಂಠ ಮಹಾರಾಣಿಯನ್ನು ಹೇಗೆ ರಕ್ಷಿಸಬೇಕೆಂದು ಚಿಂತಾಕ್ರಾಂತನಾದ. ಮರುದಿನ ನಗರದಲ್ಲಿ ವಿಪರೀತ ಕೋಲಾಹಲ, ಭಯಂಕರ ತುಮುಲ ವೆದ್ದಿತು. ಮಾಗಧದ ಸೈನ್ಯ ಮುನ್ನಡೆಯುತ್ತ ನಗರದಲ್ಲಿ ಪ್ರವೇಶಮಾಡಿತು. ಎಲ್ಲೆಡೆಗೂ ಜನರ ಸುಲಿಗೆ, ಮನೆ ಮಾರು ಸುಡುವದು ನಡೆಯಿತು.

ಮಹಾರಾಣಿ ಅಮಿತಾ ಅರಮನೆಯ ಉಪ್ಪರಿಗೆಯ ಮೇಲೆ ಉಯ್ಯಾಲೆಯಲ್ಲಿ ತೂಗಾಡುತ್ತ ಹಾಡು ಹೇಳುತ್ತಿದ್ದಳು. ಒಮ್ಮೆಲೆ ಆಕಾಶದಲ್ಲಿ ಧೂಮದ ದಟ್ಟ ಮೋಡಗಳನ್ನೂ ಅಗ್ನಿಜ್ವಾಲೆಗಳನ್ನೂ ಕಂಡಳು. ಜನರ ಕಿರುಚಾಟ, ದಿಕ್ಕುಪಾಲಾಗಿ ಓಡುವುದನ್ನು ಕಂಡು ವಿಸ್ಮಯಗೊಂಡಳು. ಸೈನಿಕರು ಅವರನ್ನು ಬೆನ್ನಟ್ಟಿ ಹೊಡೆದು ಬಡಿಯುವದನ್ನು ನೋಡಿ. "ಅಲ್ಲಿ ಏನು ನಡೆದಿದೆ ಯಾರು ಜನರನ್ನು ಹೊಡೆದು ಬೆದರಿಸುತ್ತಿರುವದು?" ಎಂದು ಗಾಬರಿಯಿಂದ ಅರಚಿದಳು.

ಉದ್ದಾಲ ಉತ್ತರಿಸಿದ: "ಮಹಾರಾಣಿ ದುಷ್ಟ ಅಶೋಕ ಬಂದಿರುವ. ಜನರನ್ನು ಹೊಡೆದು ಬಡಿದು ಸುಲಿಗೆ ಮಾಡುತ್ತಿದ್ದಾನೆ. ಆತ ನಿರ್ದಯಿ ; ಮಕ್ಕಳನ್ನು ಕೊಲ್ಲುತ್ತಿದ್ದಾನೆ. ನಾವು ಅದನಿಂದ ಪಾರಾಗಬೇಕು."

ಅಮಿತಾ ಅಲ್ಲಿಂದ ಕದಲಲು ಒಪ್ಪಲಿಲ್ಲ. "ಅವನೇಕೆ ಲೂಟಿ ಮಾಡುವನು? ಯಾಕೆ ಅದರನ್ನು ಹೊಡೆಯುವನು? ಆ ದುಷ್ಟನನ್ನು ಕಟ್ಟಿ ಹಾಕಿ!" ಎಂದು ಗಟ್ಟಿಯಾಗಿ ಕೂಗಿದಳು.

ಅಷ್ಟರಲ್ಲಿ ಶತ್ರು ಸೈನಿಕರು ಅರಮನೆಯ

ಮಹಾದ್ವಾರದಲ್ಲಿದ್ದರು. ಅಮಿತಾಳನ್ನು ಅಲ್ಲಿಂದ ಪಾರು ಮಾಡಬೇಕೆಂದು ಎಷ್ಟು ಪ್ರಯತ್ನಿಸಿದರೂ, ಆಕೆ ಮೊಂಡುತನದಿಂದ ಅಲ್ಲಿಯೇ ನಿಂತು ಹೇಳುತ್ತಿದ್ದಳು: "ಇಲ್ಲ, ಇಲ್ಲ, ನಾನು ಕ್ರೂರ ಅಶೋಕನನ್ನು ಕಟ್ಟಿ ಹಾಕುವೆ. ಹಿತಾ, ಬಭ್ರುವಿನ ಸರಪಣಿ ತಾ ಇಲ್ಲಿ. ನೀಚ ಅಶೋಕನನ್ನು ನಾನು ಕಟ್ಟಿಹಾಕುವೆ."

ಅಂತಃಪುರದ ಪ್ರವೇಶದ್ವಾರದಲ್ಲಿ ವಿರೋಧಿ ಸೈನ್ಯಗಳ ಘೋರ ಸಂಘರ್ಷ ನಡೆದಿತ್ತು. ಬಹು ಬೇಗನೆ ಶತ್ರು ಸೈನ್ಯದ ಮೇಲುಗೈಯಾಗಿ ಅದು ಒಳ ನುಗ್ಗಿತು. ಮಗಧ ಸೇನಾಪತಿ ಗೋಪಾಲ ಒಳಗೆ ಪ್ರವೇಶಿಸುತ್ತಿದ್ದಂತೆ, ಅರಮನೆಯ ಮಹಡಿಯಿಂದ ಯಾರದೋ ಕೂಗು ಕೇಳಿದ: "ಮಹಾರಾಣಿ ಸರಪಣಿಯಿಂದ ಅಶೋಕನನ್ನು ಬಂಧಿಸುವಳು!" ತಕ್ಷಣ ತಡೆದು ಜಾಗೃತನಾಗಿ, ಆಲಿಸಿದ. ಮತ್ತೊಮ್ಮೆ ಅದೇ ಕೂಗು ಕೇಳಿಸಿತು.

ಅಷ್ಟರಲ್ಲಿ ಅಶೋಕನ ಆನೆ ಅರಮನೆಯ ದ್ವಾರದಲ್ಲಿ ಆಗಮಿಸಿತ್ತು. ಎರಡೂ ಪಕ್ಕಕ್ಕೆ ಸಶಸ್ತ್ರ ಸಾಮಂತ ಸೈನಿಕರಿದ್ದರು. ರಾಜಪ್ರಾಸಾದವನ್ನು ಪ್ರವೇಶಿಸಲು ಅಶೋಕ ಆನೆಯಿಂದು ಕೆಳಗಿಳಿಯಲು ಅಣಿಯಾಗಿದ್ದ.

ಸೇನಾಪತಿ ಗೋಪಾಲ ಅಶೋಕನ ಆನೆಯನ್ನು ಸಮೀಪಿಸುತ್ತ ನಮಸ್ಕರಿಸಿದ. ಆತನಿಗೆ ತಡೆಯಲು ಸಂಜ್ಞೆ ಮಾಡಿ, ಅನುಮಾನಿಸುತ್ತ ನುಡಿದ: "ಮಹಾರಾಜರು ಕ್ಷಮಿಸಬೇಕು. ಅರಮನೆಯಲ್ಲಿ ಅಪಾಯ ಉಂಟು. ದಯವಿಟ್ಟು ತಡೆಯಬೇಕು ಪ್ರಭೂ..."

ಅಶೋಕ ಹುಬ್ಬು ಗಂಟಿಕ್ಕಿ ಕ್ರೋಧದಿಂದ ಕೇಳಿದ: "ಅಜೇಯ ಸಮ್ರಾಟ ಅಶೋಕನಿಗೆ ಅಪಾಯವೇ?"

ಗಾಬರಿಗೊಂಡ ಸೇನಾಪತಿ ಸಂಕೋಚದಿಂದ ಹೇಳಿದ: "ಮಹಿಮಾಮಯ ಸಮ್ರಾಟ ಕಳಿಂಗದ ಉನ್ಮತ್ತ ರಾಣಿ ಮಹಾರಾಜರನ್ನು ಸರಪಳಿಯಿಂದ ಬಂಧಿಸುವಳಂತೆ."

ಅಶೋಕ ಅಣಕಿಸುವ ಧ್ವನಿಯಲ್ಲಿ ಕೇಳಿದ: "ಕಳಿಂಗದ ರಾಣಿಗೆ ಇನ್ನೂ ಅಹಂಕಾರ ಉಳಿದಿದೆಯೇ? ಆ ಉದ್ಧಟ ರಾಣಿಯ ದರ್ಪವನ್ನು ವಿಜಯೀ ಅಶೋಕ ತನ್ನ ಪದತಲದಲ್ಲಿ ಮೆಟ್ಟಿಬಿಡುವನು," ಅನ್ನುತ್ತ ಆನೆಯಿಂದ ಕೆಳಗಿಳಿಯಹತ್ತಿದ.

ಕಳವಳಗೊಂಡ ಸೇನಾಪತಿ ಮತ್ತೆ ಮೊರೆಯಿಟ್ಟ: "ಮಹಿಮಾಮಯ ಸಮ್ರಾಟ, ಕಳಿಂಗದ ಶಸ್ತ್ರಶಕ್ತಿ ಮಣ್ಣುಗೂಡಿದ್ದರೂ, ಅಲ್ಲಿ ಏನೋ ಪ್ರೇತ ಶಕ್ತಿ, ತಂತ್ರ ಶಕ್ತಿ..."

ಅಶೋಕ ಹಲ್ಲು ಗಟಗರೆದು ಅಂದ: "ಅಜೇಯ ಅಶೋಕನಿಗೆ ಯಾವ ಭಯವಿಲ್ಲ. ಯಾವ ಪ್ರಾಣಿ, ಪ್ರೇತ, ತಂತ್ರ ಮಂತ್ರದ ಭೀತಿಯೂ ಇಲ್ಲ. ಹೂಂ, ಮಾರ್ಗ ತೋರಿಸು," ಎಂದು ಆಜ್ಞಾಪಿಸಿದ.

ಅರಮನೆಯನ್ನು ಪ್ರವೇಶಿಸುತ್ತಿದ್ದಂತೆ ಅಶೋಕನ ಸೈನ್ಯ ಕೊಂಬು ಕಹಳೆ ಊದುತ್ತ, ಭೇರಿ ನಗಾರಿ ಬಾರಿಸುತ್ತ ಆತನ ಜಯಘೋಷ ಮಾಡಿತು. ಅಶೋಕ ತನ್ನ ಖಡ್ಗ ಹಿರಿದು, ಅಂಗರಕ್ಷಕರು ಸಾಮಂತರ ಸಮೇತನಾಗಿ ಅಂತಃಪುರದತ್ತ ಸಾಗಿದ.

## ೮

ಮಹಾರಾಣಿ ಅಮಿತಾ ಒಬ್ಬಳನ್ನು ಬಿಟ್ಟು ಎಲ್ಲರೂ ಸ್ತಂಭೀಭೂತರಾಗಿದ್ದರು. ನಾಯಿಯ ಸರಪಳಿ ಹಿಡಿದುಕೊಂಡು ಆಕೆ ಅಂತಃಪುರದ ದ್ವಾರದತ್ತ ಓಡುತ್ತ ಬರುತ್ತಿದ್ದಳು. ಅವಳ ಹಿಂದೆ ಬಭ್ರು ತನ್ನ ಪುಟ್ಟ ಒಡತಿಯನ್ನು ಸಂರಕ್ಷಿಸುವ ದೃಢ ನಿಶ್ಚಯದಿಂದ ಅವಳ ಬೆನ್ನು ಹತ್ತಿತ್ತು. ಅಮಿತಾ ನಿರ್ಭೀತಿಯಿಂದ ಓಡುತ್ತಿದ್ದಳು.

ಅಂತಃಪುರದ ಒಳಾಂಗಣದಲ್ಲಿ ಅಶೋಕ ಪ್ರವೇಶಿಸಿದ. ಮೊದಲು ಕೆಲ ನಿಮಿಷ ಆತ ಆ ಚಿಕ್ಕ ಬಾಲೆಯನ್ನು ನೋಡಿರಲಿಲ್ಲ. ಆತ ಮುಂದೆ ನಡೆದಂತೆ ಒಮ್ಮೆಲೆ ಆ ನೀರವತೆಯನ್ನು ಓರ್ವ ಮಗುವಿನ ಗಟ್ಟಿಯಾದ ಸ್ವರ ಭೇದಿಸಿತು:

"ಅರೇ, ಯಾರು ನೀನು?"

ಅಶೋಕ ಆ ಕೂಗು ಕೇಳಿದ. ತಕ್ಷಣ ತಡೆದು ಅತ್ಯಾಶ್ಚರ್ಯದಿಂದ ತಟಸ್ಥನಾಗಿ ನಿಂತ. ತನ್ನ

ನೋಟದೆತ್ತರವಷ್ಟೇ ಇರದ ಆ ಪುಟ್ಟ ಹುಡುಗಿ ಯನ್ನು ನಿಷ್ಠುರವಾಗಿ ನೋಡಿದ ಗೋಪಾಲನ ತೀಕ್ಷ್ಣ ದೃಷ್ಟಿಗೆ ಅಮಿತಾ ಬೆದರದೆ ಕೇಳಿದಳು: "ಯಾರು ನೀನು? ನೀನೆಷ್ಟು ಸುಂದರನಿರುವಿ! ನಿನ್ನ ಖಡ್ಗ, ವಸ್ತ್ರಗಳು ಎಷ್ಟು ಸುಂದರವಾಗಿವೆ ಬಾ ನನ್ನ ಜೊತೆ. ದುಷ್ಟ ಅಶೋಕನನ್ನು ಬಂಧಿಸೋಣ," ಎಂದು ತನ್ನ ಕೈಯಲ್ಲಿಯ ನಾಯಿಯ ಸರಪಳಿಯನ್ನು ಆತನಿಗೆ ತೋರಿಸಿದಳು.

ಅಮಿತಾಳ ಮಾತು ಕೇಳಿ ಜನರೆಲ್ಲ ಕಣ್ಣು ಮುಚ್ಚಿ ಥರಥರನೆ ನಡುಗಿದರು. ಅಶೋಕ ಮೌನವಾಗಿ ನಿಶ್ಚಲನಾಗಿ ಆಕೆಯನ್ನು ಸುಮ್ಮನೆ ದಿಟ್ಟಿಸಿದ. ಆತನ ಮೌನ ಮುದ್ರೆ ಕಂಡು, ತನ್ನ ಮಾತನ್ನು ಆತ ಉಪೇಕ್ಷಿಸುವನೆಂದು ತಿಳಿದ ಅಮಿತಾ ಹೇಳಿದಳು: "ನೀನು ನನ್ನ ಆಜ್ಞೆಯನ್ನು ಪಾಲಿಸುವದಿಲ್ಲವೇ? ನಾನು ಕಳಿಂಗದ ರಾಣಿ. ಎಲ್ಲರೂ ನನ್ನ ಆದೇಶ ಮನ್ನಿಸಬೇಕು. ನಾನು ರಾಜ ರಾಜೇಶ್ವರಿ, ಪ್ರಜಾಮಾತೆ. ನನ್ನೊಡನೆ ಬಾ. ಅಶೋಕನನ್ನು ಸರಪಳಿಯಿಂದ ಕಟ್ಟಿ ಬಿಡೋಣ."

ಗೋಪಾಲ ವಿಸ್ಮಯದಲ್ಲಿ, ತೈಮಾರೆತು ಉಚ್ಚರಿಸಿದ: "ನೀನು... ನೀನು... ಕಳಿಂಗದ ರಾಣಿ?"

"ಹೌದು," ಅಮಿತಾ ಗೋಣು ಹಾಕಿದಳು. "ನಾನು ಕಳಿಂಗದ ರಾಣಿ. ನನ್ನೊಡನೆ ಬಾ. ನೀಚ ಅಶೋಕನನ್ನು ಕಟ್ಟಿ ಹಾಕೋಣ. ಆತ ಜನರನ್ನು ಬೆನರಿಸಿ, ಹೊಡೆದು, ಬಡಿದು, ಸುಲಿಗೆ ಮಾಡುತ್ತಾನೆ."

ವಿಜಯಿ ಸಮ್ರಾಟ ಕೆಲ ನಿಮಿಷ ಕಾಷ್ಠದಂತೆ ಸ್ತಬ್ಧನಾಗಿ ನಿಂತಿದ್ದ. ಆತ ನಿಶ್ಚಲನಾಗಿರುವದನ್ನು ನೋಡಿ, ಅಮಿತಾ ಎರಡು ಹೆಜ್ಜೆ ಮುಂದಿಟ್ಟು ಮತ್ತೆ ಕೇಳಿದಳು, "ಯಾರಯ್ಯ ನೀನು?"

ಮಂತ್ರಮುಗ್ಧನಾದವನಂತೆ ಅಶೋಕ ಉತ್ತರಿಸಿದ: "ನಾನು ಸಮ್ರಾಟ ಅಶೋಕ."

ಅಮಿತಾಳ ಬಾಲಿಶ ನೇತ್ರಗಳು ಆಶ್ಚರ್ಯದಿಂದ ಅಗಲವಾದವು. "ನೀನು...ಅಶೋಕ? ಆದರೆ ನೀನೆಷ್ಟು ಸುಂದರನಿರುವಿ! ನೀನು ಜನರ ಸುಲಿಗೆ ಏಕೆ ಮಾಡುವಿ? ಅವರನ್ನು ಬೆದರಿಸಿ, ಬಡಿಯುವಿಯೇಕೆ? ನಿನಗೇನು ಬೇಕು?"

ಅಶೋಕ ನಿರುತ್ತರನಾಗಿ ನಿಂತಿದ್ದ. ಅಮಿತಾ ಆತನ ಹತ್ತಿರವೇ ಹೋಗಿ ಕೇಳಿದಳು: "ನಿನಗೆ ಅನ್ನವಿಲ್ಲವೇ? ವಸ್ತ್ರವಿಲ್ಲವೇ? ಆಟಿಕೆಗಳಿಲ್ಲವೇ? ನಿನಗೇನು ಬೇಕು ಹೇಳು. ನನ್ನ ಪತ್ತಿರ ಅವೆಲ್ಲವೂ ಇವೆ" ಎಂದು ಆತನ ಕೈ ಹಿಡಿದು ಎಳೆದುಕೊಂಡು ನಡೆದಳು. ಅಶೋಕ ಅವಳ ಹಿಂದೆ ಸರಪಳಿ ಬಿಗಿದ ಸಾಕಿದ ಪ್ರಾಣಿಯಂತೆ ನಡೆದ. ಒಳಾಂಗಣ ದಾಟಿ ಹಜಾರದಲ್ಲಿ ಹಾಯ್ದು ರಾಜಸಭಾಭವನಕ್ಕೆ ಕರೆದುಕೊಂಡು ಹೋದಳು. ಸಿಂಹಾಸನದ ಮೇಲೆಲ್ಲ ಅವಳ ಗೊಂಬೆ, ಆಟಿಕೆ ಸಾಮಾನುಗಳು ಬಿದ್ದಿದ್ದವು. ಗೋಡೆಗುಂಟ ಅಲ್ಲಲ್ಲಿ ಮಿಠಾಯಿಗಳ ತಟ್ಟೆಗಳಿದ್ದವು. ಅಮಿತಾ ತನ್ನ ಸಂಪತ್ತನ್ನೆಲ್ಲ ಕೈ ಮಾಡಿ ತೋರಿಸುತ್ತ, "ಇಲ್ಲಿ ಬೇಕಾದ್ದೆಲ್ಲ ಇದೆ. ನಿನಗೇನು ಬೇಕು ಹೇಳಿದರೆ ಸಾಕು, ನಾನೆಲ್ಲ ನಿನಗೆ ಕೊಡುವೆ. ಆದರೆ ನೀನು ಯಾರಿಂದಲೂ ಕದಿಯ ಕೂಡದು, ಯಾರನ್ನೂ ಬೆದರಿಸಬಾರದು, ಯಾರನ್ನೂ ಹೊಡೆಯಕೂಡದು. ಈಗ ಹೇಳು, ನಿನಗೇನು ಬೇಕು?"

ಅಜೇಯನಾದ ಅಶೋಕ ಅಮಿತಾಳ ಎದುರು ಅಸಹಾಯಕನಾಗಿ, ದಿಗ್ಭ್ರಾಂತಿಯಿಂದ ಸುಮ್ಮನೆ ನಿಂತಿದ್ದ. ಆತ ಸಮಸ್ತ ಪೃಥ್ವಿಯನ್ನೇ ವಶಪಡಿಸಿಕೊಳ್ಳುವ ಪ್ರತಿಜ್ಞೆ ಮಾಡಿದ್ದ. ಒಬ್ಬ ಎಳೆಯ ಮಗುವಿನ ಮಾತಿನಿಂದ ಸೋಲುವವನೇ? ತನ್ನ ವಿಜಯಯಾತ್ರೆಯನ್ನು ಅರ್ಧಕ್ಕೇ ತ್ಯಜಿಸಿ ಬಿಡಬೇಕೇ? ಇಲ್ಲ ಅದನ್ನು ಪೂರ್ತಿಗೊಳಿಸಲೇ ಬೇಕು.

ಈ ಮಂತ್ರ ಮಾಟ ನಿವಾರಿಸಲು ಅಶೋಕ ತಲೆ ಕೊಡವಿದ. ತುಸು ಹೊತ್ತು ವಿಚಾರಿಸಿ ಕಣ್ಣು ಮಿಟುಕಿಸಿ, "ನನಗೆ ಕಳಿಂಗದ ರಾಜ ಸಿಂಹಾಸನ ಬೇಕು," ಎಂದು ಕೈ ಮಾಡಿ ತೋರಿಸಿದ.

ಅಮಿತಾ ತಲೆ ಅಲ್ಲಾಡಿಸಿದಳು. "ಇಲ್ಲ, ಇಲ್ಲ. ನನ್ನ ಸಿಂಹಾಸನ ನೀನು ತೆಗೆದುಕೊಂಡು ಬಿಟ್ಟರೆ ನಾನು ಗೊಂಬೆಗಳ ಪಟ್ಟಾಭಿಷೇಕ ಸಮಾರಂಭ ಹೇಗೆ ನೆರವೇರಿಸಬೇಕು?" ಬಳಿಕ ಒಂದು ಕ್ಷಣ

ಯೋಚಿಸಿ, ಅಂದಳು: "ಸರಿ, ನೀನು ಬೇಡಿದ್ದು ತೆಗೆದುಕೋ, ನಿನಗೆ ರಾಜಸಿಂಹಾಸನವಿಲ್ಲವೆಂದು ಕಾಣುತ್ತೆ. ಸರಿ, ನನ್ನದು ತೆಗೆದುಕೋ. ನಾನು ಇನ್ನೊಂದು ಮಾಡಿಸಿಕೊಳ್ಳುವೆ."

ಸುತ್ತಲೂ ನೆರೆದ ಮಾಗಧದ ಸಾಮಂತರ ಮುಖ ಲಕ್ಷಣದಲ್ಲಿಯ ನಿಷ್ಠುರತೆ ಮತ್ತು ಕಳಿಂಗದ ಜನತೆಯ ಹೃದಯದಲ್ಲಿನ ಭೀತಿ ಮಾಯವಾಯಿತು. ಎಲ್ಲರ ಮುಖಗಳ ಮೇಲೆ ಕರುಣೆ, ಕೋಮಲಭಾವ ಮೂಡಿತು. ಅಶೋಕ ಮೂಕನಾಗಿದ್ದ. ಒಂದು ಲಕ್ಷಕ್ಕಿಂತ ಮೇಲ್ಪಟ್ಟ ಸೈನಿಕರ ರಕ್ತ ಹರಿಯುವದನ್ನು ಕಂಡರೂ, ಕಠೋರವಾದ ಕಬ್ಬಿಣ ಕವಚದಲ್ಲಿ ಮುಚ್ಚಿದ ಆತನ ಕಲ್ಲೆದೆ ಈಗ ಕರಗಿತು.

ಸಮ್ರಾಟ ಅಶೋಕ ತನ್ನ ಖಡ್ಗವನ್ನು ಭೂಮಿಯ ಮೇಲೆ ಇಟ್ಟು ತನ್ನ ಬಾಹುಗಳಲ್ಲಿ ಅಮಿತಾಳನ್ನು ಎತ್ತಿಕೊಂಡ. "ಕಳಿಂಗದ ರಾಣಿ, ಮಾಗಧದ ಅಜೇಯ ಸಮ್ರಾಟ ಅಶೋಕನ ಪರಾಭವವಾಯಿತು. ಈ ವಿಜಯ ನಿನ್ನದು. ದುಷ್ಟ ಅಶೋಕನನ್ನು ಕಟ್ಟಿ ಹಾಕುವುದಿಲ್ಲವೇ?" ಎಂದು ಅಮಿತಾಳ ಕೈಯಿಂದ ಸರಪಳಿ ತೆಗೆದುಕೊಂಡು ತನ್ನ ಕೊರಳಿಗೆ ಬಿಗಿದುಕೊಂಡ. "ಕಳಿಂಗದ ರಾಣಿ, ಸಮ್ರಾಟ ಅಶೋಕನ ಬಂಧನವಾಯಿತು. ಆತ ನಿನ್ನ ಬಂದಿ; ಈಗ ನಿನಗೇನು ಬೇಕು ಹೇಳು?" ಎಂದ.

ಅಮಿತಾ ಗೆಲುವಿನಿಂದ ನುಡಿದಳು, "ನನಗೇನೂ ಬೇಡ. ನನ್ನ ಬಳಿ ಎಲ್ಲವೂ ಇದೆ."

ಅಶೋಕ ಕ್ಷಣಮಾತ್ರ ವಿಚಾರಿಸಿ ಅಂದ: "ಮಹಾರಾಣಿಯ ಮಾತು ತುಂಬಾ ಸತ್ಯ. ಆದರೂ ತನ್ನ ಬಂದಿಯಾಗಿರುವ ಅಶೋಕನಿಗೆ ಏನಾದರೂ ಆಜ್ಞಾಪಿಸಬೇಕು."

ಅಮಿತಾ ಉತ್ತರಿಸಿದಳು: "ನೀನು ಯಾರಿಂದಲೂ ಅಪಹರಿಸಕೂಡದು, ಯಾರನ್ನೂ ಬೆದರಿಸಬಾರದು, ಯಾರನ್ನೂ ಹೊಡೆಯಬಾರದು ಇದು ನನ್ನ ಆಜ್ಞೆ."

ಅಶೋಕ ತಲೆ ಬಾಗಿ ಸಮ್ಮತಿಸಿದ: "ಇಗೋ, ಸಮ್ರಾಟ ಅಶೋಕ ಶಪಥ ಮಾಡುವನು: ಆತ ಯಾರಿಗೂ ಹಾನಿ ಮಾಡುವುದಿಲ್ಲ. ಯುದ್ಧ, ಹಿಂಸಾತ್ಮಕ ಕೃತ್ಯಗಳಿಂದ ವಿಜಯವನ್ನು ಅಪೇಕ್ಷಿಸುವುದಿಲ್ಲ. ಕಳಿಂಗದ ರಾಣಿಯಂತೆ ಆತ ನಿಃಸ್ವಾರ್ಥ ಪ್ರೇಮದಿಂದ ಜನರ ಹೃದಯಗಳನ್ನು ಜಯಿಸುವನು."

ಅಶೋಕ ಕಳಿಂಗಕ್ಕೆ ಬಂದ ದಾರಿಯಿಂದಲೆ ಮಾಗಧಕ್ಕೆ ಹಿಂತಿರುಗಿದ. ಮಾರ್ಗದಲ್ಲಿ ಆತ ನೋಡಿದಲ್ಲೆಲ್ಲ ಮನುಷ್ಯರ ತಲೆ ಬುರುಡೆಗಳು, ಅಸ್ಥಿಪಂಜರಗಳು ಬಿದ್ದಿದ್ದವು. ಎಲ್ಲ ಗ್ರಾಮಗಳಲ್ಲಿ, ನಗರಗಳಲ್ಲಿ, ಸುಟ್ಟುಹೋಗಿ ನಾಶವಾದ ಮನೆಮಾರುಗಳು ಅರ್ಧ ಬೆಂದ ಶವಗಳಂತೆ ಕಾಣಿಸುತ್ತಿದ್ದವು. ಜೀವಂತ ಸ್ತ್ರೀಪುರುಷರನ್ನು ಕಂಡಾಗ ಅವರು ಭಯಾಕ್ರಾಂತರಾಗಿಯೂ ಶೋಕಗ್ರಸ್ತರಾಗಿಯೂ ಇದ್ದರು. ಹೆಣಗಳನ್ನು ಸುತ್ತುವರಿದು ಸುಲಿದುಕೊಳ್ಳುವ ನರಿಗಳು, ಕತ್ತೆ

OFFICE

"ಮನೇ ಮಠ ಹೋದ್ರೆ... ನಿಮಗೇನಂತೆ ಚಿಂತೆ... ಸರ್ಕಾರ ಕೋಡೋದಿಲ್ವೇ..."

ಕಿರುಬಗಳು, ರಣಹದ್ದುಗಳು ಮಾತ್ರ ಹರ್ಷ ಸಂಭ್ರಮದಲ್ಲಿದ್ದವು.

ಈ ದೃಶ್ಯಗಳನ್ನು ಕಾಣದಿರಲು ಅಶೋಕ ಆನೆ ಸವಾರಿ ಬಿಟ್ಟು, ಪರದೆಗಳಿಂದ ಮುಚ್ಚಿದ ಮೇಣೆಯಲ್ಲಿ ಪ್ರಯಾಣ ಮಾಡಿದ. ಆದರೂ ಕೊಳೆಯುತ್ತಿರುವ ಹೆಣಗಳ ದುರ್ನಾತ ಆತನ ಮೂಗಿಗಡರಿ ಹೊಟ್ಟೆಯನ್ನು ತೊಳೆಸಿದಂತಾಗುತ್ತಿತ್ತು. ತಲೆ ಸುತ್ತುತ್ತಿತ್ತು. ಮೇಣೆಯ ಹಿಂದೆ ಮುಂದೆ ಸೇವಕರು ಸುಗಂಧ ಪನ್ನೀರು ಸಿಂಪಡಿಸುತ್ತಿದ್ದರೂ, ಎಲ್ಲೆಡೆಗೂ ಆವರಿಸಿದ ಆ ದುರ್ಗಂಧದಿಂದ ಆತನಿಗೆ ಪಾರಾಗಲು ಶಕ್ಯವಾಗಲಿಲ್ಲ. ತನ್ನ ಅವಿವೇಕ, ವಿಧ್ವಂಸಕ ಕೃತ್ಯಗಳಿಂದ ಪರಿಣಮಿಸಿದ ಕಷ್ಟಕ್ಲೇಶಗಳಿಗಾಗಿ ಪಶ್ಚಾತ್ತಾಪಪಡುತ್ತ ದಾರಿಯುದ್ದಕ್ಕೂ ಸಾಗಿದ್ದ.

ಮಗಧದ ರಾಜಧಾನಿ ಪಾಟಲೀಪುತ್ರಕ್ಕೆ ಮರಳಿದೊಡನೆ; ಅಶೋಕ ಪ್ರತಿಜ್ಞೆ ಗೈದ. ಇನ್ನು ಮುಂದೆ ತಾನೆಂದೂ ಇತರರ ಆಸ್ತಿಪಾಸ್ತಿಗಳನ್ನು ಅಪಹರಿಸಲಾರೆ ಯಾರನ್ನೂ ಭರ್ತ್ಸನೆ ಮಾಡಲಾರೆ; ಯಾರಿಗೂ ಹಾನಿ ಮಾಡಲಾರೆ, ಎಂದು ಶಪಥ ಮಾಡಿದ. ಯುದ್ಧದ, ಹಿಂಸಾತ್ಮಕ ಕೃತ್ಯಗಳ ಚಿತಾವಣೆ ಮಾಡಿದ್ದಕ್ಕಾಗಿ ತನ್ನ ಪಶ್ಚಾತ್ತಾಪವನ್ನು ಸರ್ವತ್ರ ಪ್ರಕಟಿಸಿದ. ತನ್ನ ಪ್ರತಿಜ್ಞೆ ಅಮರವಾಗಿರಬೇಕೆಂದು ತನ್ನ ರಾಜ್ಯದಾದ್ಯಂತ ಕಲ್ಲು ಬಂಡೆಗಳ ಮೇಲೆಲ್ಲ ಬರೆಸಿದ.

ಆತನ ಶಿಲಾಲೇಖದ ನುಡಿ ಇಂತಿದೆ:

"ಕಳಿಂಗದ ವಿಜಯದ ನಂತರ, ದೇವಾನಾಂಪ್ರಿಯನಿಗೆ ಪಶ್ಚಾತ್ತಾಪವಾಯಿತು. ಸ್ವತಂತ್ರ ರಾಜ್ಯದ ಮೇಲೆ ದಾಳಿ ಮಾಡಿದ ಪರಿಣಾಮವಾಗಿ ಜನರ ಸಾವು, ಕೇಡು, ಕಗ್ಗೊಲೆ, ಸ್ಥಳ ಭ್ರಷ್ಟತೆಗಳಿಂದ ದುಃಖಿತನಾಗಿ ಆತನ ಮನಸ್ಸಿಗೆ ಭಾರಿ ಸಂತಾಪವಾಯಿತು. ಅನಂತರ ದೇವಾನಾಂಪ್ರಿಯನು ತುಂಬಾ ಆಸ್ಥೆಯಿಂದ ಧರ್ಮಸಾಧನೆಯಲ್ಲಿ ನಿರತನಾದ, ಧರ್ಮ ಬಯಸಿದ. ಧರ್ಮಪ್ರಚಾರ ಮಾಡಿದ. ಧರ್ಮವಿಜಯವೆ ಸರ್ವಶ್ರೇಷ್ಠ ವಿಜಯವೆಂದು ದೇವಾನಾಂಪ್ರಿಯನ ನಂಬಿಕೆ. ಧರ್ಮವಿಜಯವೇ ಹರ್ಷದಾಯಕ. ಧರ್ಮವಿಜಯವೇ ನಿಜವಾದ ವಿಜಯ. ಧರ್ಮದಲ್ಲಿನ ಆನಂದವೇ ಪರಮಾನಂದ. ಇಹಲೋಕದಲ್ಲಿ, ಪರಲೋಕದಲ್ಲಿ ಧರ್ಮವೇ ಅತ್ಯಮೂಲ್ಯ."



**ದಕ್ಷಿಣ ಅಮೇರಿಕದ ಕಾಡೊಂದರಲ್ಲಿ ಕೆಲ ವರ್ಷಗಳ ಹಿಂದೆ ಸ.ಜುವನ್ ಎಂಬ ಹತ್ತು ವರ್ಷದ ಬಾಲೆಯೊಬ್ಬಳಿಗೆ ಬಿಳಿ ಬೆಕ್ಕಿನ ಮರಿ ಸಿಕ್ಕಿತು. ಮನೆಗೆ ತಂದಳು. ಅರಣ್ಯ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಆಕೆಯ ತಂದೆ ಅದು ಬೆಕ್ಕಿನ ಮರಿ ಅಲ್ಲ– ಬಿಳಿ ಸಿಂಹದ ಮರಿ ಎಂದು ದೃಢಪಡಿಸಿಕೊಂಡು ಪ್ರಾಣಿಸಂಗ್ರಹಾಲಯಕ್ಕೆ ಸಾಗಿಸಿದ.**

•

**ವಾಷಿಂಗ್ಟನ್ನಿನ ಡೊರೊತಿ ಸ್ಟ್ರೇಟ್ ಎಂಬ ನಾಲ್ಕು ವರ್ಷದ ಬಾಲೆ ಬರೆದ ಕಾದಂಬರಿಯೊಂದು ಪ್ರಕಟವಾದ ತಿಂಗಳಲ್ಲೇ ಮರುಮುದ್ರಣ ಗೊಂಡಿತು.**

**–ಎಂ. ವಿ. ಸುಬ್ಬರಾವ್**

Edited, printed & published by M. N. Mahishi on behalf of the Receiver (Moveables), Loka Shikshana Trust, Samyukta Karnataka Press, Koppikar Road, Hubli-580 020. Rept: Bombay: V. Satyamurthy Phone: 5510592. Calcutta: H. Majumdar Phone: 46-42331 Madras: K. A. Subramanian Phone: 842201; New Delhi: V. K. Chopra Phone: 7114785.

Registered with the Registrar of News papers for India under No. 3533/57

ಮಾತೆಯ ಆನಂದದ
ಅನುಭವ ಬೆಳೆಯುವ
ಕುಡಿಯಲ್ಲೆ

ಕಲಿಕೆಯ ಓನಾಮ. ಮಾತೆಯಾಗಲಿರುವ ಮುದ್ದಿನ ಮುಗ್ಧೆ. ಅವಳಿಗೆ ಬೇಕು ಉತ್ತಮ ತಿನಿಸು.

ಕಲಿಯುವ ಕಾಲ ಇದು. ವೃದ್ಧಿಸುವ ವಯಸ್ಸು. ಮಧುರ–ಪುಷ್ಟಿಯ ನೆನಪಿನೊಂದಿಗೆ ಬೆಳವಣಿಗೆ. ಸವಿನೆನಪುಗಳು–ಬಿಸ್ಕತ್ತಿನಂತೆ.

ಕ್ವಾಲಿಟಿ ಗ್ಲೂಕೋಸ್ ಆರೋಗ್ಯ ಮತ್ತು ಪುಷ್ಟಿಗಾಗಿ ಅತ್ಯುತ್ತಮ ಸಾಮಗ್ರಿಗಳಿಂದ ಕೂಡಿದೆ. ಶುಚಿಯಾದ ತಯಾರಿಕೆ




ಕ್ವಾಲಿಟಿ –ಜೀವನದ ಅಭಿರುಚಿ.

**ಕ್ವಾಲಿಟೀಸ್**
**ಗ್ಲೂಕೋಸ್**

ಕ್ವಾಲಿಟಿ-ಶ್ರೇಷ್ಠ ಬಿಸ್ಕತ್ ತಯಾರಕರು.

ಕ್ವಾಲಿಟಿ
ಬಿಸ್ಕಟ್ಸ್ ಪ್ರೈ. ಲಿ.
ಬೆಂಗಳೂರು-560 039.

